ಸಾಹಸ ಭೀಮ ವಿಜಯಂ

ಗದಾಂತಯುದ್ಧ

Sāhasa Bheema Vijayam

साहस भीम विजयं

ಕವಿಚಕ್ರವರ್ತಿ ಕವಿರನ್ನ ವಿರಚಿತಂ

# ಸಾಹಸಭೀಮ ವಿಜಯಂ

(ಗದಾಯುದ್ಧಂ)

ಗದ್ಯಾನುವಾದ

ಆರ್. ವಿ. ಕುಲಕರ್ಣಿ




ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ
ಬೆಂಗಳೂರು- ೫೬೦೦೧೮

**Kavichakravarthi Kaviranna virachitam SAHASA BHEEMA VIJAYAM-** Original with prose rendering by : **R.V. Kulakarni** & published by **Kannada Sahitya Parishattu,** Pampa Mahakavi Road, Chamarajapete, Bengaluru - 560018 Pages : vi + 202 Price : **Rs.110=00 ; 2017**

**ಮರುಮುದ್ರಣದ ವರ್ಷ** : ೨೦೧೭
**ಪ್ರತಿಗಳು** : ೨೦೦೦
**ಬೆಲೆ** : ಒಂದು ನೂರ ಹತ್ತು ರೂಪಾಯಿಗಳು



**ಪ್ರಕಟಣಾ ಸಮಿತಿ**

**ಡಾ. ಮನು ಬಳಿಗಾರ್**
ಅಧ್ಯಕ್ಷರು

**ಸದಸ್ಯರು**

ಶ್ರೀ ಜರಗನಹಳ್ಳಿ ಶಿವಶಂಕರ್
ಡಾ. ಮೂಡ್ನಾಕೂಡು ಚಿನ್ನಸ್ವಾಮಿ
ಪ್ರೊ. ಧರಣೇಂದ್ರ ಕುರಕುರಿ
ಪ್ರೊ. ಎಂ. ಕೃಷ್ಣೇಗೌಡ
ಶ್ರೀ ರಂಜಾನ್ ದರ್ಗಾ
ಡಾ. ಹನುಮಾಕ್ಷಿ ಗೋಗಿ
ಡಾ. ಬಿ.ಕೆ. ರವಿ
ಡಾ. ತಮಿಳ್ ಸೆಲ್ವಿ
ಶ್ರೀ ವೀರಭದ್ರ ಸಿಂಪಿ
ಡಾ. ಎಚ್.ಎಲ್. ಪುಷ್ಪ
ಶ್ರೀ ಜೆ.ಎನ್. ಶಾಮರಾವ್
ಶ್ರೀ ಎ.ಆರ್. ಉಜ್ಜನಪ್ಪ
ಶ್ರೀ ಸಂಜಯ ಅಡಿಗ
ಶ್ರೀ ಪಾರಂಪಳ್ಳಿ ನರಸಿಂಹ ಐತಾಳ್

**ನಿರ್ದೇಶಕರು**
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

**ಪದಾಧಿಕಾರಿಗಳು**

ಡಾ. ರಾಜಶೇಖರ ಹತಗುಂದಿ
ಶ್ರೀ ವ.ಚ. ಚನ್ನೇಗೌಡ
ಶ್ರೀ ಪಿ. ಮಲ್ಲಿಕಾರ್ಜುನಪ್ಪ

ಶ್ರೀ ಬಿ.ಎನ್.ಪರಡ್ಡಿ,
ಸಂಯೋಜನಾಧಿಕಾರಿಗಳು

**ಸಮ್ಮೇಳನಾಧ್ಯಕ್ಷರು** – ನಾಡೋಜ ಡಾ. ಬರಗೂರು ರಾಮಚಂದ್ರಪ್ಪ
ಲ೨ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ

ಮುಖಪುಟ ಕಲಾವಿನ್ಯಾಸ : ಶ್ರೀ ಯು.ಟಿ. ಸುರೇಶ್

**ಮುದ್ರಣ : ಬಿ.ಎಂ.ಶ್ರೀ. ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು**
**ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು – ೧೮**

# ಅಧ್ಯಕ್ಷರ ನುಡಿ

ಕನ್ನಡ ಸಾಹಿತ್ಯ ಪರಿಷತ್ತು ನಾಡು, ನುಡಿ, ಸಂಸ್ಕೃತಿಗಳ ಸಂರಕ್ಷಣೆ ಮತ್ತು ಸಂವರ್ಧನೆಗಾಗಿ ಶ್ರಮಿಸುತ್ತಿರುವ ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆ. ೧೯೧೫ ರಿಂದ ಇಲ್ಲಿಯವರೆಗಿನ ಸುದೀರ್ಘ ಇತಿಹಾಸದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ತನ್ನ ಕಾರ್ಯಕ್ಷೇತ್ರವನ್ನು ವೈವಿಧ್ಯಮಯವಾಗಿ ವಿಸ್ತರಿಸಿಕೊಂಡಿದೆ. ಅದರಲ್ಲಿ ಕನ್ನಡಿಗರಿಗೆ ಅತ್ಯುತ್ತಮ ಸಾಹಿತ್ಯವನ್ನು ಕಾಲಕಾಲಕ್ಕೆ ಒದಗಿಸಿಕೊಡುವುದೂ ಪ್ರಮುಖವಾದುದಾಗಿದೆ. ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಒಳಗೊಳ್ಳುವಂಥ ಸಾವಿರಾರು ಕೃತಿಗಳನ್ನು ಪರಿಷತ್ತು ಹೊರತಂದಿದೆ.

ಸಾಹಿತ್ಯಾಭಿಮಾನಿಗಳ ವಾಚನಾಭಿರುಚಿಯನ್ನು ಬೆಳೆಸುವುದರ ಮೂಲಕ, ಅಕ್ಷರಜ್ಞಾನವನ್ನುಂಟುಮಾಡುವ ಘನ ಉದ್ದೇಶದಿಂದ ಸಾಹಿತ್ಯದ ವಿವಿಧ ಪ್ರಕಾರಗಳಿಗೆ ಸಂಬಂಧಿಸಿದ ಹಲವು ಗ್ರಂಥಗಳನ್ನು ಪರಿಷತ್ತು ಪ್ರಕಟಿಸಿದೆ. ಕನ್ನಡ ಭಾಷೆ, ಲಿಪಿ, ಸಂಸ್ಕೃತಿ ಕುರಿತ ಗ್ರಂಥಗಳು, ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳ ಗದ್ಯಾನುವಾದಗಳು, ಕವಿಕಾವ್ಯ ವಿಚಾರ ಸಂಕಿರಣಗಳ ಪ್ರಬಂಧಗಳು, ಜೀವನ ಚರಿತ್ರೆ, ಜಾನಪದ, ಶಾಸನ, ಆರೋಗ್ಯ, ವಿಜ್ಞಾನ, ಮನೋವಿಜ್ಞಾನದಂಥ ವಿಭಿನ್ನ ಪ್ರಕಾರಗಳ ಪುಸ್ತಕಗಳನ್ನು ಪ್ರಕಟಿಸುವಲ್ಲಿ ಆಸಕ್ತಿ ತೋರಿದೆ. ಬೇಡಿಕೆ ಹೆಚ್ಚಾಗಿರುವ ಮತ್ತು ಮಾರಾಟವಾದ ಪುಸ್ತಕಗಳನ್ನು ಮರುಮುದ್ರಣದ ಮೂಲಕ ಸಹೃದಯರಿಗೆ ತಲುಪಿಸುತ್ತಿದೆ.

**ಕವಿಚಕ್ರವರ್ತಿ ಕವಿರನ್ನ ವಿರಚಿತಂ ಸಾಹಸ ಭೀಮ ವಿಜಯಂ (ಗದಾಯುದ್ಧಂ)** ಪುಸ್ತಕವು ಕನ್ನಡ ಸಾಹಿತ್ಯ ಪರಿಷತ್ತಿನಿಂದ ಮರುಮುದ್ರಣವಾಗುತ್ತಿರುವುದು ಹೆಮ್ಮೆಯ ಸಂಗತಿ. ಈ ಪುಸ್ತಕವನ್ನು ಕನ್ನಡದ ಜನತೆ ಅತ್ಯಂತ ಆದರದಿಂದ ಸ್ವೀಕರಿಸುತ್ತಾರೆ ಎಂದು ನಂಬಿದ್ದೇನೆ.

ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದಿರುವ ಬಿ.ಎಂ.ಶ್ರೀ. ಅಚ್ಚುಕೂಟದ ಸಿಬ್ಬಂದಿ ವರ್ಗಕ್ಕೆ ಹಾಗೂ ಈ ಕಾರ್ಯದಲ್ಲಿ ಸಹಕಾರ ನೀಡಿದ ಎಲ್ಲರಿಗೂ ನನ್ನ ಕೃತಜ್ಞತೆಗಳು.

೦೧-೦೭-೨೦೧೭

ಡಾ. ಮನು ಬಳಿಗಾರ್
ಅಧ್ಯಕ್ಷರು

# ಅರಿಕೆ

ಅನುವಾದ ಮಾಲೆಯಲ್ಲಿ ಈ ಮೊದಲೆ ಬರಬೇಕಾಗಿದ್ದ 'ಗದಾಯುದ್ಧ'ವೆಂಬ ಈ ಕೃತಿ ಕಾರಣಾಂತರಗಳಿಂದ ತಡವಾಗಿ ಈಗ ಪ್ರಕಟವಾಗುತ್ತಿದೆ. ಕನ್ನಡದ ರತ್ನತ್ರಯರಲ್ಲಿ ಒಬ್ಬನೆಂದೂ, ಕವಿಚಕ್ರವರ್ತಿಯೆಂದೂ ಪರಿಗಣಿತನಾದ ಮಹಾಕವಿ ರನ್ನನ ಪ್ರಸಿದ್ಧಿ ನೆಲೆನಿಂತಿರುವುದು ಸಾಹಸಭೀಮವಿಜಯವೆಂಬ ಈ ಕೃತಿಯಿಂದಲೆ. ಈ ಚಂಪೂಕಾವ್ಯದ ಸಾರವತ್ತಾದ ವಿಮರ್ಶೆ ಮುನ್ನುಡಿಯಲ್ಲಿ ಬಂದಿರುವುದರಿಂದ, ಕವಿಪರಿಚಯವನ್ನು ಮಾತ್ರ ಇಲ್ಲಿ ಸೂಚಿಸಲಾಗುತ್ತದೆ.

**ರನ್ನಕವಿಯ ಜೀವನಚರಿತ್ರೆ :** ತನ್ನ 'ಅಜಿತಪುರಾಣ' ದಲ್ಲಿಯೂ 'ಗದಾಯುದ್ಧ' ದಲ್ಲಿಯೂ ಕವಿಯೆ ತಿಳಿಸಿರುವ ಅಂಶಗಳನ್ನು ಕ್ರೋಡೀಕರಿಸಿ ಅವನ ಜೀವನವನ್ನು ನಾವು ಚಿತ್ರಿಸಿಕೊಳ್ಳಬಹುದು. ಈಗ ಮುಧೋಳವೆಂದು ಹೆಸರಾದ ಮುದುವೊಳಲೆಂಬ ಊರಲ್ಲಿದ್ದ ಜಿನವಲ್ಲಭನೆಂದ ಬಳೆಗಾರನಿಗೆ ಮೂರನೆಯ ಮಗನಾಗಿ ಶಕ ೮೭೧ (ಕ್ರಿ.ಶ.೯೪೯) ನೆಯ ಸೌಮ್ಯ ಸಂವತ್ಸರದಲ್ಲಿ ರನ್ನಕವಿ ಹುಟ್ಟಿದನು. ತಾಯಿ ಅಬ್ಬಲಬ್ಬೆ, ರೇಚಣ ಮತ್ತು ಮಾರಮಯ್ಯ ಎಂಬುವರು ಅಣ್ಣಂದಿರು. ಬಾಲ್ಯದಿಂದಲೂ ಈತನು ವಿದ್ಯಾಭ್ಯಾಸದಲ್ಲಿ ತೊಡಗಿ, ತನ್ನ ಕವಿತ್ವ ಪಾಂಡಿತ್ಯಗಳೆರಡರಿಂದಲೂ ಉಭಯ ಕವಿಯೆಂದು ಪ್ರಸಿದ್ಧನಾಗಿ, ಸಾಮಂತರಾಜರಲ್ಲಿಯೂ, ಮಂಡಲೇಶ್ವರರಲ್ಲಿಯೂ ಆಶ್ರಯ ಪಡೆದು, ಕ್ರಮೇಣ ಅಭಿವೃದ್ಧಿ ಹೊಂದುತ್ತ, ಚಾಲುಕ್ಯ ಚಕ್ರವರ್ತಿ ತೈಲಪನ ಆಸ್ಥಾನದಲ್ಲಿ ಕವಿಚಕ್ರವರ್ತಿಯೆಂಬ ಬಿರುದನ್ನು ಪಡೆದನು. ಕವಿ ಕವಿರಾಜಶೇಖರ, ಕವಿಮುಖಚಂದ್ರ, ಕವಿರಾಜ, ಕವಿಜನಚೂಡಾರತ್ನ, ಕವಿತಿಲಕ, ಕವಿಚತುರ್ಮುಖ ಎಂಬ ಬಿರುದುಗಳನ್ನು ಹೇಳಿಕೊಂಡಿದ್ದಾನೆ. ಇವನಿಗೆ ಶಾಂತಿ ಮತ್ತು ಜಕ್ಕಿ ಎಂಬ ಇಬ್ಬರು ಹೆಂಡಿರು. ರಾಯ ಎಂಬ ಮಗನೂ ಅತ್ತಿಮಬ್ಬೆ ಎಂಬ ಮಗಳೂ ಇದ್ದರು. ದಾನ ಚಿಂತಾಮಣಿ ಅತ್ತಿಮಬ್ಬೆಯು ಇವನಿಂದ ಅಜಿತ ತೀರ್ಥಂಕರ ಪುರಾಣವನ್ನು ಬರೆಯಿಸಿದಳು. ಪರಶುರಾಮ ಚರಿತ ಹಾಗೂ ಚಕ್ರೇಶ್ವರ ಚರಿತವೆಂಬ ಇನ್ನೆರಡು ಕೃತಿಗಳನ್ನು ರಚಿಸಿದ್ದೇನೆಂದು ರನ್ನನು ಹೇಳಿದ್ದಾನೆ. ಆದರೆ ಅವೆರಡೂ ಈವರೆಗೆ ದೊರೆತಿಲ್ಲ. ನಿಘಂಟಿನಂತೆ ರಚಿತವಾದ ರನ್ನಕಂದವೆಂಬ ಅಸಮಗ್ರ ಕೃತಿಯೊಂದು ಲಭ್ಯವಾಗಿದೆ. ಅದು ಈ ರನ್ನ ಕವಿಯಿಂದಲೆ ರಚಿತವಾಯಿತೊ ಇಲ್ಲವೊ ಎಂಬುದು ನಿರ್ಣಯವಾಗಿಲ್ಲ.

**ಅನುವಾದವನ್ನು ಕುರಿತು**

'ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇಱ್ ಪರೀಕ್ಷಿ ಪಂಗೆಂಟೆರ್ದೆಯೇ ' ಎಂಬ ಕವಿಯ ಮಾತಂತೂ ಸರಿಯೇ. ಜೊತೆಗೆ ಕೃತಿಯಲ್ಲಿ ಅನೇಕ ಪಾಠಕ್ಲೇಶಗಳು ಹರಡಿಕೊಂಡಿರುವುದೂ ಉಂಟು. ಆದರೆ ನಾವು ಕೃತಿಪರೀಕ್ಷೆಗೆ ಕೈಯಿಟ್ಟಿಲ್ಲ; ಕೇವಲ ಅನುವಾದಕ್ಕೆ ಪ್ರಯತ್ನಿಸಿದ್ದೇವೆ. ಸ್ವತಃ ಹಳಗನ್ನಡದ ಪ್ರೌಢಕಾವ್ಯಗಳನ್ನು ಓದಿ ಅರ್ಥಮಾಡಿಕೊಳ್ಳಲಾರದ ಸಾಮಾನ್ಯ ಓದುಗನನ್ನು ದೃಷ್ಟಿಯಲ್ಲಿಟ್ಟುಕೊಂಡು ಅನುವಾದ ಮಾಡಲಾಗಿದೆಯೆಂಬುದನ್ನು ವಾಚಕರು ದಯವಿಟ್ಟು ಗಮನಿಸಬೇಕು. ಅನುವಾದದಲ್ಲಿ ಪ್ರತಿಪದಾರ್ಥವನ್ನು ಬಿಡಿಬಿಡಿಯಾಗಿ ಹೇಳಿರುವುದಿಲ್ಲವಾದುದರಿಂದ ಆಯ್ದ ಕೆಲವು ಶಬ್ದಗಳ

ಅರ್ಥವನ್ನು ಎರಡನೆಯ ಅನುಬಂಧದಲ್ಲಿ ಕೊಡಲಾಗಿದೆ. ಎಲ್ಲಿ ಅರ್ಥವಾಗಿಲ್ಲವೊ ಅಲ್ಲಿ ಪ್ರಾಂಜಲವಾಗಿ ಒಪ್ಪಿಕೊಂಡುದನ್ನು ವಾಚಕರು ಗಮನಿಸಬಹುದು.

**ಗ್ರಂಥಪಾಠ**

ವಿದ್ವಾನ್ ಕೆ.ವಿ. ಕೃಷ್ಣಭಟ್ಟರು ಸಂಪಾದಿಸಿದ 'ಗದಾಯುದ್ಧ' ಪ್ರತಿಯ ಪಾಠವನ್ನೆ ಸಮಗ್ರವಾಗಿ ಇಟ್ಟುಕೊಂಡು, ಒಂದೆರಡು ಪಾಠಾಂತರಗಳನ್ನು ಮಾತ್ರ ಅಳವಡಿಸಲಾಗಿದೆ. ಗ್ರಂಥಪಾಠದಲ್ಲಿ ಕೆಲವು ಪ್ರಕೃತಿ ಪ್ರಯೋಗಗಳೂ, ಶಿಥಿಲ ರೂಪಗಳೂ ಕಂಡುಬರುತ್ತವೆ. ಬರೆದವನು ವೈಯಾಕರಣನೆಂದು ಸ್ತುತನಾದ ಮಹಾಕವಿ; ತಿದ್ದಿದವನು 'ವನರುಹಭವ ನೆನಿಸಿದ ದಂಡನಾಯಕಂ ಕೇಶಿ' ಆದುದರಿಂದ ಈ ತಪ್ಪುಗಳು ಮೂಲದಲ್ಲಿ ಇದ್ದಿರಲಾರವು. ಒಂದು ಸಾವಿರ ವರ್ಷಗಳಲ್ಲಿ ಒಂದರಿಂದ ಇನ್ನೊಂದರಂತೆ ಎಷ್ಟು ಪ್ರತ್ಯಂತರಗಳಾದುವೊ ಏನೋ ! ನಮಗೆ ದೊರೆತ ಪ್ರತಿಗಳಲ್ಲಿರುವುವು ಲಿಪಿಕಾರದೋಷಗಳೆ ಆಗಿರಬಹುದು. ಅವುಗಳನ್ನು ಇದ್ದಂತೆ ಇಟ್ಟಿದ್ದೇವೆ. ಗ್ರಂಥಸಂಪಾದನ ಶಾಸ್ತ್ರಜ್ಞರು ವಿವೇಚನೆಯಿಂದ ನೆರವೇರಿಸಬೇಕಾದ ಕಾರ್ಯಕ್ಕೆ ಅನುವಾದಕರು ಹೋಗಬೇಕಾಗಿಲ್ಲ.

ಹತ್ತನೆಯ ಆಶ್ವಾಸದ ಕೊನೆಯ ಭಾಗ ಬಹಳ ಹಿಂದೆಯೇ ಲುಪ್ತವಾಗಿರಬೇಕು. ಲಿಪಿಕಾರರು ಪಂಪಭಾರತದ ಕೊನೆಯ ಆಶ್ವಾಸದ ಪದ್ಯಗಳನ್ನು ಎತ್ತಿಕೊಂಡು, ಆ ಭಾಗವನ್ನು ಪೂರ್ಣಗೊಳಿಸಲು ಯತ್ನಿಸಿದಂತೆ ತೋರುತ್ತದೆ. ಆ ಪ್ರಕ್ಷಿಪ್ತ ಭಾಗವನ್ನು ಬಿಟ್ಟು 'ದೆಸೆಯಂ ತೆಕ್ಕನೆ ತೀವೆ' ಎಂಬ ಪದ್ಯ ಹಾಗೂ ಅದರ ಕೆಳಗಿನ ವಚನವನ್ನು ಮಾತ್ರ ಇಲ್ಲಿ ಉಳಿಸಿಕೊಳ್ಳಲಾಗಿದೆ. ಕೃತಿರಚನೆಯ ಕಾಲಸೂಚಕವಾದ 'ಶಕಸಮಗತಿ' ಎಂಬ ವಿವಾದಾತ್ಮಕ ಪದ್ಯ ಎಲ್ಲಾ ಪ್ರತಿಗಳಲ್ಲಿ ದೊರೆಯುವುದಿಲ್ಲ. ಆದುದರಿಂದ ಪ್ರಕ್ಷಿಪ್ತವೆಂದು ಅದನ್ನೂ ಕೈಬಿಡಲಾಗಿದೆ.

ಈ ಮಹಾಕಾವ್ಯದ ಅನುವಾದಕಾರ್ಯವನ್ನು ನನಗೆ ವಹಿಸಿಕೊಟ್ಟು ಅದರ ನಿರ್ವಹಣೆಯಲ್ಲಿ ಸಕ್ರಿಯವಾದ ಆಸಕ್ತಿ ತೋರಿಸಿದುದಲ್ಲದೆ ಈ ಕೃತಿಗೆ ಬೆಲೆಯುಳ್ಳ ಮುನ್ನುಡಿ ಯನ್ನು ಬರೆದುಕೊಟ್ಟುದಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ. ಹಂಪ. ನಾಗರಾಜಯ್ಯನವರಿಗೆ ನಾನು ತುಂಬ ಋಣಿಯಾಗಿದ್ದೇನೆ. ಪಾಠನಿರ್ಣಯ ಹಾಗೂ ಅರ್ಥನಿರ್ಣಯದಲ್ಲಿ ದಿ. ತೀ.ನಂ. ಶ್ರೀಕಂಠಯ್ಯನವರ 'ಗದಾಯುದ್ಧ ಸಂಗ್ರಹ'ದ ಟಿಪ್ಪಣಿ ಗಳಿಂದ ಉಪಕೃತನಾಗಿದ್ದೇನೆ. ಈ ಗ್ರಂಥದ ೮-೧೫ಕ್ಕೆ ಶ್ರೀ ಪಿ. ಸುಬ್ರಾಯಭಟ್ಟರು ತಮ್ಮ 'ಗದಾಯುದ್ಧ ದರ್ಪಣ'ದಲ್ಲಿ ಸೂಚಿಸಿದ ತಿದ್ದುಪಡಿಯನ್ನು ಸ್ವಲ್ಪ ಮಾರ್ಪಡಿಸಿ ಕೃತಜ್ಞತಾಪೂರ್ವಕವಾಗಿ ಅಡಿಟಿಪ್ಪಣಿಯಲ್ಲಿ ಉದ್ಧರಿಸಿದ್ದೇನೆ. 'ಗದಾಯುದ್ಧ'ದ ಕೆಲವು ಪದ್ಯಗಳನ್ನು ಕುರಿತು ಬೇರೆ ಬೇರೆ ಗ್ರಂಥಗಳಲ್ಲಿ ಹಾಗೂ ಪತ್ರಿಕೆಗಳಲ್ಲಿ ವಿದ್ವಾಂಸರು ಮಂಡಿಸಿದ ವಿಚಾರಗಳನ್ನೂ ಗಮನಿಸಿದ್ದೇನೆಂದು ವಿನಯಪೂರ್ವಕವಾಗಿ ತಿಳಿಸ ಬಯಸುತ್ತೇನೆ.

ಅನುವಾದಸಹಿತವಾದ ಈ 'ಗದಾಯುದ್ಧ' ಕೃತಿ ವಾಚಕರಿಗೆ ಉಪಯುಕ್ತ ವಾದೀತೆಂದು ಹಾರೈಸುತ್ತೇನೆ.

ಬೆಂಗಳೂರು
೧-೬-೧೯೮೫

ಆರ್.ವಿ.ಕುಲಕರ್ಣಿ

# ಪ್ರಥಮಾಶ್ವಾಸಂ

ಶ್ರೀಯುವತೀಪ್ರಿಯಂ ಬಲಯುತಂ ಬಲಿದರ್ಪಹರಂ ಜಿತಾರಿದೈ ।
ತೇಯನನಂತಭೋಗನಿಲಯಂ ಪ್ರತಿಪಾಲಿತಧರ್ಮಚಕ್ರನ ॥
ಬ್ಜಾಯತನೇತ್ರನಾದಿಪುರುಷಂ ಪುರುಷೋತ್ತಮನೀ ಚಳುಕ್ಯನಾ ।
ರಾಯಣದೇವನೀಗೆಮಗೆ ಮಂಗಳಕಾರಣಮುತ್ಸವಂಗಳಂ ॥೧॥

ಆರಂಭದ ಮಂಗಳ ಪದ್ಯಗಳಲ್ಲಿ ಕವಿಯು ವಿಷ್ಣು, ರುದ್ರ, ಬ್ರಹ್ಮ ಸೂರ್ಯ ದೇವತೆಗಳನ್ನು ತನ್ನ ಆಶ್ರಯದಾತನಾದ ಸತ್ಯಾಶ್ರಯನೊಂದಿಗೆ ಸಮೀಕರಿಸಿ ಸ್ತುತಿಸಿದ್ದಾನೆ.

೧. ಈ ಪದ್ಯದಲ್ಲಿ ಶ್ಲೇಷೆಯಿಂದ ವಿಷ್ಣುವನ್ನೂ ಚಾಳುಕ್ಯ ಚಕ್ರವರ್ತಿ ಇಱಿವ ಬೆಡಂಗನನ್ನೂ ಸ್ತುತಿಸಲಾಗಿದೆ.

**(ಅ) ವಿಷ್ಣುಪರವಾದ ಅರ್ಥ**

ಲಕ್ಷ್ಮೀದೇವಿಗೆ ವಲ್ಲಭನೂ, ಬಲರಾಮನೆಂಬ ಸಹೋದರನನ್ನು ಹೊಂದಿದವನೂ, ಬಲಿಚಕ್ರವರ್ತಿಯ ಸೊಕ್ಕನ್ನು ಮುರಿದವನೂ, ಶತ್ರುಗಳಾದ ದೈತ್ಯರನ್ನು ಸೋಲಿಸಿದವನೂ, ಅನೇಕ ಹೆಡೆಗಳುಳ್ಳ ಶೇಷನನ್ನೇ ತನ್ನ ನೆಲೆಯಾಗಿ ಮಾಡಿಕೊಂಡವನೂ, ಧರ್ಮರಾಜನ ರಾಜ್ಯವನ್ನು ರಕ್ಷಿಸಿದವನೂ, ನೀಳವಾದ ತಾವರೆಯಂತಹ ಕಣ್ಣುಗಳುಳ್ಳವನೂ, ಸೃಷ್ಟಿಗೆಲ್ಲ ಮೂಲನಾದ ಪರಮಪುರುಷನೂ, ಪುರುಷೋತ್ತಮನೆಂಬ ಹೆಸರುಳ್ಳವನೂ (ಪುರುಷರಲ್ಲಿ ಶ್ರೇಷ್ಠನಾದವನೂ), ಆದ ನಾರಾಯಣನು ಶುಭಕರವಾದ ಅನೇಕ ಬಗೆಯ ಸಂತೋಷವನ್ನು ನಮಗೆ ಅನುಗ್ರಹಿಸಲಿ.

**(ಆ) ಚಳುಕ್ಯ ಚಕ್ರವರ್ತಿಯ ಪರವಾದ ಅರ್ಥ**

ಐಶ್ವರ್ಯವಂತನೂ, ಬಲವಂತನೂ, ಬಲಿಷ್ಠರಾದವರ ಗರ್ವವನ್ನು ನಾಶಪಡಿಸಿದವನೂ, ದೈತ್ಯರಂತಹ ಶತ್ರುಗಳನ್ನು ಗೆದ್ದವನೂ, ಅಪರಿಮಿತವಾದ ಸುಖಭೋಗಗಳಿಗೆ ಆಶ್ರಯನಾದವನೂ, ಧರ್ಮಾನುಗುಣವಾಗಿ ರಾಜ್ಯವನ್ನು ಪಾಲಿಸುವವನೂ, ಕಮಲಗಳಂತೆ ವಿಸ್ತಾರವಾದ ಕಣ್ಣುಗಳನ್ನು ಉಳ್ಳವನೂ, ಪುರುಷಶ್ರೇಷ್ಠನೂ, ಶ್ರೀವಿಷ್ಣು ಸ್ವರೂಪನೂ ಆಗಿರುವ ಚಳುಕ್ಯಚಕ್ರವರ್ತಿ[1] ಸತ್ಯಾಶ್ರಯದೇವನು ಶುಭಕರವಾದ ಅನೇಕ ಬಗೆಯ ಸಂತೋಷವನ್ನು ನಮಗೆ ದಯಪಾಲಿಸಲಿ.

---

೧. ನಾರಾಯಣ, ಪದ್ಮನಾಭ ಮೊದಲಾದ ವಿಷ್ಣುಪರವಾದ ಜೈನ ಶಲಾಕಾ ಪುರುಷರಲ್ಲೊಬ್ಬನಾದ ವಾಸುದೇವನಿಗೆ ಅನ್ವಯಿಸುತ್ತವೆ. ಬೇರೆ ಬೇರೆ ಕಾಲಗಳಲ್ಲಿದ್ದ ಒಂಬತ್ತು ಜನ ವಾಸುದೇವರು ಪರಮ ಪರಾಕ್ರಮಿಗಳೂ ತ್ರಿಖಂಡಾಧಿಪತಿಗಳೂ ಆಗಿದ್ದರು. ಈ ಒಂಬತ್ತು ವಾಸುದೇವರಿಗೂ ಒಬ್ಬೊಬ್ಬ ಬಲದೇವನು ಅಣ್ಣನಾಗಿದ್ದನು.

ತರುಣೋತ್ತುಂಗಶಶಾಂಕಖಂಡಮೆ ಸುಧಾಬೀಜಂ ಭುಜಂಗೇಂದ್ರನಂ ।
ಕುರಮುನ್ಮೀಲಿತಮಟ್ಟಹಾಸಮೆ ದಳಾನೀಕಂ ವೃಷಂ ಪುಷ್ಪಮೀ ॥
ಶ್ವರಶೈಲಂ ಫಲಮಾಗೆ ಕೋಮಲಮುಖೀಗೌರೀಲತಾಶ್ಲಿಷ್ಟಶಂ ।
ಕರಕಲ್ಪದ್ರುಮನೀಗಭೀಷ್ಟಫಲಮಂ ಚಾಳುಕ್ಯನಾರಾಯಣಂ ॥೨॥

ವರಪದ್ಮಾಸನದೊಳು ಕನನ್ಮಣಿಮಯಂ ಸಿಂಹಾಸನಂ ಬ್ರಾಹ್ಮಿಯೊಳ್ ।
ಪರಮಶ್ರೀ ಗಣನಾಕ್ಷಸೂತ್ರಮಣಿಯೊಳ್ ರತ್ನೋಜ್ವಲಂ ಭೂಷಣಂ ॥
ದೊರೆಯಾಗಿರ್ಪಿನಮೊಂದುಗುಂದದಖಿಲಂ ವಿಜ್ಞಾನದಿಂದಂ ಜಗ ॥
ದ್ಗುರುವಾದಂ ನಮಗೀಗೆ ಬೇಳ್ಪ ವರಮಂ ಶ್ರೀರಾಜಕಂಜಾಸನಂ ॥೩॥

ಬಲವದ್ವೈರಿತಮೋಹರಾತಿಪಟುಗಳ್ ಪದ್ಮಾಸನಸ್ಪರ್ಶಸ ।
ಲ್ಲಲಿತಂಗಳ್ ಜಿತಚಕ್ರವಾಕನಿವಹಪ್ರೇಮಾವಹಂಗಳ್ ಮಹೀ ॥
ವಲಯೋದ್ದ್ಯೋತಕರಂಗಳಾನತಜನಕ್ಕಾನಂದಮಂ ಮಾಳ್ಕೆ ಮಂ ।
ಗಲಮುಚ್ಚಂಡಕರಂ ಮಹೀವಲಯದೊಳ್ ಚಾಳುಕ್ಯಮಾರ್ತಂಡನಾ ॥೪॥

೨. ಶ್ರೇಷ್ಠವಾದ ಬಾಲಚಂದ್ರಬಿಂಬವೆ ಅಮೃತದ ಬೀಜವಾಗಿ (ಆಭರಣವಾಗಿ ಧರಿಸಿದ) ಆದಿಶೇಷ ಸರ್ಪವೇ ಮೊಳಕೆಯಾಗಿ, ಅರಳಿದ ನಗೆಯೆ ದಳಸಮೂಹವಾಗಿ, ವೃಷಭನಂದಿಯೆ ಹೂವಾಗಿ, ಕೈಲಾಸಪರ್ವತವೆ ಫಲವಾಗಿರಲು, ಮುದ್ದುಮುಖದ ಗೌರಿಯೆಂಬ ಬಳ್ಳಿಯ ಅಪ್ಪುಗೆಯನ್ನು ಹೊಂದಿರುವ ಶಂಕರನೆಂಬ ಕಲ್ಪವೃಕ್ಷವು ನಮಗೆ ಬಯಸಿದ ಫಲವನ್ನು ದಯಪಾಲಿಸಲಿ.

[ಸತ್ಯಾಶ್ರಯನಿಗೆ ಅನ್ವಯವಾಗುವಂತೆ ಶ್ಲೇಷಾರ್ಥವೇನೆಂಬುದು ಸ್ಪಷ್ಟವಿಲ್ಲ.]

೩. (ಸತ್ಯಾಶ್ರಯನ) ಥಳಥಳಿಸುವ ರತ್ನಸಿಂಹಾಸನವು ಬ್ರಹ್ಮನ ಆಸನವಾದ ಕಮಲಕ್ಕೂ ಚಕ್ರವರ್ತಿಯ ಐಶ್ವರ್ಯಲಕ್ಷ್ಮಿ (ಸಂಪತ್ತಿ ವೈಭವ)ಯು ಸರಸ್ವತಿಗೂ, ಹೊಳೆಯುವ ರತ್ನಾಭರಣಗಳು (ಬ್ರಹ್ಮನ ಕೈಯಲ್ಲಿರುವ) ಜಪಮಾಲೆಗೂ, ಸರಿಸಮಾನವಾಗಿರಲಾಗಿ, ಕೊರತೆಯಿಲ್ಲದಂತಹ ಸಕಲ ಜ್ಞಾನವನ್ನು ಹೊಂದಿ ಸಮಸ್ತ ಜಗತ್ತಿಗೆ ಗುರುವಾದ (ಸತ್ಯಾಶ್ರಯನೆಂಬ) ರಾಜಬ್ರಹ್ಮನು ನಮಗೆ ಬೇಡಿದ ವರವನ್ನು ಅನುಗ್ರಹಿಸಲಿ.

೪. ಈ ಪದ್ಯ ಶ್ಲೇಷೆಯಿಂದ ಸೂರ್ಯ ಮತ್ತು ಚಳುಕ್ಯಚಕ್ರಿಯಿಬ್ಬರಿಗೂ ಅನ್ವಯಿಸುತ್ತದೆ.

**(ಅ) ಸೂರ್ಯ ಪರವಾಗಿ**

ಬಲಿಷ್ಠ ಶತ್ರುವಾದ ಕತ್ತಲೆಯನ್ನು ನಾಶಪಡಿಸುವುದರಲ್ಲಿ ಸಮರ್ಥವಾದ, ತಾವರೆಗಳನ್ನು ಸ್ಪರ್ಶದಿಂದ ಸಂತೋಷಗೊಳಿಸುವ, ಚಕ್ರವಾಕಪಕ್ಷಿಗಳ ಸಮೂಹಕ್ಕೆಲ್ಲ ಪ್ರಿಯಕರವಾದ, ಭೂಮಂಡಲವನ್ನು ಬೆಳಗುವ, ಮಂಗಳಕರವಾದ ತೀಕ್ಷ್ಣಕಿರಣಗಳನ್ನುಳ್ಳ ಸೂರ್ಯದೇವನು (ಭಕ್ತಿಯಿಂದ) ಬಾಗಿದ ಜನಕ್ಕೆ ಆನಂದವನ್ನುಂಟುಮಾಡಲಿ.

**(ಆ) ಸತ್ಯಾಶ್ರಯ ಪರವಾಗಿ**

ಬಲಿಷ್ಠ ವೈರಿಗಳ ತಾಮಸವನ್ನು ನಾಶಗೊಳಿಸುವುದರಲ್ಲಿ ನಿಪುಣವಾದ, 'ಪದ್ಮಾಸನ'

ಕೂರಿಸಿ ವೀರಶ್ರೀಯಂ ।
ಕೂರದರಂ ಕೊಂದು ಸಮರಜಯಮಮಂ ಮಾಡಲ್ ॥
ಕೂರಸಿಯೊಳ್ ನೆಲಸುಗೆ ಕಂ ।
ಠೀರವವಾಹನೆ ಚಳುಕ್ಯಕಂಠೀರವನಾ ॥೫॥

ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ ಕ ।
ರ್ಬಿನ ಬಿಲ್ಲಂ ಗೆಲೆ ಪುರ್ಬು ಚಂದ್ರಬಲಮಂ ಕೈವಾರದಿಂದಂ ತದಾ ॥
ನನಚಂದ್ರಂ ಕುಡೆ ದೇಸೆ ಪೊಚ್ಚಪೊಸತಾಯ್ತೆಂಬನ್ನೆಗಂ ಮಾಳ್ಕೆ ನೂ ।
ತನಕಂದರ್ಪನನೂನದಾನಗುಣದಿಂ ಚಾಳುಕ್ಯಕಂದರ್ಪನಾ ॥೬॥

ಪದಿನಾಱಲ್ಲವಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವೊಂ ।
ದಿದ ಶೃಂಗಾರಮದಲ್ಲವೊಂದೆ ರಸಮೊಂಬತ್ತೆಯ್ದೊಡಂಬಟ್ಟುವೆಂ ॥
ಬುದನೆಂಬನ್ನೆಗಮಂಗನೋಚಿತರಸಾಲಂಕಾರಮಂ ತಾಳ್ದದೊ ।
ಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್ ॥೭॥

(ಕಮಲ) ದಂತೆ ಸ್ಪರ್ಶಕ್ಕೆ ಮೃದುವಾಗಿಯೂ ಹಿತವಾಗಿಯೂ ಇರುವ, 'ಚಕ್ರವಾಕಪ್ರಿಯ' (ಆದಿತ್ಯ ಅಥವಾ ಅಪರಾದಿತ್ಯನೆಂಬ) ರಾಜನನ್ನು ಗೆದ್ದು, ಭೂಮಂಡಲವನ್ನೆಲ್ಲ ತನ್ನ ತೇಜದಿಂದ ಬೆಳಗುವ ಚಳುಕ್ಯ ಚಕ್ರಿಯ ಬಲಿಷ್ಠ ಹಾಗೂ ಶುಭಕರವಾದ ಹಸ್ತಗಳು ಶರಣಾದ ಜನಕ್ಕೆ ಆನಂದವನ್ನೀಯಲಿ.

[ಅಪರಾದಿತ್ಯನ ವಿಷಯವಾಗಿ ಈ ಆಶ್ವಾಸದ ೨೨ನೆಯ ಪದ್ಯದಲ್ಲಿಯೂ ಹೇಳಿದೆ.]

೫. ಶೌರ್ಯಲಕ್ಷ್ಮಿಯನ್ನು ಒಲಿಸಿ, ವೈರಿಗಳನ್ನು ಕೊಂದು, ಯುದ್ಧಗಳಲ್ಲಿ ಗೆಲುವನ್ನು ತಂದುಕೊಡುವುದಕ್ಕಾಗಿ ಸಿಂಹವಾಹನೆಯಾದ ದುರ್ಗಾದೇವಿಯು ಚಳುಕ್ಯಸಿಂಹ (ಸತ್ಯಾಶ್ರಯ)ನ ತೀಕ್ಷ್ಣವಾದ ಖಡ್ಗದಲ್ಲಿ ನೆಲಸಲಿ.

೬. ಸತ್ಯಾಶ್ರಯನ ಕಣ್ಣುಗಳು ತನ್ನ ಹೂಬಾಣಗಳನ್ನು ಮೀರುತ್ತಿವೆ ; ವರಾಹಧ್ವಜವು ಮೀನಧ್ವಜವನ್ನು ಹೋಲುತ್ತಿದೆ ; ಹುಬ್ಬುಗಳು ಕಬ್ಬಿನ ಬಿಲ್ಲಿಗೆ ಮಿಗಿಲಾಗಿವೆ ; ಮುಖಚಂದ್ರನು ಧಾರಾಳವಾಗಿ ಚಂದ್ರಬಲವನ್ನು (ಕಾಂತಿಯನ್ನು) ನೀಡುತ್ತಿದ್ದಾನೆ- ಹೀಗೆ ಅತಿಶಯವಾದ ದಾನಗುಣದಿಂದ ಕೂಡಿದ ನೂತನ ಮನ್ಮಥನಾಗಿರುವ ಚಳುಕ್ಯಚಕ್ರವರ್ತಿಯ ಸೊಬಗು ತನ್ನ ಸೊಬಗಿಗಿಂತ ಅಧಿಕವಾಗಿ ಹೊಚ್ಚಹೊಸತಾಯಿತೆಂಬಂತೆ ಮನ್ಮಥನು ಅನುಗ್ರಹಿಸಲಿ.

೭. ಸ್ತ್ರೀಯರಿಗೆ ಇರುವ ಅಲಂಕಾರಸಾಧನಗಳು (ಸ್ನಾನ, ವಿಲೇಪನ, ವಸ್ತ್ರಾಭರಣ ಮೊದಲಾದ) ಹದಿನಾರು ; ಅವರಿಗೆ ಹೊಂದುವ ರಸ ಶೃಂಗಾರವೊಂದೆ. ಆದರೆ ಕಾವ್ಯಾಂಗನೆಗೆ ಅಲಂಕಾರಗಳು ಮೂವತ್ತಾರು ; ರಸಗಳು (ಶೃಂಗಾರ, ಹಾಸ್ಯ, ಕರುಣ ಮೊದಲಾಗಿ) ಒಂಭತ್ತು ಎಂದು ಪ್ರಸಿದ್ಧವಾಗಿದೆ. ಆ ಮೇರೆಗೆ ಶ್ರೀ ಸರಸ್ವತಿದೇವಿಯು ಅಂಗನೋಚಿತವಾದ ಅಲಂಕಾರಗಳನ್ನು ತಾಳದೆ, ಕಾವ್ಯಾಲಂಕಾರಗಳನ್ನು ತಾಳಿ ಶೋಭೆಯಿಂದ ತನ್ನ ಮುಖಕಮಲದಲ್ಲಿ ಬಂದು ನೆಲಸಲಿ.

ನೆಗಟ್ಟುದು ರಾಮಾಯಣಮುಂ ।
ನೆಗಟ್ಟುದು ಭಾರತಮುಮಾ ಮಹಾಕವಿಗಳಿಗನಾ ॥
[ನೆಗಟ್ದರ್ ವ್ಯಾಸರ್ ವಾಲ್ಮೀ]
ಕಿಗಳೆನೆ ನೆಗಟ್ಟುಭಯಕವಿಗಳೆಮಗಭಿವಂದ್ಯರ್ ॥೮॥

[ಮೃದುಪದ್ಯರಚನೆಯೊಳ್ ಕಾ ।
ಳಿದಾಸನುಂ ಗದ್ಯರಚನೆಯೊಳ್ ಬಾಣನುಮುಂ ॥
ಕದ ಕವಿಗ (ಳೆನಿಸಿ) ನೆಗಟ್ದಿ ।
ರ್ದುದಜೆಂ ಸತ್ಕವಿಗಳಿರ್ವ(ರೆ)ಮಗಭಿವಂದ್ಯರ್] ॥೯॥

ಮದಮಣಮಿಲ್ಲ ದಾನಗುಣದಿಂ ನೆಗಟ್ಟುಂ ನೃಪಸಿಂಹನಾಗಿಯುಂ ।
ವಿದಿತವಿಶುದ್ಧಭದ್ರಗುಣನಂತೆ, ವಿರುದ್ಧಮಿದೆಂಬಿನಂ ನಿಜಾ ॥
ಭ್ಯುದಯನಿವೇದದೀರ್ಘಕರಮೊಪ್ಪೆ ಜಗತ್ಪ್ರಿಯನಾದ ದೇವನಂ ।
ಕದ ಗಣನಾಯಕಂ ವರದನಕ್ಕೆಮಗಮ್ಮನ ಗಂಧವಾರಣಂ ॥೧೦॥

೮. ಮಹಾಕವಿಗಳಾದ ವಾಲ್ಮೀಕಿ - ವ್ಯಾಸರು ರಾಮಾಯಣ ಭಾರತಗಳನ್ನು ರಚಿಸಿದರು. ಈ ಇಬ್ಬರೂ ಕವಿಗಳು ನಮಗೆ ಪೂಜ್ಯರು.

೯. ಮಧುರವಾದ ಪದ್ಯರಚನೆಯಲ್ಲಿ ಕಾಳಿದಾಸನೂ, ಗದ್ಯರಚನೆಯಲ್ಲಿ ಬಾಣನೂ ಶ್ರೇಷ್ಠ ಕವಿಗಳೆಂದು ಪ್ರಖ್ಯಾತರಾದರು. ಈ ಕವಿವರರಿಬ್ಬರೂ ನಮಗೆ ಪೂಜನೀಯರು.

೧೦. [ಈ ಪದ್ಯದಲ್ಲಿ ಶ್ಲೇಷೆಯಿಂದ ಗಣಪತಿಯೊಡನೆ ಸತ್ಯಾಶ್ರಯನನ್ನು ಸ್ತುತಿಸಲಾಗಿದೆ.]

**(ಅ) ಗಣಪತಿಯ ಪರವಾಗಿ**

ಮದೋದಕವನ್ನು ಸುರಿಸುತ್ತಿದ್ದರೂ ಮದವೆಷ್ಟೂ ಇಲ್ಲ ; 'ನೃಪಸಿಂಹ' (೧. ಶ್ರೇಷ್ಠವಾದ ಸಿಂಹ, ೨. ಜನರನ್ನು ಕಾಪಾಡುವುದಲ್ಲಿ ಶ್ರೇಷ್ಠ) ನಾಗಿದ್ದರೂ ಪ್ರಸಿದ್ಧವೂ ಶುದ್ಧವೂ ಆದ 'ಭದ್ರ' (೧. 'ಭದ್ರ' ಜಾತಿಯ ಆನೆಯ ೨. ಕಲ್ಯಾಣದ) ಗುಣವುಳ್ಳವನು. ಹೀಗೆ ವಿರುದ್ಧ ವರ್ತನೆಯೆನಿಸುವಂತೆ ಶೋಭಿಸುತ್ತ ತನ್ನ ಅತಿಶಯವಾದ ಅಭ್ಯುದಯವನ್ನು ಸೂಚಿಸುವ ದೀರ್ಘ ಸೊಂಡಿಲಿಂದ ಚೆಲುವನಾಗಿ ಜಗತ್ತಿಗೆಲ್ಲ ಪ್ರಿಯನಾದ ಹಾಗೂ ದೇವಗಣಗಳ ನಾಯಕನಾದ ವಿನಾಯಕನು ನಮಗೆ ವರವನ್ನು ನೀಡಲಿ.

**(ಆ) ಸತ್ಯಾಶ್ರಯನ ಪರವಾಗಿ**

ದಾನಮಾಡುವ ಗುಣದಿಂದ ಮಿಗಿಲಾಗಿದ್ದರೂ ಕಿಂಚಿತ್ತೂ ಅಹಂಕಾರವಿಲ್ಲದವನು; ರಾಜಶ್ರೇಷ್ಠನಾಗಿದ್ದರೂ ಪ್ರಸಿದ್ಧವಾದ ಶುದ್ಧ ಕಲ್ಯಾಣಗುಣಗಳಿಂದ ಕೂಡಿದವನು ; ಹೀಗೆ ವಿರುದ್ಧ ಗುಣವನ್ನು ಹೊಂದಿದವನಂತೆ ತೋರುತ್ತಿರುವ, ತನ್ನ ಅಭ್ಯುದಯವನ್ನು ಸೂಚಿಸುವ ನೀಳವಾದ ತೋಳುಗಳಿಂದ ಶೋಭಿಸುತ್ತ ಲೋಕಪ್ರಿಯನೂ, ಮಿಗಿಲಾದ ಸೇನಾ ನಾಯಕನೂ, 'ಅಮ್ಮನ ಗಂಧವಾರಣ'ನೆಂಬ ಬಿರುದುಳ್ಳವನೂ ಆದ ಸತ್ಯಾಶ್ರಯದೇವನು ನಮಗೆ ವರಗಳನ್ನು ದಯಪಾಲಿಸಲಿ.

ನೆಟ್ಟನೆ ವಾಸವಂಗಮೃತವಾರಿಧಿಯೊಳ್ ಸುರಗಂಧವಾರಣಂ ।
ಪುಟ್ಟೆ ಸುರೇಂದ್ರರಾಜ್ಯಮುದಿತೋದಿತಮಾದುದು ದಾನದಿಂದೊಡಂ ॥
ಬಟ್ಟರೆ ಭದ್ರಲಕ್ಷಣಗುಣಾನ್ವಿತನಮ್ಮನ ಗಂಧವಾರಣಂ ।
ಪುಟ್ಟೆ ನರೇಂದ್ರರಾಜ್ಯಮುದಿತೋದಿತಮಾಹವಮಲ್ಲದೇವನಾ ॥೧೧॥

ಬರೆ ಗರ್ಭಕ್ಕರಿವಸ್ತುವಾಹನಚಯಂ ಕಯ್ಗೆಯ್ದೆವಂದತ್ತು ಪು ।
ಟ್ಟೆ ರಣೋತ್ಸಾಹದೆ ಚಕ್ರವರ್ತಿವಿಭವಂ ಪುಟ್ಟಿತ್ತು ಕಯ್ವತ್ತಿ ನಿಂ ॥
ದಿರೆ ಪತ್ತಿತ್ತು ಸಮಸ್ತಧಾತ್ರಿವಳಯಕ್ಕೆಂದುಂ ದಿಶಾದಂತಿಗ ।
ಳ್ವರೆಗಂ ತಂದೆಯ ಕೀರ್ತಿಯೇಂ ಬಳೆದುದೋ ಸತ್ಯಾಶ್ರಯಂ ಧನ್ಯನೋ ॥೧೨॥

ದೊರೆಯಾದುದು ದುರ್ಯಶದೊಳ್
ಪೊರೆಯದ ಚರಿತಂ ಪುರಾಣ [ಚರಿತದೊಳಮಮಾ ॥
ನೆರೆಯಲ] ಕಲಂಕಚರಿತಂ ।
ದೊರೆಯಾದುದೊ ಸಕಲಸತ್ಯಚಕ್ರೇಶ್ವರನಾ ॥೧೩॥

೧೧. ಅಮೃತಸಮುದ್ರದಲ್ಲಿ ದೇವೇಂದ್ರನಿಗೆ ಐರಾವತಗಜವು ಹುಟ್ಟಿ ಬಂದೊಡನೆ ಇಂದ್ರನ ರಾಜ್ಯವು ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದಿತು. ಆ ಆನೆಯಂತೆಯೆ ದಾನ (೧. ಮದೋದಕವನ್ನು ಸುರಿಸುವ ೨. ದಾನಮಾಡುವ) ಗುಣದಿಂದ ಶೋಭಿಸುತ್ತ 'ಭದ್ರ' (೧. 'ಭದ್ರ'ವೆಂಬ ಆನೆ. ೨. ಶುಭಕರವಾದ) ಗುಣಗಳನ್ನೂ ಲಕ್ಷ ಣಗಳನ್ನೂ ಹೊಂದಿದ 'ಅಮ್ಮನ ಗಂಧವಾರಣ' ನೆನಿಸಿದ ಸತ್ಯಾಶ್ರಯನು ಹುಟ್ಟಿದೊಡನೆ ಆಹವಮಲ್ಲ ದೇವನ ರಾಜ್ಯವು ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದಿತು.

೧೨. ಸತ್ಯಾಶ್ರಯನು ತಾಯಿಯ ಗರ್ಭದಲ್ಲಿ ಅವತರಿಸಿದೊಡನೆ ಶತ್ರುಗಳ (ಬೆಲೆಯುಳ್ಳ) ವಸ್ತುವಾಹನಗಳು ಹೇರಳವಾಗಿ (ತೈಲಪನಿಗೆ) ಕೈವಶವಾದವು. ಕುಮಾರನು ಜನಿಸಿದೊಡನೆ ತಂದೆಗೆ ಚಕ್ರವರ್ತಿ ವೈಭವವು ಲಭಿಸಿತು. ಮಗು ಕೈ ಹಿಡಿದು ನಿಲ್ಲು ವಂತಾಗುತ್ತಲೆ ಸಕಲ ಭೂಮಂಡಲವು ಸ್ವಾಧೀನವಾಯಿತು. ಆತನು ಬೆಳೆಯುತ್ತ ಬಂದಂತೆ ತಂದೆಯ ಕೀರ್ತಿ ದಿಗಂತದವರೆಗೆ ಹಬ್ಬಿತು. (ತಂದೆಗೆ ಹೀಗೆ ಉತ್ತರೋತ್ತರವಾಗಿ ಅಭಿವೃದ್ಧಿಯನ್ನೊದಗಿಸಿದ) ಸತ್ಯಾಶ್ರಯನು ಎಂತಹ ಕೃತಾರ್ಥನು !

೧೩. ದುಷ್ಕೀರ್ತಿಗೆ ಒಳಗಾಗದ, ಸತ್ಯಾಶ್ರಯ ಚಕ್ರವರ್ತಿಯ ನಿರ್ಮಲವಾದ ಚಾರಿತ್ರ್ಯವು ಪುರಾಣಪುರುಷರ ಚಾರಿತ್ರ್ಯಕ್ಕೆ ಸರಿಸಮಾನವಾಯಿತು.

ಕಮಲೋದಯನಖಿಲಮಹೀ ।
ರಮಣನುಮಾಪ್ರಿಯನೆನಿಪ್ಪ ಗುಣದುನ್ನತಿಯಿಂ ॥
ಕಮಲಕುಲೋದ್ಭವ [ನುಂ] ವಿ ।
ಷ್ಣುಮೂರ್ತಿ ರುದ್ರಾವತಾರನಿಱಿವಬೆಡಂಗಂ ॥೧೪॥

ಆಂತವನಿಪನಿಕರಂ ಕ ।
ಯ್ಯಾಂತವನಿಪನಿಕರಮೊಂದು ಕೋಟಿಗೆ ಮಿಗಿಲೆಂ ॥
ಬಂತಾದೊಡಮೊಳಸೋಱದೆ ।
ಚಿಂತಿಸದಾಂತಿಱಿಗುಮೀಗುಮಿಱಿವಬೆಡಂಗಂ ॥೧೫॥

ನೆಗಟ್ಟರಿಘೂರ್ಜರದ್ವಿಪಘಟಾಳಿಗೆ ತನ್ನಯ ಸೂಚಿಯಾನೆ ತೊ ।
ಟ್ಟಗೆ ಸಮರಾಗ್ರದೊಳ್ ಪರಿಯೆ ಪಿಂತಣೆ ಸಂದುವು ರಾಜಪುತ್ರರಾ ॥
ನೆಗಳೆನೆ ಮುನ್ನಮೆಂಬ ಬಟೆಕೆಂಬ ಜನೋಕ್ತಿಯೊಳಾಯ್ತು ಸೂಚಿಶ ।
ಕ್ತಿಗೆ ನೃಪನಾನೆ ದಾರದಮೊಲಾದುವು ರಾಜಕುಮಾರರಾನೆಗಳ್ ॥೧೬॥

೧೪. 'ಕಮಲೋದಯ'ನೂ (೧. ವಿಷ್ಣುವಿನ ನಾಭಿಕಮಲದಲ್ಲಿ ಜನಿಸಿದವನು. ೨. ಐಶ್ವರ್ಯವನ್ನು ಉಂಟುಮಾಡುವವನು), ಸಮಸ್ತ 'ಮಹೀರಮಣ'ನೂ (೧. ಭೂದೇವಿಯ ಪತಿಯಾದ ವಿಷ್ಣು. ೨. ಭೂಮಿಗೆಲ್ಲ ಒಡೆಯನಾದ ಅರಸು), 'ಉಮಾಪ್ರಿಯ'ನೂ (೧. ಪಾರ್ವತೀರಮಣನಾದ ಶಿವ. ೨. ಖ್ಯಾತಿಗೆ ಒಡೆಯನಾದವನು ಎಂದರೆ ಖ್ಯಾತಿವಂತನು) ಆಗಿರುವುದರಿಂದ ಇರಿವಬೆಡಂಗ ಸತ್ಯಾಶ್ರಯನು ಬ್ರಹ್ಮ - ವಿಷ್ಣು - ರುದ್ರ ಎಂಬ ತ್ರಿಮೂರ್ತಿ ಸ್ವರೂಪನಾಗಿದ್ದಾನೆ.

೧೫. ಎದುರಿಸಿ ನಿಂತ ಶತ್ರುರಾಜರ ಸಂಖ್ಯೆ ಒಂದು ಕೋಟಿಗೆ ಮಿಗಿಲಾಗಿದ್ದರೂ ಸತ್ಯಾಶ್ರಯನು ಎದೆಗುಂದದೆ ಅವರನ್ನು ಇರಿದು ಸೋಲಿಸುವನು. ಕೈಯೊಡ್ಡಿ ನಿಂತ ಯಾಚಕರ ಸಮೂಹ ಒಂದು ಕೋಟಿಗೆ ಅಧಿಕವಾಗಿದ್ದರೂ ಹಿಂದೆಮುಂದೆ ನೋಡದೆ ಸತ್ಯಾಶ್ರಯದೇವನು ದಾನಮಾಡುವನು.[೨]

೧೬. ಮಿಗಿಲಾದುದೆಂದು ಪ್ರಸಿದ್ಧವಾದ ಘೂರ್ಜರ ರಾಜರ ಆನೆಪಡೆಯ ಮೇಲೆ ಯುದ್ಧದ ಮುಂಚೂಣಿಯ ವ್ಯೂಹದಲ್ಲಿದ್ದ ('ಸೂಚಿ') ತನ್ನ ಆನೆಯನ್ನು ಸತ್ಯಾಶ್ರಯನು ನುಗ್ಗಿಸಿದೊಡನೆ, ಅದು ಮುಂದಾಗಿ ಆ ಆನೆಗಳೆಲ್ಲ ಸೋತು ಅದನ್ನು ಹಿಂಬಾಲಿಸಿ ಬಂದವು (ಆ ಆನೆಯ ಬಲದಿಂದ ಸತ್ಯಾಶ್ರಯನು ಶತ್ರುಗಳನ್ನು ಸೋಲಿಸಿ ಅವರ ಆನೆಗಳನ್ನು ಕೈವಶಪಡಿಸಿಕೊಂಡನು). 'ಸೂಜಿಯ ಹಿಂದೆ ದಾರ'ವೆಂಬ ಲೋಕೋಕ್ತಿಯಂತೆ ಸತ್ಯಾಶ್ರಯನ 'ಸೂಚಿ' ಆನೆಯೆಂಬ ಸೂಜಿಗೆ ಶತ್ರು ರಾಜಕುಮಾರರ ಆನೆಗಳು ದಾರವಾದವು. ['ಸೂಚಿ'ಯೆಂಬುದು ಒಂದು ಬಗೆಯ ವ್ಯೂಹರಚನೆ.]

---

೨. ಎರಡನೆಯ ಚರಣದಲ್ಲಿರುವ "ಕೆಯ್ಯಾಂತವನಿಪನಿಕರಂ" ಎಂಬುದರಲ್ಲಿಯ 'ಅವನಿಪ' ಪದವು 'ಅವನಿಸು' ( < ಅನುವಿಸು = ಬೇಡಿಕೊಳ್ಳು ) ಎಂಬ ಧಾತುವಿನ ಕೃದ್ವಾಚಕ ರೂಪ. ಸಂಸ್ಕೃತದ 'ವನೀಪಕ'ಕ್ಕೆ ಇದು ಸಂಬಂಧಿಸಿರಲಾರದು.

ರಣದೊಳರಾತಿವಾರಣಘಟಾಳಿಯನೊರ್ವನೆ ಗೆಲ್ದನೊಂದು ವಾ ।
ರಣದೊಳನೂನದಾನಗುಣದರ್ಪಿತಪೂರಣನಿಷ್ಪತುಷ್ಪದಾ ॥
ರಣನವದಾತಕೀರ್ತಿಗೃಹತೋರಣನನ್ಯನರೇಂದ್ರಗಂಧವಾ ।
ರಣಮದವಾರಣಂ ವಿಜಯಕಾರಣನಮ್ಮನ ಗಂಧವಾರಣಂ ॥೧೭॥

ನೆಱಿಗೊಂಡುದು ನಾರಾಚಂ ।
ನೆಱಿಗಾಣಲ್ಕಾರ್ತುದಿಲ್ಲ ಬೀರಕೆ ಬೀಯ ॥
ಕ್ಕಿಱಿವ ಬೆಡಂಗನೊಳಾರ್ ದೊರೆ ।
ನೆಱಿ ತೋರ್ಕುಮೆ ಶತ್ರುಜನಕಮರ್ಥಿಜನಕ್ಕಂ ॥೧೮॥

ಒಂದನೆ ನಂಬಿದೆನ್ನನುಗದಮ್ಮನನಿಕ್ಕಿದನಂ ಪೊರಳ್ಚಿ ಕೊಂ ।
ದಂದಱಿಯಟ್ಟಿ ಮುಟ್ಟ ಪಿಡಿತಂದು ಚಲಂ ನಿಲೆ ಮೀಯಲೆಂದು ಪೂ ॥
ಣ್ದಂದದೆ ಮೀಯದಿರ್ದಹಿತನಂ ಕಡಿದಾಗಳೆ ಮಿಂದನಾಚಲಂ ।
ಸಂದುದಱಿಂ ಸವಂ ಪರಶುರಾಮನಿನಾ ಕುವರಾಂಕರಾಮನಿಂ ॥೧೯॥

೧೭. ಕೊರತೆಯಿಲ್ಲದಂತೆ ದಾನಮಾಡುವ ಅಗ್ಗಳಿಕೆಯಿಂದ ಬೇಡುವವರ ಇಷ್ಟಗಳನ್ನು ಪೂರೈಸುವವನೂ, ಪರಿಶುದ್ಧವಾದ ಕೀರ್ತಿಯ ಮಂದಿರಕ್ಕೆ ತೋರಣ ಸ್ವರೂಪನಾದವನೂ, ಶತ್ರುರಾಜರೆಂಬ ಆನೆಗಳ ಸೊಕ್ಕನ್ನು ಅಡಗಿಸಿದವನೂ ಯುದ್ಧ ಜಯಕ್ಕೆ ಕಾರಣನಾದವನೂ, 'ಅಮ್ಮನ ಗಂಧವಾರಣ'ನೂ ಆಗಿರುವ ಸತ್ಯಾಶ್ರಯ ದೇವನು ಯುದ್ಧದಲ್ಲಿ ತನ್ನ ಒಂದೇ ಒಂದು ಆನೆಯಿಂದ ವೈರಿಗಳ ಗಜಸೈನ್ಯವನ್ನೆಲ್ಲ ಒಬ್ಬನೇ ಗೆದ್ದನು.

೧೮. ಯುದ್ಧದಲ್ಲಿ ಸತ್ಯಾಶ್ರಯನ 'ನಾರಾಚ' (ಬಾಣ)ಗಳು ಶತ್ರುಗಳ ಮರ್ಮಸ್ಥಾನಗಳಲ್ಲಿ ನಾಟಿದವು ; ದಾನಮಾಡುವ 'ನಾರಾಚ' (ಚಿನ್ನವನ್ನು ತೂಗುವ ತಕ್ಕಡಿ) ತುಂಬಿ ತೂಗಿತು. ಆದರೆ ಇರಿವಬೆಡಂಗನ ಬಾಣ ಸಮೃದ್ಧಿಯ ಕೊನೆಯನ್ನಾಗಲಿ, ದಾನ ಸಮೃದ್ಧಿಯ ಕೊನೆಯನ್ನಾಗಲಿ ಕಾಣಲು ಶತ್ರು ಸಮೂಹಕ್ಕೂ ಯಾಚಕ ಸಮೂಹಕ್ಕೂ ಸಾಧ್ಯವೆ ? ವೀರದಲ್ಲಿಯೂ, ದಾನದಲ್ಲಿಯೂ ಸತ್ಯಾಶ್ರಯನಿಗೆ ಸಮಾನರಾರು ?

೧೯. "ಅನನ್ಯವಾಗಿ ನನ್ನನ್ನೇ ನಂಬಿಕೊಂಡಿದ್ದ ಪ್ರೀತಿಯ ತಮ್ಮನನ್ನು ಯಾವನು ಕೊಂದನೋ ಆ ವೈರಿಯನ್ನು ಬೆನ್ನಟ್ಟಿ ಹಿಡಿದು ತಂದ ಬಳಿಕವೆ ಸ್ನಾನ ಮಾಡುವೆ"ನೆಂದು ಪ್ರತಿಜ್ಞೆಮಾಡಿ, ಆ ಮೇರೆಗೆ ಆ ಶತ್ರುವನ್ನು ಕಡಿದು ತಂದ ನಂತರವೆ ಸತ್ಯಾಶ್ರಯನು ಸ್ನಾನ ಮಾಡಿದನು. (ತನ್ನ ತಂದೆಯನ್ನು ಕೊಂದ ವೈರಿಯನ್ನು ಕೊಲ್ಲುವುದಾಗಿ ಭಾಷೆಮಾಡಿ ಅದನ್ನು ಪೂರ್ಣಗೊಳಿಸಿದ) ಪರಶುರಾಮನಿಗೆ 'ಕುವರಂಕರಾಮ'ನೆಂಬ ಬಿರುದುಳ್ಳ ಸತ್ಯಾಶ್ರಯನು ಚಲದಲ್ಲಿ ಸರಿಸಮನಾಗಿರುವನು.

ದಿನಪಂ ತೋರ್ಪಂ ಮಧ್ಯಂ ।
ದಿನದೊಳ್ ತೇಜದ ಪೊಡರ್ಪನುದಯದೊಳೆ ಜಗ ॥
ಜ್ಜನಕಂ ತೋಱಿದಪಂ ರಿಪು ।
ಜನಕಂ ತೇಜದ ಪೊಡರ್ಪನಿಱಿವಬೆಡಂಗಂ ॥೨೦॥

ಹರಚರಣಕಮಲಭೃಂಗಂ ।
ವರಾಂಗನಾಸಂಗಸಮರಸಾಹಸತುಂಗಂ ॥
ಪರಹಿತಕುಲಪ್ರಸಂಗಂ ।
ನಿರಸ್ತದೋಷಾನುಷಂಗನಿಱಿವಬೆಡಂಗಂ ॥೨೧॥

ಒದವಿದ ಭೀತಿಯಿಂದಮಪರಾದಿನತಬ್ಧಿಯನೋಡಿ ಪೊಕ್ಕೊಡಾ ।
ಗದು ಕೊಲಲೆಂದು ಮಾಣ್ಬನದು ತಕ್ಕುದೆ ಲಿಂಗಮನಪ್ಪುಕೆಯ್ದು ಪಿಂ ॥
ಗದೆ ನಿಲೆ ನೀರನೋಡಿ ಪುಗೆ ಪೆಣ್ಣುಡೆಯುಟ್ಟರೆ ಪುತ್ತನೇಱೆ ಕೊ ।
ಲ್ಲದ ತುಱಿಲಾಳ್ತನಕ್ಕೆ ಸಮನಾವನೊ ಸಾಹಸಭೀಮಭೂಪನೊಳ್ ॥೨೨॥

೨೦. ಸೂರ್ಯನು ಮಧ್ಯಾಹ್ನದಲ್ಲಿ ಮಾತ್ರ ತನ್ನ ತೇಜಸ್ಸಿನ ಅಗ್ಗಳಿಕೆಯನ್ನು ತೋರುತ್ತಾನೆ. ಇರಿವ ಬೆಡಂಗನು ತನ್ನ ಎಳಹರಯದಲ್ಲಿಯೆ ಜಗತ್ತಿನ ಜನಕ್ಕೂ ಶತ್ರುಜನಕ್ಕೂ ತನ್ನ ಶೌರ್ಯದ ಅತಿಶಯವನ್ನು ತೋರುತ್ತಾನೆ.

೨೧. ಇರಿವ ಬೆಡಂಗನು ಶಿವನ ಪಾದಕಮಲಗಳನ್ನು ಆರಾಧಿಸುವವನು ಯುದ್ಧದಲ್ಲಿ ಮಹಾಪರಾಕ್ರಮಿಯಾದವನು ; ಪರೋಪಕಾರದಲ್ಲಿ ನಿರತನಾದವನು ; ನಿರ್ದುಷ್ಟರಾದವರ (ಸಜ್ಜನರ) ಸಹವಾಸದಲ್ಲಿ ಇರುವವನು.

೨೨. ವೈರಿಯಾದ ಅಪರಾದಿತ್ಯನು ಹೆದರಿಕೊಂಡು ಓಡಿಹೋಗಿ ಸಮುದ್ರ ಮಧ್ಯದಲ್ಲಿ ಅಡಗಿಕೊಳ್ಳಲಾಗಿ ಇಂತಹವನನ್ನು ಕೊಲ್ಲಕೂಡದೆಂದು ಸತ್ಯಾಶ್ರಯನು ಬಿಟ್ಟುಬಿಟ್ಟನು. ಹೀಗೆ ಬಿಟ್ಟುದು ಯೋಗ್ಯವೇ. (ಏಕೆಂದರೆ) ಲಿಂಗವನ್ನು ಅಪ್ಪಿಕೊಂಡು ನಿಂತರೆ, ಓಡಿಹೋಗಿ ನೀರಲ್ಲಿ ಹೊಕ್ಕರೆ, ಹೆಣ್ಣುಡೆ (ಸೀರೆ) ಧರಿಸಿ ನಿಂತರೆ, ಹುತ್ತವನ್ನು ಏರಿ ನಿಂತಕೊಂಡರೆ ಅಂತಹ ಜನರನ್ನು ಕೊಲ್ಲುವುದು ಶೂರರ ಧರ್ಮವಲ್ಲ. ಸಾಹಸದಲ್ಲಿ ಭೀಮನಾದ ಸತ್ಯಾಶ್ರಯನಂತೆ ಹೀಗೆ ಈ ಶೂರಧರ್ಮವನ್ನು ಪಾಲಿಸುವವನು ಯಾವನು ?

[ಈ 'ಅಪರಾದಿತ್ಯ'ನು ಉತ್ತರ ಕೊಂಕಣದ ಅಧಿಪತಿಯಾದ 'ಅಪರಾಜಿತ'. ಸತ್ಯಾಶ್ರಯನು ಇವನ ರಾಜಧಾನಿಯಾದ ಅಂಶುನಗರವನ್ನು ಸುಟ್ಟು ಇಪ್ಪತ್ತೊಂದು ಆನೆಗಳನ್ನು ಕಪ್ಪವಾಗಿ ಸ್ವೀಕರಿಸಿ, ಅಪರಾಜಿತನಿಗೆ ಅದೇ ರಾಜ್ಯದಲ್ಲಿ ಸಾಮಂತನಾಗಿ ಉಳಿಯಲು ಅನುಮತಿ ನೀಡಿದನು. 'ಅಂಶುನಗರ'ವನ್ನು ಸುಟ್ಟ ವಿಷಯ ಇದೇ ಆಶ್ವಾಸದ ೨೫ನೆಯ ಪದ್ಯದಲ್ಲಿ ಬಂದಿದೆ.]

ಜಲಧಿಯ ಸತ್ಯಾಶ್ರಯಬಲ ।
ಜಲಧಿಯ ನಡುವಳುರ್ವ ಕೋಪಶಿಖಿಗಳ ನಡುವಿ ।
ರ್ತಲೆವೊತ್ತಿದ ಪುಳ್ಳಿಯ ಪುಱು ।
ವೊಲಿರ್ದನತಿಚಕಿತಚಿತ್ತನಪರಾದಿತ್ಯಂ ॥೨೩॥

ಹುತವಹಬಾಣದಿಂದಮಿಸೆ ತೂಳ್ದುದು ವಾರನಸೇನೆ ಕಟ್ಟೆ ಪ ।
ರ್ವತತಿಯಿಂದೆ ಕಟ್ಟುವಡೆದತ್ತಪರಾಬ್ಧಿ ಪ [ತಿಪ್ಲವಂಗದಿಂ ॥
ಕ್ಷತಶತ]ಮಾದುದಾ ಪರಶುರಾಮನಿನಾ ರಘುರಾಮನಿಂ ಸರಿ ।
ತ್ಪತಿ ಕುವರಾಂಕರಾಮನಿನದೇಂ ಕಟಿವಾದುದೊ ಮೂಱು ಸೂಟಿೞಳಂ ॥೨೪॥

ತ್ರಿಪುರಂ ಬೆಂದುದು ರುದ್ರನಿಂ ಕೃತಯುಗಪ್ರಾರಂಭದೊಳ್ ದಾನವೇಂ ।
ದ್ರಪುರಂ ತ್ರೇತೆಯೊಳಂಜನಾತನಯನಿಂ ದ್ವಾಪಾರದೊಳ್ ಖಾಂಡವಂ ॥
ಕಪಿರಾಜಧ್ವಜನಿಂ ಚತುರ್ಥಯುಗದೊಳ್ ಚಾಳುಕ್ಯಮಾರ್ತಂಡನಿಂ ।
ದಪರಾದಿತ್ಯನ ಮಂಡಲಾಂಶುನಗರಂ [ಶಾಂತಾರ್ಣ] ವಂಶಾರ್ಣವಂ ॥೨೫॥

ಕಂಡೆಂ ಗ್ರಹಣಮನದನಾ ।
ಖಂಡಲದಿಶ್ಮುಖದೆ ಬಂದು ಸರ್ವಗ್ರಾಸಂ ॥
ಗೊಂಡತ್ತಪರಾದಿತ್ಯನ ।
ಮಂಡಲಮಂ ಬಾಹುರಾಹು ಸತ್ಯಾಶ್ರಯನಾ ॥೨೬॥

೨೩. (ದ್ವೀಪದಲ್ಲಿ ಅಡಗಿದ) ಅಪರಾದಿತ್ಯನಿಗೆ ಒಂದು ಕಡೆಗೆ ಜಲಸಮುದ್ರ ಇನ್ನೊಂದು ಕಡೆಗೆ ಸತ್ಯಾಶ್ರಯನ ಸೇನಾಸಮುದ್ರ ; ಜಲಸಮುದ್ರದಿಂದ ವಾಡವಾಗ್ನಿಯ ಭಯ, ಸೇನಾಸಮುದ್ರದಿಂದ ಪ್ರಜ್ವಲಿಸುವ ಕೋಪಾಗ್ನಿಯ ಭಯ. ಇವೆರಡರ ಮಧ್ಯದಲ್ಲಿ ಸಿಕ್ಕಿದ ಅಪರಾದಿತ್ಯನು, ಎರಡೂ ತುದಿಗಳಲ್ಲಿ ಉರಿ ಹೊತ್ತಿಕೊಂಡ ಒಣ ಸೌದೆ ತುಂಡಿನೊಳಗಿರುವ ಹುಳುವಿನಂತೆ ಕಕ್ಕಾಬಿಕ್ಕಿಯಾಗಿದ್ದನು.

೨೪. ಪಶ್ಚಿಮ ಸಮುದ್ರವು ಪರಶುರಾಮನ ಅಗ್ನಿಬಾಣಕ್ಕೆ ಹಿಮ್ಮೆಟ್ಟಿತು ; ಶ್ರೀರಾಮನ ಕಪಿಸೈನ್ಯವು ಬೆಟ್ಟಗಳಿಂದ ನಿರ್ಮಿಸಿದ ಸೇತುವೆಯಿಂದ ಕಟ್ಟಿಗೊಳಗಾಯಿತು ; (ಸತ್ಯಾಶ್ರಯ) ರಾಜನ ನಾವೆಗಳ ಹೊಡೆತದಿಂದ ನೂರಾರು ಬಾರಿ ಭಂಗಕ್ಕೊಳಗಾಯಿತು. ಹೀಗೆ ಆ ಕಡಲು ಪರಶುರಾಮನಿಂದ, ಶ್ರೀರಾಮನಿಂದ ಹಾಗು ಕುವರಂಕರಾಮ (ಸತ್ಯಾಶ್ರಯ) ನಿಂದ ಮೂರು ಸಲ ಅದೆಂತಹ ದುಃಸ್ಥಿತಿಗೊಳಗಾಯಿತು !

೨೫. ಕೃತಯುಗದ ಆರಂಭದಲ್ಲಿ ರುದ್ರನಿಂದ ತ್ರಿಪುರಗಳು ಭಸ್ಮವಾದವು. ತ್ರೇತಾಯುಗದಲ್ಲಿ ಆಂಜನೇಯನಿಂದ ರಾಕ್ಷಸರಾಜ (ರಾವಣನ) ಪಟ್ಟಣ (ಲಂಕೆ) ಬೆಂಕಿಗೀಡಾಯಿತು. ದ್ವಾಪರಯುಗದಲ್ಲಿ ಅರ್ಜುನನಿಂದ ಖಾಂಡವವನವು ಬೆಂದು ಹೋಯಿತು. ನಾಲ್ಕನೆಯದಾದ (ಕಲಿ) ಯುಗದಲ್ಲಿ ಚಾಳುಕ್ಯಮಾರ್ತಾಂಡನಾದ ಸತ್ಯಾಶ್ರಯನಿಂದ ಅಪರಾದಿತ್ಯನ ರಾಜಧಾನಿ ಅಂಶುನಗರವು ಸುಟ್ಟು ಬೂದಿಯಾಯಿತು.

೨೬. ಸತ್ಯಾಶ್ರಯನ ಬಾಹುವೆಂಬ ರಾಹು ಪೂರ್ವದಿಕ್ಕಿನಿಂದ ಬಂದು ಅಪರಾದಿತ್ಯನೆಂಬ ಸೂರ್ಯನ ಮಂಡಲ (೧. ಬಿಂಬ. ೨. ರಾಜ್ಯ) ವನ್ನು ಹಿಡಿದುಕೊಂಡ ಪೂರ್ಣಗ್ರಹಣವನ್ನು ನಾನು ಕಂಡೆನು.

ಗಿರಿದುರ್ಗಂಗಳನೇಱಿಯನ್ಯಪುರದೊಳ್ ರತ್ನಾಳಿಕೇರಾಂಬುವಂ ।
ಮರವಾಯ್ದೊಡ್ಡಿರೆ ಕೊಂಡುಬಂದುದಪರಾಂಭೋರಾಶಿಯೊಳ್ ಪುಟ್ಟುಗ
ಪ್ಪರದೊಳ್ ಬೂದಿಯನೊಟ್ಟಿಕೊಂಡುದದಱಿಂ ಮತ್ತೇಭವಿಕ್ರೀಡಿತಂ ।
ದೊರೆವೆತ್ತಮ್ಮನ ಗಂಧವಾರಣಮಿದೇನನ್ವರ್ಥಮಾಗಿರ್ದುದೋ ॥೨೭॥

ಮುನಿದಿರ್ಪತ್ತೊಂದು ಸೂೞ್ ಕ್ಷತ್ರಿಯರನಱಸಿ ಕೊಂದಿಕ್ಕಿದಾ ರಾಮನಿಂದಿ ।
ತ್ತ ನರೇಂದ್ರರ್ ಪೊಕ್ಕರಿಲ್ಲೊರ್ಬರುಮಿವನಧಿಕಂ ಪೊಕ್ಕನೆಂದಾ ಪವಣ್ ಬ ॥
ರ್ಪಿನಮಿರ್ಪತ್ತೊಂದನಿತ್ತಂ ಕರಿಗಳನಪರಾದಿತ್ಯನಂತೀಯದಂದಾ ।
ತನನಿರ್ಪತ್ತೊಂದು ವಂಶಂ ಕಿಡೆ ಮುಳಿದನೊ ಸತ್ಯಾಶ್ರಯಂ ಸಾರ್ವಭೌಮಂ ॥೨೮॥

ಉಱದಿರ್ಪುದುಱದೆ ನಿಮ್ಮಡಿ ।
ಗೆಱಗುವುದೋಲಗಿಪುದೇಕೆ ಕೇಳ್ದಱಿಯಿರೆ ತಾ ॥
ನಿಱಿವಂ ಪೆಱರ್ಗಿಱಿವಂ ತನ ।
ಗಿಱಿವಂ ಮೇಣ್ ಮೆಱೆವನೀವನಿಱಿವಬೆಡಂಗಂ ॥೨೯॥

['ಅಪರಾದಿತ್ಯ'ವೆಂಬ ಪದದಲ್ಲಿ (೧. ಅಪ್ರತಿಮನಾದ ಸೂರ್ಯ. ೨. ಮುಳುಗುತ್ತಿರುವ ಸೂರ್ಯ ಎಂಬ) ಶ್ಲೇಷೆಯನ್ನು ಕವಿ ಬಳಸಿಕೊಂಡಿದ್ದಾನೆ.]

೨೭. ಗಂಧಗಜವು ಬೆಟ್ಟಗಳನ್ನು ಏರಿ, ಮರಗಳನ್ನು ಹಾಯ್ದು, ಒಡೆದ ತೆಂಗಿನಕಾಯಿಗಳ ನೀರನ್ನು ಹೀರಿ, ನೀರಾಟವಾಡಿ, ಮೈಮೇಲೆ ದೂಳನ್ನು ಒಟ್ಟಿಕೊಳ್ಳುವಂತೆ, ಸತ್ಯಾಶ್ರಯನು ಶತ್ರುಗಳ ಗಿರಿದುರ್ಗಗಳನ್ನು ಏರಿ, ಪಶ್ಚಿಮಸಮುದ್ರದಲ್ಲಿ ಹೊಕ್ಕು ರತ್ನ ಸಮೂಹವನ್ನು ಎತ್ತಿಕೊಂಡು ಬಂದು, ಹುಟ್ಟುಗಪ್ಪುರವನ್ನು ತೊಡೆದುಕೊಂಡನು. ಈತನಿಗೆ 'ಅಮ್ಮನ ಗಂಧವಾರಣ' ಎಂಬ ಬಿರುದು ಪೂರ್ತಿ ಅನ್ವರ್ಥಕವಾಗಿದೆ.

೨೮. ಕೋಪಾವೇಶದಿಂದ ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ಹುಡುಕಿ ಹುಡುಕಿ ಕೊಂದುಹಾಕಿದ ಆ ಪುರಾಣಕಾಲದ ಪರಶುರಾಮನು ಮಾತ್ರ ಸಮುದ್ರವನ್ನು ಹೊಕ್ಕು ಒತ್ತರಿಸಿದ್ದನು. ಆತನಿಂದ ಈಚೆಗೆ ಯಾವ ರಾಜನೂ ಹಾಗೆ ಮಾಡಿರಲಿಲ್ಲ. ಸತ್ಯಾಶ್ರಯನು ಕಡಲಲ್ಲಿ ನುಗ್ಗಿ ಬಂದು ಹೊಕ್ಕನಾದುದರಿಂದ ಈತನು ಮಿಗಿಲಾದವನೆಂದು ಮನಗಂಡು ಅವನು ಬರುತ್ತಿದ್ದಂತೆಯೆ ಅಪರಾದಿತ್ಯನು ಇಪ್ಪತ್ತೊಂದು ಆನೆಗಳನ್ನು ಕಾಣಿಕೆಯಾಗಿ ಒಪ್ಪಿಸಿದನು. ಹಾಗೆ ಕಾಣಿಕೆ ನೀಡದೆ ಹೋಗಿದ್ದರೆ ಸತ್ಯಾಶ್ರಯ ಸಾರ್ವಭೌಮನ ಕೋಪಕ್ಕೆ ಈಡಾಗಿ ಅಪರಾದಿತ್ಯನ ವಂಶ ಇಪ್ಪತ್ತೊಂದು ತಲೆಯವರೆಗೆ ನಾಶವಾಗುತ್ತಿರಲಿಲ್ಲವೆ ?

೨೯. ಅನುಮಾನಿಸದೆ, ತಡೆಯದೆ ಬಂದು ಪಾದಕ್ಕೆ ಶರಣಾಗಿ, ಸೇವೆ ಮಾಡಿಕೊಂಡಿರಿ. ಏಕೆಂದು ಕೇಳಿ ತಿಳಿದಿಲ್ಲವೆ ? ಇರಿಯುವುದಾಗಲಿ, ದಾನ ನೀಡುವುದಾಗಲಿ - ಎರಡರಲ್ಲಿಯೂ ಸತ್ಯಾಶ್ರಯನು ಮಿಗಿಲಾದವನು.

['ತಾನಿಱಿವಂ ಪೆಱೆರ್ಗಿರಿವಂ ತನಗಿಱಿವಂ' ಎಂಬುದರ ಅರ್ಥ ಸ್ಪಷ್ಟವಾಗಿಲ್ಲ.]

ಬೆಳಗುವ ಸೊಡರೊಳ್ ಸೊಡರಂ ।
ಬೆಳಗಿ ಪಲರ್ ಕೊಂಡುಪೋಗೆಯುಂ ಕುಂದದೆ ಪ ॥
ಜ್ವಳಿಸುವವೊಲ್ ಜಗಮೆಲ್ಲಂ ।
ಕೊಳಲುಂ ತವದಿತ್ತು ಮೆಱೆವನಿಱಿವಬೆಡಂಗಂ ॥೩೦॥

ಎನಿಸಿದ ಸತ್ಯಾಶ್ರಯದೇ ।
ವನೆ ಪೃಥ್ವೀವಲ್ಲಭಂ ಕಥಾನಾಯಕನಾ ॥
ಗನಿಲಜನೊಳ್ ಪೋಲಿಸಿ ಪೇ ।
ಳ್ದನೀ ಗದಾಯುದ್ಧಮಂ ಮಹಾಕವಿ ರನ್ನಂ ॥೩೧॥

ಕೃತಿ ನೆಗಳ್ದ ಗದಾಯದ್ಧಂ ।
ಕೃತಿಗೀ[ಶಂ] ಚಕ್ರವರ್ತಿ ಸಾಹಸಭೀಮಂ ॥
ಕೃತಿಯಂ ವಿರಚಿಸಿದನಲಂ ।
ಕೃತಿಯಂ ಕವಿರತ್ನನೆಂದೊಡೇವಣ್ಣಿಪುದೋ ॥೩೨॥

ಮೊದಲೊಳ್ ಬದ್ಧವಿರೋಧದಿಂ ನೆಗಳ್ದ ಕುಂತೀಪುತ್ರರೊಳ್ ಭೀಮನಂ - ।
ಕದ ಗಾಂಧಾರಿಯ ಪುತ್ರರೊಳ್ ಮೊದಲಿಗಂ ದುರ್ಯೋಧನಂ ಧರ್ಮಯು ॥
ದ್ಧದೊಳಂತಾತನನಿಕ್ಕಿ ಕೊಂದನದಱಿಂ ಭೀಮಂ ಜಯೋದ್ದಾಮನೆ ।
ಬುದನೆಂಬಂತಿದು ವಸ್ತುಯುದ್ಧಮೆನಿಸಲ್ ಪೇಳ್ದಂ ಗದಾಯುದ್ಧಮಂ ॥೩೩॥

೩೦. ಬೆಳಗುತ್ತಿರುವ ಒಂದು ದೀಪದಿಂದ ಹಲವಾರು ದೀಪಗಳನ್ನು ಹೊತ್ತಿಸಿ ಕೊಂಡು ಹೋದರೂ, ಮೊದಲ ದೀಪವು ಕುಗ್ಗದೆ ಪ್ರಕಾಶಿಸುತ್ತಲೇ ಇರುವುದು. ಹಾಗೆಯೆ ಜಗತ್ತೆಲ್ಲ ಬಂದು ಬೇಡಿ ಪಡೆದುಕೊಂಡು ಹೋದರೂ ಇರಿವಬೆಡಂಗನ ಸಂಪತ್ತು ಅಕ್ಷಯವಾಗಿಯೆ ಇರುವುದು.

೩೧. ಹೀಗೆ ಪ್ರಸಿದ್ಧನಾದ ಚಕ್ರವರ್ತಿ ಸತ್ಯಾಶ್ರಯನನ್ನೆ ಕಥಾನಾಯಕನಾದ ಭೀಮನಿಗೆ ಹೋಲಿಸಿ ಈ ಗದಾಯುದ್ಧ ಕಾವ್ಯವನ್ನು ಮಹಾಕವಿ ರನ್ನನು ರಚಿಸಿದನು.

೩೨. ಕಾವ್ಯದ ಕಥಾವಸ್ತು ಪ್ರಸಿದ್ಧವಾದ ಗದಾಯುದ್ಧ ; ಕಥಾನಾಯಕನೋ ಮಹಾಸಾಹಸಿಯಾದ ಚಕ್ರವರ್ತಿ ; ಅಲಂಕಾರಪ್ರಾಯವಾದ ಈ ಕಾವ್ಯವನ್ನು ರಚಿಸಿದವನು ಕವಿರತ್ನ ಎಂದ ಮೇಲೆ (ಇದರ ಮಹತ್ತ್ವವನ್ನು) ಎಷ್ಟೆಂದು ವರ್ಣಿಸಬೇಕು !

೩೩. ಮೊದಲಿಂದಲೂ ಹಗೆತನದಲ್ಲಿಯೆ ಬೆಳೆದ, ಕುಂತೀಪುತ್ರರಲ್ಲಿ ಮಿಗಿಲಾದ ಭೀಮನೂ, ಗಾಂಧಾರಿಯ ಮಕ್ಕಳಲ್ಲಿ ಹಿರಿಯನಾದ ದುರ್ಯೋಧನನೂ ಎದುರೆದುರಾಗಿ ನಡೆಸಿದ ಧರ್ಮಯುದ್ಧದಲ್ಲಿ ದುರ್ಯೋಧನನನ್ನು ಹೊಡೆದು ಕೊಂದು ಭೀಮಸೇನನು ವಿಜಯಿಯಾದನು. ಪ್ರಸಿದ್ಧವಾದ ಆ ಯುದ್ಧವನ್ನೆ ಮುಖ್ಯವಸ್ತುವಾಗಿಟ್ಟುಕೊಂಡು ಕವಿ ರನ್ನನು ಈ ಗದಾಯುದ್ಧ ಕಾವ್ಯವನ್ನು ರಚಿಸಿದನು.

ಮೊದಲೊಳ್ ಸಾವಂತರಿನಿನಿ ।
ಸುದಿತೋದಿತನಾಗಿ ಮಂಡಲೇಶ್ವರನಿಂದ ।
ಭ್ಯುದಯಪರನೆನಿಸಿ ಚಕ್ರಿಯಿ ।
ನುದಯಪರಂಪರೆಯನೆಯ್ದಿದಂ ಕವಿರನ್ನಂ ॥೩೪॥

ಉದಧಿಯನೆಯ್ದಿ ದಿಗ್ಗಜಮನೆಯ್ದಿ ಕುಲಾದ್ರಿಯನೆಯ್ದಿ ನೀಳ್ದು ನಿ ।
ಲ್ವುದು ಜಸಮಿತ್ತರ್ಗಿತ್ತ ಧನಮೇನದು ನಿಲ್ವುದೆ ಮುನ್ನಮಿತ್ತರೆ ॥
ಲ್ಲದರಿವರೀಯೆ ಪೆತ್ತವರುಮೆಲ್ಲಿದರಾ ಧನಮೆಲ್ಲಿತಿಂದ್ರಜಾ ।
ಲದ ಸಿರಿಗೇಕೆ ಮೆಟ್ಪಡುವಿರೆಂದೊರೆದಂ ಕವಿಕುಂಜರಾಂಕುಶಂ ॥೩೫॥

ನೆಗಟ್ದಿ ರಸಂ ಮನಂಗೊಳಿಸೆ ಮಾರ್ಗಮೊಡಂಬಡೆ ದೇಸೆ ಕಬ್ಬಮಂ ।
ಬಗೆಗೊಳಲಿಂತು ಪೇಟ್ದುದು ಮಹೀಭುಜಸಾರ್ಥಕಮಲ್ಲದಂತೆ ಕೆ ॥
ಮ್ಮಗೆ ಕೊಳಲಾಟಪಂ ದೊರೆಯೊ ಠಕ್ಕನೊ ಕಳ್ಳನೊ ಬಂದಿಕಾಜನೋ ।
ಪಗೆವನೊ ಮೊಮ್ಮನೋ ಮಗನ ದಾಯಿಗನೋ ಬುಧಸೇವ್ಯನಂದನಾ ॥೩೬॥

ಪಡೆಯೆಡೆಯ ಕಡೆಯ ಬಡವರ್ ।
ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್ ॥
ಪಡೆದಂ ಮಹಿಮೋನ್ನತಿಯಂ ।
ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ ॥೩೭॥

೩೪. ಆರಂಭಕಾಲದಲ್ಲಿ ಸಾಮಂತರಾಜರ ಆಶ್ರಯದಿಂದ ಅಷ್ಟಷ್ಟೇ ಏಳಿಗೆ ಹೊಂದುತ್ತಾ ಬಂದು, ಮಂಡಲೇಶ್ವರ (ಚಾವುಂಡರಾಯ)ನಿಂದ ಅತ್ಯಂತವಾದ ಅಭ್ಯುದಯ ವನ್ನು ಪಡೆದ ಕವಿ ರನ್ನನು ಚಕ್ರವರ್ತಿಯಿಂದ ಉತ್ತರೋತ್ತರವಾಗಿ ಅಭಿವರ್ಧಿಸಿದನು.

೩೫. ಸಮುದ್ರವನ್ನು ದಾಟಿ, ದಿಗ್ಗಜಗಳನ್ನು ದಾಟಿ, ಕುಲಪರ್ವತಗಳನ್ನೂ ಅತಿಕ್ರಮಿಸಿ ಹಬ್ಬಿ ನಿಲ್ಲುವುದು ಕೀರ್ತಿಯಲ್ಲದೆ, ನೀಡಿದ ಧನವೇನಾದರೂ ನಿಲ್ಲುವುದೆ ? ಹಿಂದಿನ ಕಾಲದಲ್ಲಿ ನೀಡಿದವರೆಲ್ಲಿರುವರು ? ಅವರಿಂದ ಧನವನ್ನು ಪಡೆದವರು ಎಲ್ಲಿರುವರು ? ಆ ಧನವಾದರೂ ಎಲ್ಲಿರುವುದು ? ಮಾಯವಾಗುವ ಈ ಧನ ಸಂಪತ್ತಿಗೆ ಏಕೆ ಮರುಳಾಗುವಿರೆಂದು ಕವಿಶ್ರೇಷ್ಠನಾದ ರನ್ನನು ಕೇಳುತ್ತಾನೆ.

೩೬. ಮನೋಹರವಾಗುವಂತೆ ರಸ ತುಂಬಿ, ಮಾರ್ಗಶೈಲಿಯಲ್ಲಿ ಹದವಾಗಿ ದೇಸಿಯನ್ನು ಅಳವಡಿಸಿ, ಮನಮೆಚ್ಚುವಂತೆ ರಚಿಸಿದ ಕಾವ್ಯವಾದರೆ ಅದನ್ನು ಒಪ್ಪಿಕೊಳ್ಳುವ ರಾಜನಿಗೆ ಸಾರ್ಥಕವಾಗುತ್ತದೆ. ಹಾಗಿಲ್ಲದೆ ಸುಮ್ಮನೆ ಹೇಗೊ ಇರುವ ಕೃತಿಯನ್ನು ಸ್ವೀಕರಿಸುತ್ತೇನೆಂಬುವನು ಅರಸನೊ, ಠಕ್ಕನೊ, ಕಳ್ಳನೊ, ಸುಲಿಗೆಕಾರನೊ, ಶತ್ರುವೊ, ಮೊಮ್ಮಗನೊ, ಮಗನ ಪಾಲುಗಾರನೊ ?

೩೭. ರನ್ನನು ಕವಿಚಕ್ರವರ್ತಿಯೆಂಬ ಬಿರುದನ್ನೂ, ಮಹಿಮೆಯನ್ನೂ ಚಕ್ರವರ್ತಿಯಾದ ತೈಲಪನಿಂದ ಸ್ವತಃ ಪಡೆದನಲ್ಲದೆ, ಯಾರೋ ಯಃಕಶ್ಚಿತರೆಂಬ ಬಡವರಿಂದ ಪಡೆದನೆ ?

ಆರಾತೀಯಕವೀಶ್ವರ ।
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ ।
ಡಾರದ ಮುದ್ರೆಯನೊಡೆದಂ ।
ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ ॥೩೮॥

ರಸಮಂ ಭಾವಮುಮಂ ಕಾ ।
ಳಸಮಂ ಕುಣಿಕೆಯುಮನಱಿದು ಕವಿಮಾರ್ಗದೊಳಂ ॥
ಪೊಸದೇಸೆಯ ನುಡಿಗಳೊಳಂ ।
ಪೊಸಯಿಪ ಬಲ್ಮೆಗೆ ಚತುರ್ಮುಖಂ ಕವಿರನ್ನಂ ॥೩೯॥

ದೊರೆಯಱಿವ ವಸ್ತುಪುರುಷರ್ ।
ಪರಿಕಿಸಿ ಬೆಲೆಮಾಡೆ ಗಂಗಮಂಡಲ ಚಕ್ರೇ ॥
ಶ್ವರಕಟಕೋತ್ತಮನಾಯಕ ।
ವಿರಚನೆಯಿನನರ್ಘರತ್ನಮಾದಂ ರತ್ನಂ ॥೪೦॥

ವಸುಧಾಪತಿಯ ಕಟಕದೊ ।
ಳೆಸೆದೊಪ್ಪೆ ಸುವರ್ಣರಚನೆ ಕೇವಣದೊಳ್ ಸೇ ॥
ರಿಸಿದುದಱಿಂದೀಗಳ್ ರಂ ।
ಜಿಸಿದ ಮಹಾರತ್ನಮೆನಿಸಿದಂ ಕವಿರತ್ನಂ ॥೪೧॥

೩೮. ಪೂರ್ವದ ಶ್ರೇಷ್ಠ ಕವಿಗಳಾರಿಂದಲೂ ಒಡೆಯಲಾಗದಿದ್ದ ಶ್ರೀ ಸರಸ್ವತಿಯ ಭಂಡಾರದ ಮುದ್ರೆಯನ್ನು ವಾಕ್‌ಪ್ರೌಢಿಮೆಯುಳ್ಳ ತನ್ನ ಕಾವ್ಯದಲ್ಲಿ ಕವಿ ರತ್ನನು ಒಡೆದು ತೋರಿದನು.

೩೯. ರಸ, ಭಾವ, ಬಂಧವಿಶೇಷ, ಅನ್ವಯ - ಇವೆಲ್ಲವನ್ನೂ ಚೆನ್ನಾಗಿ ಅರಿತುಕೊಂಡು, ಬರೆಯುವ ಕಾವ್ಯಮಾರ್ಗದಲ್ಲಿಯೂ, ಹೊಸ ಚೆಲುವಿನ ಮಾತುಗಳಲ್ಲಿಯೂ ಕವಿ ರನ್ನನು ಚತುರ್ಮುಖ (ಬ್ರಹ್ಮ) ನಾಗಿರುವನು.

೪೦. ಪರೀಕ್ಷಿಸಿ ಬೆಲೆ ಕಟ್ಟಬಲ್ಲ ಪ್ರಮಾಣಪುರುಷರು ಬೆಲೆಮಾಡಲಾಗಿ ಗಂಗಮಂಡಲ ಚಕ್ರೇಶ್ವರನ ರಾಜಧಾನಿಯಲ್ಲಿ ಮಾನ್ಯನಾದ ರತ್ನನು ಅಮೂಲ್ಯ ರತ್ನವೆಂದು ಹೆಸರಾದನು.

೪೧. ಚಕ್ರವರ್ತಿಯ ರಾಜಧಾನಿಯಲ್ಲಿ (ಗೌರವಾನ್ವಿತವಾಗಿ) ಸೇರಿಸಿಕೊಂಡು ದುದರಿಂದ ಮೊದಲೆ ತೇಜಸ್ವಿಯಾದ ಕವಿ ರತ್ನನು ಈಗ ಚಿನ್ನದಲ್ಲಿ ಕೆಚ್ಚಿದ ಮಹಾರತ್ನ ವೆನಿಸಿದನು.

ಕನ್ನಡಮೆರಡಱುನೂಱಱ ।
ಕನ್ನಡಮಾ ತಿರುಳ ಕನ್ನಡಂ ಮಧುರಮ್ಯೋ ॥
ತ್ಪನ್ನಂ ಸಂಸ್ಕೃತಮೆನೆ ಸಂ ।
ಪನ್ನಂ ನೆಗಲ್ದುಭಯಕವಿತೆಯೊಳ್ ಕವಿರನ್ನಂ ॥೩೨॥

ಶ್ರುತರಮಣೀಯನೆ ಕವಿತಾ ।
ಚತುರನೆ ಚಾರಿತ್ರಮಣಿವಿಭೂಷಣರತ್ನಂ ॥
ಶ್ರುತರಮಣೀಯನೆ ಕವಿತಾ ।
ಚತುರನೆ ಚಾರಿತ್ರರತ್ನಜಲಧಿಯ ರತ್ನಂ ॥೪೩॥

ರತ್ನಪರೀಕ್ಷಕನಾಂ ಕೃತಿ ।
ರತ್ನಪರೀಕ್ಷಕನೆನೆಂದು ಫಣಿಪತಿಯ ಫಣಾ ॥
ರತ್ನಮುಮಂ ರನ್ನನ ಕೃತಿ ।
ರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ ॥೪೪॥

ಒಳಪೊಕ್ಕು ನೋಡೆ ಭಾರತ ।
ದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂ ॥
ತೊಳಕೊಂಡತ್ತೆನೆ ಸಿಂಹಾ ।
ವಳೋಕನಕ್ರಮದಿನಱೆಪಿದಂ ಕವಿರನ್ನಂ ॥೪೫॥

೪೨. (ಬೆಳ್ವೊಲ -೩೦೦ ಹಾಗೂ ಪುಲಿಗೆರೆ - ೩೦೦ ಸೇರಿದ) ಎರಡರು ನೂರರಲ್ಲಿ ಪ್ರಚಲಿತವಾಗಿ ಇರುವ ಕನ್ನಡವೇ ತಿರುಳುಗನ್ನಡ ; ಆ ಕನ್ನಡ ಹಾಗು ಮಧುರವಾದ ಸಂಸ್ಕೃತ - ಇವೆರಡರಲ್ಲಿಯೂ ಪ್ರಭುತ್ವವನ್ನು ಪಡೆದ ಕವಿ ರನ್ನನು ಉಭಯ ಭಾಷೆಗಳಲ್ಲಿಯೂ ಸಮರ್ಥ ಕವಿಯೆನಿಸಿಕೊಂಡಿರುವನು.

೪೩. ರತ್ನನು ವಿದ್ಯಾಸಂಪನ್ನನಾಗಿ ಶೋಭಿಸುವವನೆ ? ಕಾವ್ಯರಚನೆಯಲ್ಲಿ ಚತುರನೆ ? ಶೀಲವೆಂಬ ರತ್ನದಿಂದ ಅಲಂಕೃತನಾಗಿರುವನೆ ? (ಎಂದು ಕೇಳಿದರೆ) ಅಹುದು. ಆತನು ಆಗಮಾದಿಯಾದ ಸರ್ವವಿದ್ಯಾಸಂಪನ್ನನೇ ; ಕಾವ್ಯ ನಿರ್ಮಾಣ ಚತುರನೇ ಸರಿ. ಶೀಲವೆಂಬ ರತ್ನಸಮುದ್ರದಲ್ಲಿ ಜನಿಸಿದ ಅನರ್ಘ್ಯರತ್ನನೇ ಈ ಕವಿ ರತ್ನನು.

೪೪. ರತ್ನಪರೀಕ್ಷಕನೆಂದು ಆದಿಶೇಷನ ಹೆಡೆಯಲ್ಲಿರುವ ರತ್ನವನ್ನೂ, ಕೃತಿ ರತ್ನ (ಶ್ರೇಷ್ಠಕಾವ್ಯ)ದ ಪರೀಕ್ಷಕನೆಂದು ರನ್ನನ ಕೃತಿರತ್ನವನ್ನೂ ಪರೀಕ್ಷಿಸಿ ಬೆಲೆಗಟ್ಟುವೆನೆಂಬುವನಿಗೆ ಧೈರ್ಯವೆಂತಹುದು !

೪೫. ಪರೀಕ್ಷಿಸಿ ನೋಡಿದರೆ, ಮಹಾಭಾರತದ ಕತೆಯೆಲ್ಲವನ್ನೂ ಈ ಗದಾಯುದ್ಧ ಒಳಗೊಂಡಿದೆ ಎಂಬಂತೆ ಕವಿರನ್ನನು (ಆ ಪೂರ್ವಕಥೆಯನ್ನು) ಸಿಂಹಾವಲೋಕನ ಕ್ರಮದಿಂದ ತಿಳಿಸಿರುವನು.)

ವನಿತಾನಾಯಕರತ್ನಂ ।
ತನೂದರೀಕನಕಸೂತ್ರರತ್ನಂ ಕಾಂತಾ ।
ಸ್ತನಹಾರರತ್ನಮಬಲಾ ।
ಜನಚೂಡಾರತ್ನಮೆನಿಸಿದಂ ಕವಿರತ್ನಂ ॥೪೬॥

ಕವಿಗಳೊಳಾ ಪುರಾಣಕವಿಪುಂಗವರೊಳ್ಳಿದರೀಗಳಿಲ್ಲ ಸ ।
ತ್ಕವಿಗಳೆನಲ್ಕೆವೇಡವರ ಪೋದೊಡವಂದಿರ ಕಬ್ಬಮಿನ್ನುಮಿ ॥
ರ್ಪುವು ಗುಣದೋಷಮಂ ನಿಕಷಮಿಟ್ಟು ಪರೀಕ್ಷಿಸಿ ನೋಡೆ ತಾವೆ ಪೇ ।
ಱವೆ ಬುಧರಿರ್ದು ನೋೞ್ಪುದು ಪುರಾತನನೂತನಕಾವ್ಯರೇಖೆಯಂ ॥೪೭॥

ಗುಣಮನೆ ತೋರ್ಪಂ ದೋಷದ ।
ಗುಣಂಗಳನೆ ನೆಗೞ್ದು ತೋರ್ಪ ದುರ್ಜನನುಮದೇಂ ॥
ಗುಣಗಣನೆಗೆ ತೋರ್ಪಂ ಕೃತಿ ।
ಗುಣದೋಷಪರೀಕ್ಷೆಗಾರನಾರ್ ಬಾರಿಪರೋ ॥೪೮॥

ಶ್ರೀಯುತನೊಳುದಾರತೆ ವಾ ।
ಕ್ಶ್ರೀಯುತನೊಳಮತ್ಸರತ್ವಮಾಗದುದಾರಂ ॥
ಶ್ರೀಯುತನಮತ್ಸರಂ ವಾ ।
ಕ್ಶ್ರೀಯುತನಾದೊಡೆ ಕೃತಾರ್ಥರಾಗರೆ ಕವಿಗಳ್ ॥೪೯॥

೪೬. ಕವಿರತ್ನನು ವನಿತೆಯರ ಕೊರಳ ಹಾರದಲ್ಲಿರುವ ಮಧ್ಯರತ್ನವೂ, ಚೆಲುವೆಯರ ಚಿನ್ನದ ಕಟಿಸೂತ್ರ ರತ್ನವೂ, ಕಾಂತೆಯರ ಎದೆಯ ಮೇಲಿರುವ ಹಾರರತ್ನವೂ, ಅಬಲೆಯರ ಶಿರೋರತ್ನವೂ ಎನಿಸಿದನು.

೪೭. ಕವಿಗಳಲ್ಲಿ ಪೂರ್ವಕಾಲದ ಕವಿಗಳೆ ಮಿಗಿಲಾದವರು ; ಈಗ ಅಂತಹ ಒಳ್ಳೆಯ ಕವಿಗಳಿಲ್ಲ ಎಂದು ಆಡಲಾಗದು. ಆ ಕವಿಗಳು ಇಲ್ಲವಾದರೂ ಅವರು ರಚಿಸಿದ ಕಾವ್ಯಗಳು ಇಂದಿಗೂ ಉಳಿದಿವೆ. ಅವುಗಳನ್ನೂ ಈಗಿನವರ ಕಾವ್ಯಗಳನ್ನೂ ಬಲ್ಲವರು ಒರೆಗಿಟ್ಟು ನೋಡಿ ಪುರಾತನ ಹಾಗು ಆಧುನಿಕ ಕಾವ್ಯಗಳೆರಡರ ಬೆಲೆಯನ್ನು ಕಟ್ಟಬೇಕು.

೪೮. ಕೇವಲ ಗುಣಗಳನ್ನು ಎತ್ತಿ ತೋರುವವನಾಗಲಿ, ಕೇವಲ ದೋಷಗಳನ್ನು ಎತ್ತಿ ತೋರುವ ದುಷ್ಟನಾಗಲಿ, ಕಾವ್ಯವನ್ನು ಎಂದಾದರೂ ಬೆಲೆಗಟ್ಟಬಲ್ಲರೆ ? ಕಾವ್ಯಕೃತಿಯಲ್ಲಿರುವ ಗುಣದೋಷಗಳೆರಡನ್ನೂ ಪರೀಕ್ಷಿಸಬೇಕು. ಅದಕ್ಕೆ ಯಾರದೇನು ಅಡ್ಡಿ ?

೪೯. ಶ್ರೀಮಂತನಲ್ಲಿ ಔದಾರ್ಯಬುದ್ಧಿಯೂ, ವಚೋನಿಪುಣನಲ್ಲಿ ಮಾತ್ಸರ್ಯ ಹೀನತೆಯೂ ಇರುವುದಿಲ್ಲ. ಔದಾರ್ಯಬುದ್ಧಿಯುವನಿಗೆ ಶ್ರೀಮಂತಿಕೆಯೂ, ಮತ್ಸರವಿಲ್ಲದವನಿಗೆ ವಾಕ್ಚಾತುರ್ಯವೂ ಒದಗಿ ಬಂದರೆ ಕವಿಗಳು ಧನ್ಯರಾಗಲಿಕ್ಕಿಲ್ಲವೆ?

ಪ್ರತಿಭೆ ನಿಸರ್ಗಮುಂಟು ಕಿಱಿದೋದುಗಳೊಳ್ ಕಿಱಿದುಂಟು ಬಲ್ಮೆ ಶೀ ।
ಘ್ರತೆ ಕಿರಿದುಂಟು ಪೇೞ್ಪೊಡವರಿ[ಂದ]ಳವಲ್ಲದುದಂತಣಂ ಸರ ।
ಸ್ವತಿ ವರವಿತ್ತವೊಲ್ ಕೆಲಬರೋದದೆ ಕೇಳದೆ ಕಲ್ಗಳಂತೆ ಗ ।
ರ್ವಿತರಡಸಿರ್ಪರರ್ಥಕೃತಿಗೇಂ ಮತಿವಂತರೊ ಪುಣ್ಯವಂತರೋ ॥೫೦॥

ವನರುಹಭವನೆನಿಸಿದ ದಂ ।
ಡನಾಯಕಂ ಕೇಶಿ ತಿರ್ದೆ ಪೇೞ್ದಂ ಕವಿರ ॥
ತ್ನನ ಪೇೞ್ದ ಕೃತಿ ಯಶಶ್ರೀ ।
ವನಿತೆಗಲಂಕೃತಿಯೆನಿಪ್ಪುದೊಂದಚ್ಚರಿಯೇ ॥೫೧॥

ಕುರುಭೂಭೃದ್ಬಲತೂಲಕಾಲಪವನಂ ಕೌರವ್ಯಗಂಧೇಭಕೇ ।
ಸರಿ ದುಶ್ಶಾಸನರಕ್ತರಕ್ತವದನಂ ದುರ್ಯೋಧನೋರುಕ್ಷ್ಮಮಾ ।
ಧರವಜ್ರಂ ಕುರುರಾಜರತ್ನಮಕುಟೋತ್ಕೂಟಾಂಘ್ರಿಸಂಘಟ್ಟಸಂ ॥
ಗರನೆಂದೆಂದಭಿವರ್ಣಿಪೆಂ ರಣಯಶಶ್ರೀರಾಮನಂ ಭೀಮನಂ ॥೫೨॥

ದೆಸೆದೆಸೆಗೋಡಿದನ್ಯಕರಿ ದಿಕ್ಕರಿಯಾದುದರಾತಿಭೂಭುಜ ।
ಪ್ರಸರಮೆ ದಿಕ್ಪತಿಪ್ರಸರಮಾದುದು ವೈರಿಬಲಂ ಕುಮಾರಿಯರ್ ॥
ಬೆಸಗೊಳೆ ದಿಕ್ಕುಮಾರಿಯರೆನಲ್ ದೊರೆಯಾದುದದರ್ಕೆ ಮೆಚ್ಚಿ ಬ ।
ಣ್ಣಿಸಲಭಿಯೋಗಮಾಯ್ತೆನಗೆ ಸಾಹಸಭೀಮನ ಸಾಹಸಂಗಳಂ ॥೫೩॥

೫೦. ಸ್ವಲ್ಪ ಪ್ರತಿಭೆಯಿರುತ್ತದೆ ; ಅಲ್ಪ ಸ್ವಲ್ಪ ಪಾಂಡಿತ್ಯವನ್ನೂ ಸಂಪಾದಿಸಿರುತ್ತಾರೆ; ಶೀಘ್ರವಾಗಿ ಬರೆಯುವ ಶಕ್ತಿಯೂ ಕೊಂಚ ಉಂಟು. ಆದರೆ ಇಷ್ಟರಿಂದಲೇ ಅವರಿಗೆ ಕಾವ್ಯರಚನೆಯ ಸಿದ್ಧಿಯಾಗಲಾರದು ; ಅದು ಅವರ ಕೈಯಿಂದ ಆಗದ ಮಾತು. ಏನನ್ನೂ ಓದದೆ, ಕೇಳದೆ ಗರ್ವದ ಶಿಲೆಗಳಾಗಿದ್ದು, ಈ ಕೆಲವರು ಸರಸ್ವತಿಯೆ ತಮಗೆ ವರವಿತ್ತಳೆಂಬಂತೆ ಅರ್ಥಪ್ರಚುರವಾದ ಕಾವ್ಯಗಳನ್ನು ರಚಿಸುವುದಕ್ಕೆ ಹೊರಡುತ್ತಾರೆ. ಇವರೇನು ಬುದ್ಧಿವಂತರೊ ಪುಣ್ಯವಂತರೊ ?

೫೧. ಬ್ರಹ್ಮನೆನಿಸಿಕೊಂಡ ದಂಡನಾಯಕ ಕೇಶಿ ತಿದ್ದಲಾಗಿ ಕವಿರತ್ನ ವಿರಚಿತವಾದ ಕಾವ್ಯವು ಯಶಸ್ಸೆಂಬ ವನಿತೆಗೆ ಭೂಷಣವೆನಿಸುವುದು (ಅತ್ಯಧಿಕ ಯಶಸ್ಸನ್ನು ಪಡೆಯುವುದು) ಆಶ್ಚರ್ಯದ ಮಾತೆ ?

೫೨. ರಣಪರಾಕ್ರಮದಿಂದ ವಿಜಯಿಯಾಗಿ ಶೋಭಿಸುವ ಭೀಮಸೇನನನ್ನು ಕುರುರಾಜನೆಂಬ ಅರಳೆಯನ್ನು ಹಾರಿಸುವ ಗಾಳಿಯೆಂದು, ಕುರುಕುಲವೆಂಬ ಗಂಧಗಜಕ್ಕೆ ಸಿಂಹಸ್ವರೂಪನಾದವನೆಂದು ದುಃಶಾಸನನ ರಕ್ತವನ್ನು ಕುಡಿದು ಬಾಯಿ ಕೆಂಪಾದವನೆಂದು, ದುರ್ಯೋಧನನ ತೊಡೆಗಳೆಂಬ ಬೆಟ್ಟಗಳನ್ನು ಸೀಳುವ ವಜ್ರವೆಂದು, ಕುರುರಾಜನ ರತ್ನಕಿರೀಟವನ್ನು ಕಾಲಿಂದ ಮೆಟ್ಟಿ ಯುದ್ಧವನ್ನು ಗೆದ್ದವನೆಂದು ಬಣ್ಣಿಸುವನು.

೫೩. (ಸತ್ಯಾಶ್ರಯನನ್ನು ಎದುರಿಸಲಾರದೆ) ದಿಕ್ಕುದಿಕ್ಕಿಗೆ ಓಡಿಹೋದ ಶತ್ರು ಗಜಗಳೆ ದಿಗ್ಗಜಗಳಾದುವು ; ಹಿಮ್ಮೆಟ್ಟಿ ಓಡಿದ ವೈರಿರಾಜರೆ ದಿಕ್ಪತಿಗಳಾದರು ; ಶತ್ರುರಾಜರ

ಕರಮಿಱಿದು ಹಿಡಿಂಬಜಟಾ ।
ಸುರರ ಜರಾಸಂಧಸಂಧಿಗಳುಮಂ ಬಕಸಂ ॥
ಹರಣಂ ಕೀಚಕಮಥನಂ ।
ನಿರಸ್ತಮಿತವೈರಿನಿವಹಗಜಸಿಂಹಬಲಂ ॥೫೪॥

ಖಳದುಶ್ಶಾಸನಕೃಷ್ಣಲೋಹಿತಜಲಾಶ್ಲಿಷ್ಟಂ ಕುರುಪ್ರೋದ್ಭವ ।
ಪ್ರಳಯಜ್ವಾಲೆ ಸುಯೋಧನೋರುಮಕುಟೋದ್ಘಟ್ಟಪ್ರತಿಜ್ಞಾಕ್ಷರಾ ॥
ವಳಿವಿನ್ಯಸ್ತವಿಶಾಲನಿಶ್ಚಳಶಿಲಾಸ್ತಂಭಂ ಕುರುಕ್ಷೇತ್ರದೊಳ್ ।
ಪ್ರಳಯೋಗ್ರಾಂತಕನಂತಗುರ್ವನೊಳಕೊಂಡಿರ್ದಂ ಹಿಡಿಂಬಾಂತಕಂ ॥೫೫॥

ಆ ಪ್ರಸ್ತಾವದೊಳ್ ದೃಷ್ಟಾದೃಷ್ಟಪರಂಪರೆಯೆಂಬ ವೃದ್ಧಕಂಚುಕಿಯುಂ ಬುದ್ಧಿಮತಿಯೆಂಬ ಮೇಳದ ಕೆಳದಿಯುಂಬೆರಸು ದೇವಾಸುರಯುದ್ಧಕ್ಕೆ ಕರಗಂಬೊತ್ತಳೆಂಬಂತನವರತ ಬಾಷ್ಪವಾರಿಧಾರಾಪೂರಪರಿವಾರಿತಪಲ್ಲವನೇತ್ರೆಯುಮಸಹ್ಯಪರಿಭವಾನಲದಂದಹ್ಯಮಾನ ಗಾತ್ರೆಯುಮಾಗಿ ಯಜ್ಞವೇದೀಸಂಭವೆಯುಂ ಯಾಜ್ಞಸೇನಿಯುಂ ದ್ರುಪದರಾಜೋಪವನಜಯ ವೈಜಯಂತಿಯುಮೆನಿಸಿದ ಪಾಂಚಾಲರಾಜತನೂಜೆಪವಮಾನತನೂಜನಲ್ಲಿಗೆವಂದು

ಕುಮಾರಿಯರು ದಿಕ್ಕುಮಾರಿಯರಾದರು. ಹೀಗೆ ಜರುಗಿದ ಸಾಹಸಭೀಮ ಸತ್ಯಾಶ್ರಯನ ಸಾಹಸಗಳನ್ನು ಮೆಚ್ಚಿ ಬಣ್ಣಿಸಲು ನನಗೆ ಆಸಕ್ತಿಯುಂಟಾಯಿತು.

೫೪. ಹಿಡಿಂಬ, ಜಟಾಸುರರನ್ನು ಕೊಂದು, ಜರಾಸಂಧನ ಕೀಲುಗಳನ್ನು ಕಳಚಿ, ಬಕಾಸುರನನ್ನೂ ಕೀಚಕನನ್ನೂ ಸಂಹರಿಸಿ, ವೈರಿಗಳನ್ನೆಲ್ಲ ನಿಶ್ಶೇಷಗೊಳಿಸಿ ಮಹಾಬಲಶಾಲಿಯೆನಿಸಿದವನು ಭೀಮಸೇನನು.

೫೫. ನೀಚ ದುಶ್ಶಾಸನನ ರಕ್ತವನ್ನು ಮೆತ್ತಿಕೊಂಡವನು, ಕುರುವಂಶವನ್ನು ಸುಡುವ ಪ್ರಳಯಾಗ್ನಿ, ದುರ್ಯೋಧನನ ತೊಡೆ ಹಾಗು ಕಿರೀಟಗಳನ್ನು ಸೀಳಿ ಕೆಡಹುವೆನೆಂಬ ಪ್ರತಿಜ್ಞಾಕ್ಷರಗಳನ್ನುಳ್ಳ ವಿಶಾಲವಾದ ಕಲ್ಗಂಬ, ಕುರುಕ್ಷೇತ್ರದಲ್ಲಿ ಪ್ರಳಯಕಾಲದ ಯಮ-ಎಂಬಂತೆ ಭೀಕರ ಪರಾಕ್ರಮವನ್ನುಳ್ಳವನು ಭೀಮಸೇನನು.

ವ॥ ಹೀಗಿರುವಾಗ ದೃಷ್ಟಾದೃಷ್ಟಪರಂಪರೆಯೆಂಬ ಮುಪ್ಪಡರಿದ ಕಂಚುಕಿಯನ್ನೂ, ಬುದ್ಧಿಮತಿಯೆಂಬ ಸಖಿಯನ್ನೂ ಜೊತೆಗೂಡಿ, ದೇವಾಸುರಯುದ್ಧಕ್ಕೆ ವ್ರತ ತೊಟ್ಟು ಕರಗವನ್ನು ಹೊತ್ತುಕೊಂಡಳೊ ಏನೊ ಎಂಬಂತೆ ನಿರಂತರವಾದ ಕಣ್ಣೀರ ಧಾರೆಯನ್ನು ತನ್ನ ಕೋಮಲವಾದ ಕಣ್ಣುಗಳು ಕರೆಯುತ್ತಿರಲಾಗಿ, ತಾಳಲಾಗದ ಅಪಮಾನದ ಬೆಂಕಿಯಲ್ಲಿ ಒಡಲು ಬೇಯುತ್ತಿರಲಾಗಿ, ಯಜ್ಞಸೇನನೆಂದು ಹೆಸರಾದ ದ್ರುಪದರಾಜನಿಗೆ ಯಜ್ಞ ಕುಂಡದಿಂದ ಉದ್ಭವಿಸಿ ಬಂದ ಮಗಳಾದ ದ್ರೌಪದಿಯು ಭೀಮಸೇನನ ಬಳಿಗೆ ಬಂದು,

ದನುಜವಿರೋಧಿ ಮಾಡಿದೊ[ಡಮಾಗದ ಸಂಧಿಯೊಳೇನೊ] ನಿನ್ನ ಸೈ ।
ಪಿನೊಳವಶಿಷ್ಟ [ನಿರ್ಧನ] ಸುಯೋಧನಮಾ [ಯ್ತರಿಸೇನೆ] ಸಿಂಧುನಂ ॥
ದನಧೃತರಾಷ್ಟ್ರರಿರ್ದೊರೆಯೆ ನಮ್ಮರಸಂ ಮರಳ್ದಿಂಬುಕೆಯ್ಗುಮೆಂ ।
ದನುಶಯಮಾದುದಿಂದೆನಗೆ ಸಂಶಯಮಂ ಕಳೆ ಕೌರವಾಂತಕಾ ॥೫೬॥

ಖಳದುಶ್ಶಾಸನವಕ್ಷ ।
ಸ್ಥಳೋಚ್ಚಲತೃಷ್ಣರಕ್ತಜಲದಿಂ ಕೋಪಾ ॥
ನಳನಂ ಮಟ್ಟಿಸದಿನ್ನುಂ ।
ಗಳಗಳಿತಸಕೋಪನಿರ್ಪ ತೆಱದಿಂದಿರ್ದಯ್ ॥೫೭॥

ಸಮವಾಯಮಹಿತರೊಳ್ ಸಂ ।
ಧಿಮಾಡಿ ಯಮಸೂನು ಪೇೞೆ ವನವಾಸವೆ ದಲ್ ॥
ನಿಮಗೆ ಶರಣೆನಗಮಂದ ।
ಗ್ನಿಮುಖದೆ ಪುಟ್ಟಿದುದಱಿಂದೆ ಶರಣಗ್ನಿಮುಖಂ ॥೫೮॥

ಎಂದು ನೊಂದು ನುಡಿಯೆ ಮರುನ್ನಂದನಂ ದರಹಸಿತವದನಾರವಿಂದನಾಗಿ ತನ್ನಂತರ್ಗತದೊಳ್

ಕುರುರಾಜಾನುಜಭೀಕರ ।
ಕರವಿಲುಳಿತನೀಲಕಬರಿಭರಮಂ ಪಿಡಿದುಂ ॥
ಪರಿಭವಿಸಲ್ ಕೃಷ್ಣೆಗೆ ಮಿಗೆ ।
ದೊರೆಕೊಳಿಸದೆ ಕೋಪಮಂ ಮನಸ್ತಾಪಮುಮಂ ॥೫೯॥

೫೬. ಕೃಷ್ಣನು ಪ್ರಯತ್ನ ಮಾಡಿದರೂ ಪೂರ್ವದಲ್ಲಿ ಕೌರವರೊಡನೆ ಸಂಧಾನವಾಗಲಿಲ್ಲ; ನಿನ್ನ ಪುಣ್ಯದಿಂದ ಶತ್ರುಸೈನ್ಯವೆಲ್ಲ ನಾಶವಾಗಿ ದುರ್ಯೋಧನನೊಬ್ಬನೆ ಉಳಿದುಕೊಂಡಿದ್ದಾನೆ. ಆದರೆ ಈಗ ಭೀಷ್ಮನೂ ಧೃತರಾಷ್ಟ್ರನೂ ಸೇರಿಕೊಂಡು ಹೇಳಿಬಿಟ್ಟರೆ ನಮ್ಮ ಅರಸು (ಧರ್ಮರಾಜನು) ಸಂಧಾನಕ್ಕೆ ಒಡಂಬಡುವನೊ ಏನೊ ಎಂದು ನನಗೆ ಕಳವಳವುಂಟಾಗಿದೆ. ಕೌರವವೈರಿಯಾದ ಭೀಮನೇ ಆ ಸಂಶಯವನ್ನು ನಿವಾರಿಸು.

೫೭. ನೀಚ ದುಶ್ಶಾಸನನ ಎದೆಯಿಂದ ನೆತ್ತರನ್ನು ಚಿಮ್ಮಿಸಿ ಅದರಿಂದ ನಿನ್ನ ಕೋಪಾಗ್ನಿಯನ್ನೆಲ್ಲ ನಂದಿಸಿಬಿಟ್ಟೆಯಾ ? ನೀನು ಕೋಪವೆಲ್ಲ ಇಳಿದು ಹೋದವನಂತೆ (ತೆಪ್ಪಗೆ) ಇರುವೆ.

೫೮. ಶತ್ರುಗಳೊಡನೆ ಕೂಡಿ ಸಂಧಿಮಾಡಿಕೊಂಡು ಧರ್ಮರಾಜನು ಹೇಳಿಬಿಟ್ಟರೆ, ನಿಮಗೆ (ಮತ್ತೆ) ವನವಾಸವೇ ಗತಿ ; ಬೆಂಕಿಯಲ್ಲಿ ಹುಟ್ಟಿಬಂದವಳಾದುದರಿಂದ ಬೆಂಕಿಗೆ ಬೀಳುವುದೇ ನನ್ನ ಗುರಿ.

ವ॥ ಹೀಗೆ ದುಃಖದಿಂದ ನುಡಿಯಲಾಗಿ, ಭೀಮಸೇನನು ಮುಗುಳ್ನಕ್ಕು, ತನ್ನ ಮನಸ್ಸಿನಲ್ಲಿಯೆ (ಹೀಗೆಂದುಕೊಂಡನು)

೫೯. ಕುರುರಾಜನ ತಮ್ಮನಾದ ದುಶ್ಶಾಸನನು ಭಯಾನಕವಾಗಿ ಕೈದುಡುಕಿ ತಲೆಗೂದಲನ್ನು ಹಿಡಿದೆಳೆದು ಅಪಮಾನ ಮಾಡಿದನು. ಅದರಿಂದ ದ್ರೌಪದಿಗೆ ಕೋಪವೂ ಮನಸ್ತಾಪವೂ ಕೆರಳದೆ ಉಂಟೆ ?

ಎಂದುಪಲಕ್ಷಿಸಿ

ಧಾತ್ರಿಯುಮನೀ ಹುತಾಶನ ।
ಪುತ್ರಿಯುಮಂ ಬಜೆದೆ ಸೋಲ್ತನಲ್ಲಂ ಜೂದಿಂ ॥
ಕ್ಷತ್ರಿಯತೇಜಮುಮಂ ಯಮ ।
ಪುತ್ರಂ ರಿಪುಗಂದೆ ಸೋಲ್ತನಾಗಲೆವೇಡಾ ॥೬೦॥

ಎಂದನಿಲಸುತಂ ನಿಜಾಗ್ರಜಂಗೆ ಮುಳಿದು

ಪರವಶದೊಳಿರ್ದರೋ ಮೇಣ್
ಪರಾರ್ಜಿತಪ್ರಾಣರಾದರೊ ದ್ರೌಪದಿಯಂ ॥
ಪರಿಭವಿಸುವಲ್ಲಿ ನೋಡು ।
ತ್ತಿರಲಕ್ಕುಮೆ ಪವನಸೂನುಗಂ ಪಾರ್ಥಂಗಂ ॥೬೧॥

ಎಂದು ತನಗಮರ್ಜುನಂಗಮೊಡನೆ ಮುಳಿದು

ವಿನಯಮನೆ ಬಗೆದು ವಿಕ್ರಮ ।
ಮನೆ ಬಗೆಯದೆ ನರನುಮಾನುಮೆಮಗಂ ಸಮ್ಮೋ ॥
ಹನಮಾದುದಕ್ಕುಮಂದ ।
ಣ್ಣನ ಸೂನೃತವಚನಮೆಂಬ ಮಂತ್ರಾಕ್ಷರದಿಂ ॥೬೨॥

ಎಂದು ಪಶ್ಚಾತ್ತಾಪಂಗೆಯ್ದು ಕುರುಕುಲವಿಳಯಜ್ವಾಲೆ ಸುಯೋಧನಪ್ರಳಯಕಾಲೆ ಪಾಂಚಾಲಿಯ ವದನಮಂ ನೋಡಿ

ವ॥ ಎಂದು (ಆ ಪ್ರಸಂಗವನ್ನು) ನೆನೆದುಕೊಂಡು

೬೦. ಅಂದು ಜೂಜಿನಲ್ಲಿ ಧರ್ಮರಾಜನು ಪಣವಿಟ್ಟು ಸೋತುದು ರಾಜ್ಯ ಮತ್ತು ಈ ದ್ರೌಪದಿ ಮಾತ್ರವಲ್ಲ ; ತನ್ನ ಕ್ಷತ್ರಿಯ ತೇಜಸ್ಸನ್ನೂ ಸೋತು ಶತ್ರುವಿಗೆ ಒಪ್ಪಿಸಿದನಲ್ಲವೆ ?

ವ॥ ಹೀಗೆಂದು ಅಣ್ಣನ ಮೇಲೆ ಕೋಪ ತಾಳಿ,

೬೧. ಮೈಮರೆತಿದ್ದರೋ, ಅಥವಾ ತಮ್ಮ ಪ್ರಾಣಗಳನ್ನು ಶತ್ರುಗಳಿಗೆ ಒಪ್ಪಿಸಿ ಕುಳಿತಿದ್ದರೊ ? ಹಾಗಿಲ್ಲವಾದರೆ ದ್ರೌಪದಿಯನ್ನು ತಮ್ಮ ಕಣ್ಣೆದುರಿಗೇ ಅಪಮಾನಗೊಳಿಸುತ್ತಿರುವಾಗ ಭೀಮನೂ ಅರ್ಜುನನೂ ತೆಪ್ಪಗೆ ನೋಡುತ್ತಾ ಇರುವುದೆಂತು ಸಾಧ್ಯ ?

ವ॥ ಎಂದು ತನ್ನ ಮೇಲೂ, ಅರ್ಜುನನ ಮೇಲೂ ಕೋಪಗೊಂಡು

೬೨. (ಅಣ್ಣನ ಮಾತು ಮೀರಕೂಡದೆಂಬ) ವಿನಯವನ್ನೇ ನೆನೆದೆವಲ್ಲದೆ, ಪರಾಕ್ರಮದ ಯೋಚನೆ ನನಗೂ ಅರ್ಜುನನಿಗೂ ಬರಲೇ ಇಲ್ಲವಲ್ಲ ! ಅಣ್ಣನ ಸತ್ಯವಚನವೆಂಬ ಮಂತ್ರಾಕ್ಷರದಿಂದ ನಮ್ಮಿಬ್ಬರಿಗೂ ಮೋಹನಿದ್ರೆ ಕವಿದಿರಬೇಕು.

ಗಳಿಯಿಸುತಿರೆ ಕಬರಿಭರಂ ।
ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ ॥
ನಳಿನಾನನೆ ನೀನಿರೆ ಕುರು ।
ಕುಳಾಂತಕಂ ಗಳಿತಕೋಪನೇ [ಕಲಿ] ಭೀಮಂ ॥೬೩॥

ಸತ್ಯಪ್ರತಿಜ್ಞನೆನೆ ಕುರು ।
ಪತ್ಯೂರುಕಿರೀಟಭಂಗಮಂ ಪಡೆದು ಜಗತ್ ।
ಸ್ತುತ್ಯಕೃತಕೃತ್ಯನೆನಿಸದೆ ।
ಸತ್ಯಾಶ್ರಯವೆಸರ್ಗೆ ಮುಯ್ಯನಾಂಪನೆ ಭೀಮಂ ॥೬೪॥

ಸಂಗರರಂಗದೊಳಿಜಿವ ಬೆ ।
ಡಂಗವೆಸರ್ ನೆಗಟೆ ನೆಗಟ್ಟು ಸಂಗರಮಂ ತೋ ॥
ರ್ಪಂ ಗಡ ನೆಗಟ್ದಾಹವಮ ।
ಲ್ಲಂಗಂ ಜಾಕವ್ವೆದೇವಿಗಂ ಪುಟ್ಟಿದುದಂ ॥೬೫॥

ನೀನಗ್ನಿಪುತ್ರಿಯಯ್ ಪವ ।
ಮಾನತನೂಭವನೆ ನಾನಣಂ ಕೂಡೆ ಸುಸಂ ॥
ಧಾನಮರಿನೃಪರೊಳೆಂತನ ।
ಲಾನಿಲಸಂಯೋಗಮುರಿಪದಿರ್ಕುಮೆ ಪಗೆಯಂ ॥೬೬॥

ವ॥ ಎಂದು ಪಶ್ಚಾತ್ತಾಪಪಟ್ಟು, ಕುರುವಂಶಕ್ಕೆ ಪ್ರಳಯಾಗ್ನಿಯೂ ಸುಯೋಧನನಿಗೆ ಸಾವನ್ನು ತರುವವಳೂ ಆದ ದ್ರೌಪದಿಯ ಮುಖವನ್ನು ನೋಡಿ (ಹೀಗೆ ನುಡಿದನು)-

೬೩. ಬಿಚ್ಚಿದ ನಿನ್ನ ಮುಡಿ ಹೀಗೆ ಇಳಿಬಿದ್ದೇ ಇರಲಾಗಿ, ನಿನ್ನ ಕಣ್ಣಿಂದ ನೀರು ಸುರಿಯುತ್ತಲೇ ಇರಲಾಗಿ, ಕಮಲಮುಖಿಯೆ, ವೀರಭೀಮನು ಕೋಪಹೀನನೆ ?

೬೪. ಮಾಡಿದ ಪ್ರತಿಜ್ಞೆಯನ್ನು ಸರಿಯಾಗಿ ಪೂರೈಸುವವನು ಎಂದು ಹೊಗಳಿಸಿಕೊಳ್ಳುವಂತೆ ಕುರುರಾಜನ ತೊಡೆಗಳನ್ನು ಸೀಳಿ ಕಿರೀಟವನ್ನು ಭಂಗಿಸಿ ಜಗನ್ಮಾನ್ಯನೂ ಕೃತಾರ್ಥನೂ ಎನಿಸದೆ ಭೀಮನು 'ಸತ್ಯಾಶ್ರಯ' ಎಂಬ ತನ್ನ ಬಿರುದಿಗೆ ಹೆಮ್ಮೆ ಪಡುವನೆ ?

೬೫. ರಣರಂಗದಲ್ಲಿ ಇರಿವಬೆಡಂಗನೆಂಬ ತನ್ನ ಹೆಸರು ಸಾರ್ಥಕವಾಗುವ ಹಾಗೆ ಯುದ್ಧಮಾಡಿ ಸತ್ಯಾಶ್ರಯನು ಪ್ರಖ್ಯಾತನಾದ ಆಹವಮಲ್ಲ ತೈಲಪನಿಗೂ ಜಾಕವ್ವೆದೇವಿಗೂ ಹುಟ್ಟಿದವನೆಂದು ತೋರುವನು.

೬೬. ನೀನು ಬೆಂಕಿಯ ಮಗಳು ; ನಾನು ವಾಯುವಿನ ಮಗ. ನಾವಿಬ್ಬರೂ ಕೂಡಿರುವಾಗ ಶತ್ರುರಾಜರೊಡನೆ ಸಂಧಾನವಾಗುವುದು ಹೇಗೆ ಸಾಧ್ಯ ? ಗಾಳಿ - ಬೆಂಕಿಗಳ ಸೇರುವೆ ಹಗೆಗಳನ್ನು ಸುಟ್ಟು ಬೂದಿ ಮಾಡದೆ ಇದ್ದೀತೆ ?

ಕುರುಕುಲಜೀವಾಕರ್ಷಣ
ಪರಿಣತಮಿದು ಕಾಳಹಸ್ತಮಲ್ಲದೆ ಪರಮೇ ॥
ಶ್ವರಿ ಕೇಶಹಸ್ತಮಕ್ಕುಮೆ ।
ಪರಾಭವಜ್ವಲನಧೂಮಕೃಷ್ಣಂ ಕೃಷ್ಣೇ ॥೬೭॥

ತೊಡೆಗಳನುಡಿಯಲ್ ಗುರುಗಳ್ ।
ತೊಡೆಸಕ್ಕೆಗಳಾಗೆ ಮಕುಟಭಂಗಂಮಾಡಲ್ ॥
ನುಡಿದೆನಗೆ ಮಕುಟಬದ್ಧರು ।
ಮೊಡನಿರ್ದರುಮವರ ಕಂಭಶಕ್ತಿಗಳಾದರ್ ॥೬೮॥

ಕುರುನಂದನರಂ ಕೊಂದೆಂ ।
ಕುರುಶಾಬಾನುಜನ ನೆತ್ತರಂ ಕುಡಿದೆಂ ಪೂ ॥
ಣ್ದೆರಡಂ ತೀರ್ಚಿದೆನಿರ್ದಪು
ವೆರಡುಮವಂ ತೀರ್ಚೆ ತೀರ್ಚದಿರ್ಪೆನೆ ಪಗೆಯಂ ॥೬೯॥

ಊರುಗಳನುಡಿವೆನೊದೆವೆಂ ।
ಕೌರವಪರಿಬೃಢನ ಮಕುಟಮಂ ವೇಣೀಸಂ ॥
ಹಾರಂಮಾಡುವೆನದಱಿಂ ।
ಭಾರಮದಿನಿತಲ್ಲದೆನ್ನ ಪರಿಭವಭಾವಂ ॥೭೦॥

ಕುರುಕುಲಶೋಣಿತಪಾದಪದ್ಮತಳಂ ತಳೋ ।
ದರಿಗೆ ವೃಕೋದರನಾಗಿಪಂ ಕಚಬಂಧಬಂ ॥
ಧುರತೆಯನಾತನ ಪೂಣ್ಕೆ ಪೂಣ್ಕೆ ಶಿಲಾತಳಾ ।
ಕ್ಷರಮೆನಿಸಿರ್ಪ ಜನೋಕ್ತಿಯಂ ಪುಸಿಮಾಳ್ಪನೇ ॥೭೧॥

೬೭. ಎಲೈ ಚಕ್ರವರ್ತಿನಿಯೆ, ಅಪಮಾನಾಗ್ನಿಯ ಹೊಗೆಯಿಂದ ಕಪ್ಪಿಟ್ಟ ನಿನ್ನ ಈ (ಸಮೃದ್ಧವಾದ ತಲೆಗೂದಲು), ಕುರುವಂಶದ ಜೀವಗಳನ್ನೂ ಎಳೆದೆಳೆದು ಕೊಲ್ಲುವುದರಲ್ಲಿ ನಿಷ್ಣಾತವಾದ ಯಮಹಸ್ತವಲ್ಲದೆ, ಕೇವಲ ಕೇಶಹಸ್ತವೆನಿಸೀತೆ ?

೬೮. ದುರ್ಯೋಧನನ ತೊಡೆಗಳನ್ನು ಮುರಿಯುವೆನೆಂದೂ, ಅವನ ಕಿರೀಟವನ್ನೂ ಭಂಗಗೊಳಿಸುವೆನೆಂದೂ ನಾನು ಪ್ರತಿಜ್ಞೆಮಾಡಿದಾಗ (ಭೀಷ್ಮದ್ರೋಣರೆ ಮೊದಲಾದ) ಹಿರಿಯರು ಸಾಕ್ಷಿಗಳಾಗಿದ್ದರು. ಮಕುಟಬದ್ಧರಾಜರೂ ನನ್ನ ಒಡನಾಡಿಗಳೂ ಆ ಹಿರಿಯರಿಗೆ 'ಕಂಭಶಕ್ತಿ' (?)ಗಳಾಗಿದ್ದರು.

೬೯. ಕೌರವರನ್ನು ಕೊಂದೆನು. ಕುರುರಾಜನ ಮೆಚ್ಚಿನ ಮರಿಯಾಗಿದ್ದ ಆತನ ತಮ್ಮನ ರಕ್ತವನ್ನು ಕುಡಿದೆನು. ಹೀಗೆ ನನ್ನ ಎರಡು ಪ್ರತಿಜ್ಞೆಗಳನ್ನು ಈಡೇರಿಸಿದೆನು. ಇನ್ನುಳಿದವು ಎರಡು ಪ್ರತಿಜ್ಞೆಗಳು. ಅವೆರಡನ್ನೂ ತೀರಿಸಿ ನನ್ನ ವೈರವನ್ನು ಪೂರ್ಣವಾಗಿ ಸಾಧಿಸದೆ ಇರುವೆನೆ ?

೭೦. ದುರ್ಯೋಧನನ ತೊಡೆಗಳನ್ನು ಸೀಳುವೆನು, ಕೌರವಶ್ರೇಷ್ಠನೆಂದುಕೊಂಡ ಆತನ ಕಿರೀಟವನ್ನು ಒದೆಯುವೆನು. ಬಳಿಕ ನಿನ್ನ ಮುಡಿಯನ್ನು ಹೆಣೆದು ಕಟ್ಟುವೆನು.

೭೧. ಕುರುವಂಶದ ರಕ್ತದಿಂದ ಕೆಂಪಾದ ಪಾದಗಳಿಂದಲೆ ನಡೆದು ಬಂದು ಭೀಮಸೇನನು ಸೆಳೆನಡುವಿನ ದ್ರೌಪದಿಗೆ ಮುಡಿ ಹೆಣೆದು ಸಿಂಗರಿಸುವ ಕಾರ್ಯವನ್ನು

ಅಱನ ಮಗಂ ಪ್ರಾರ್ಥಿಸೆ ಬಾಂ ।
ದೊಱೆಯ ಮಗಂ ಮಾಡೆ ಸಂಧಿಯಾದಪುದೆನುತುಂ ॥
ಮಱುಗದಿ[ರಣ್ಣನ]ಮಾತಂ ।
ಪೆಱಗಿಕ್ಕುವೆನಜ್ಜನಿರ್ದು ಮಾಣ್ಬೊಡಮೀಯೆಂ ॥೨೨॥

ದಂಡಿತವೈರಿ ವೈರಿಬಲಲೋಹಿತಬಂಧುರದಂಡಮೀ ಭುಜಾ ।
ದಂಡಮುಮಾಜಿಭೀಕರವಿರೋಧಿವಿದಾರಣದಂಡಮೀ ಗದಾ ।
ದಂಡಮುಮುಗ್ರಪನ್ನಗವಿಭೀಷಣಮಾಹವಶೌಂಡಮೀ ಧನು ।
ರ್ದಂಡಮುಮುಳ್ಳಿನಂ ದ್ರುಪದನಂದನೆ ಸಂಧಿಯನಾಗಲೀವೆನೇ ॥೨೩॥

ಎಂದು ಮತ್ತಮಿಂತೆಂದಂ

ಕುರುರಾಜಾರ್ಣವಬಾಡಬಾಗ್ನಿ ಕುರುರಾಜಾರಣ್ಯದಾವಾನಲಂ ।
ಕುರುರಾಜಾಂಬುಜಚಂದ್ರರೋಚಿ ಕುರುರಾಜಾದ್ರೀಂದ್ರವಜ್ರಾಯುಧಂ ॥
ಕುರುರಾಜೋಗ್ರತಮಸ್ತಮೋರಿ ಕುರುರಾಜೇಭೇಂದ್ರಕಂಠೀರವಂ ।
ಪಿರಿದುಂ ಕಾಂತೆಯ ಮುಂದೆ ಪೂಣ್ದು ನುಡಿದಂ ಚಾಳುಕ್ಯಕಂಠೀರವಂ ॥೨೪॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲ ತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿಕವಿಚಕ್ರವರ್ತಿ ಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀಸಾಹಸಭೀಮ ವಿಜಯದೊಳ್ ಭೀಮಸೇನಪ್ರತಿಜ್ಞಾವರ್ಣನಂ ಪ್ರಥಮಾಶ್ವಾಸಂ ॥

ಈಡೇರಿಸುವನು. ಆತನು 'ಕೈಕೊಂಡ ಪ್ರತಿಜ್ಞೆಯೆಂದರೆ ಶಿಲಾಲಿಪಿಯಲ್ಲಿ ಕೆತ್ತಿದಂತೆ' ಎಂಬ ಲೋಕೋಕ್ತಿಯನ್ನು ಸುಳ್ಳಾಗಗೊಡುವನೆ ?

೨೨. ಯಮನ ಮಗ (ಧರ್ಮರಾಜ)ನು ಬೇಡಿಕೊಂಡರೆ, ಆಕಾಶಗಂಗೆಯ ಮಗ (ಭೀಷ್ಮ)ನು ಮಾಡಿಸಿದರೆ ಶತ್ರುವಿನೊಡನೆ ಸಂಧಾನವಾದೀತೆಂದು ಕಳವಳಿಸಬೇಡ. (ಹಾಗೇನಾದರೂ ಸಂಧಿಯ ಮಾತು ಬಂದರೆ) ಅಣ್ಣನ ಮಾತನ್ನು ಮೀರುವೆನು ; ಅಜ್ಜ ಭೀಷ್ಮನೆ ಮುಂದಾಗಿ ಬಂದರೂ ಸಂಧಿ ಮಾಡಗೊಡೆನು.

೨೩. ಶತ್ರುಗಳನ್ನು ದಂಡಿಸಿ ವೈರಿಗಳ ರಕ್ತದಿಂದ ಸಿಂಗರಿಸಿಕೊಂಡ ಈ ನನ್ನ ತೋಳು, ಯುದ್ಧರಂಗದಲ್ಲಿ ಎದುರಾಳಿಗಳನ್ನು ಭಯಾನಕವಾಗಿ ಸೀಳಿದ ಈ ನನ್ನ ಗದೆ, ಕೆರಳಿದ ಸರ್ಪನಂತೆ ಭೀಕರವಾದ ಈ ನನ್ನ ರಣಧೀರ ಧನುಸ್ಸು - ಇವು ಮೂರು ಇರುವವರೆಗೆ ನಾನು ಸಂಧಿಯನ್ನು ಆಗಗೊಡುವೆನೆ ?

ವ॥ ಹೀಗೆಂದು ಮತ್ತೆ ಮುಂದುವರಿದು -

೨೪. ಕೌರವ ವಂಶವೆಂಬ ಕಡಲಿಗೆ ವಡವಾಗ್ನಿಯೂ, ಕುರುರಾಜನೆಂಬ ಅರಣ್ಯಕ್ಕೆ ಕಾಡುಗಿಚ್ಚೂ, ದುರ್ಯೋಧನನೆಂಬ ಕಮಲಕ್ಕೆ ಚಂದ್ರನೂ, ಕೌರವರಾಜನೆಂಬ ಮಹಾ ಪರ್ವತಕ್ಕೆ ವಜ್ರಾಯುಧವೂ, ಕುರುರಾಜನೆಂಬ ಘೋರಾಂಧಕಾರಕ್ಕೆ ಪ್ರಚಂಡ ಸೂರ್ಯನೂ, ಕುರುರಾಜನೆಂಬ ಮಹಾಗಜಕ್ಕೆ ಸಿಂಹನೂ ಆದ ಚಾಲುಕ್ಯಕಂಠೀರವ (ಭೀಮಸೇನ)ನು ತನ್ನ ಹೆಂಡತಿಯ ಮುಂದೆ ಪ್ರತಿಜ್ಞೆ ಮಾಡಿ ನುಡಿದನು.

# ದ್ವಿತೀಯಾಶ್ವಾಸಂ

ಶ್ರೀಯಂ ಕುರುಭೂಭೃದ್ಬಲ ।
ತೋಯಧಿಯೊಳ್ ಕಡೆದು ಪಡೆದು ಭುಜಮಂ[ದರ]ದಿಂ ॥
ದಾಯಾದಮಲ್ಲನೆನಿಸಿದ ।
ಜೀಯಂ ಭುಜಬಲವಿಭಾಸಿ ಸಾಹಸಭೀಮಂ ॥೧॥

ಅಂತು ಕೌರವ್ಯಕುಲಕಾಲಾನಲನುಂ ದುಶ್ಶಾಸನದನುಜವಿಶಾಲವಕ್ಷಃಸ್ಥಳಕೇಳೀನೃಪಸಿಂಹನುಂ ಕುರುರಾಜಾನುಜಮಹಾಮಹೀಜಮೂಲೋನ್ಮೂಲನಪ್ರಳಯಪ್ರಭಂಜನನುಂ ಪ್ರಬಳರಿಪುಬಳಭುಜಬಲಪರಿಕ್ಷಿಪಘೂರ್ಣಿತಾರ್ಣಪ್ರಳಯಾರ್ಣವನುಂ ಪ್ರಚಂಡಭುಜಬಲಾವಷ್ಟಂಭಗಂಭೀರನುಂ ಕುರುರಾಜನಿರ್ವ್ಯಾಜನಿಬಿಡೋರುದ್ವಯಭಂಗಪ್ರತಿಜ್ಞಾಭಾರನುಂ ಫಣಿಪತಿಕೇತನಧೂಮಕೇತುವುಂ ಪಾಂಡವಬಲಪ್ರದೀಪನುಂ ಪಾಂಡವಬಲಪ್ರಾಕಾರನುಂ ಏಕಾಂಗವೀರನುಂ ಜರಾಸಂಧಸಂಧಿಬಂಧವಿಘಟನನುಂ ಸತ್ಯಾಶ್ರಯಕುಲತಿಲಕನುಂ ಇಜೀವಬೆಡಂಗನುಂ ಸಾಹಸಭಟರ ಜವನುಂ ಚಾಳುಕ್ಯನಾರಾಯಣನುಂ ಚಾಳುಕ್ಯಕಂಠೀರವನುಂ ಚಾಳುಕ್ಯಮಾರ್ತಾಂಡನುಂ ಅಕಲಂಕಚರಿತನುಂ ಅಮ್ಮನ ಗಂಧವಾರಣನುಂ ಸಾಹಸಾಂಕನುಮೆನಿಸಿದ ಭೀಮಸೇನನಂತು ಆರೂಢಕೋಪನುಂ ಪ್ರತಿಜ್ಞಾರೂಢನುಮಾಗಿ

೧. ಕೌರವ ಸೈನ್ಯವೆಂಬ ಸಮುದ್ರವನ್ನು ತನ್ನ ತೋಳೆಂಬ ಮಂದರ ಪರ್ವತದಿಂದ ಕಡೆದು (ಜಯ)ಲಕ್ಷ್ಮಿಯನ್ನು ಪಡೆದು ಎಂದೆಂದೂ ಸೋಲದ ಬಾಹುಬಲದಿಂದ ಶೋಭಿಸುವ ಪರಾಕ್ರಮಿ ಭೀಮಸೇನನು 'ದಾಯಾದಮಲ್ಲ'ನೆಂದು ಹೆಸರಾದನು.

ವ॥ ಹೀಗೆ ಕೌರವಕುಲಕ್ಕೆ ಪ್ರಳಯಾಗ್ನಿಯೂ, ದುಶ್ಶಾಸನನೆಂಬ ರಾಕ್ಷಸನ ವಿಶಾಲವಾದ ಎದೆಯನ್ನು ಸೀಳಿ ಅದರಲ್ಲಿ ಆಟವಾಡಿದ ನರಸಿಂಹನೂ, ದುರ್ಯೋಧನನ ತಮ್ಮಂದಿರೆಂಬ ಹೆಮ್ಮರಗಳನ್ನು ಬೇರುಸಹಿತವಾಗಿ ಕಿತ್ತು ಹಾಕಿದ ಪ್ರಳಯದ ಬಿರುಗಾಳಿಯೂ, ಪ್ರಬಲವಾದ ಶತ್ರುಸೈನ್ಯವೆಂಬ ಉಕ್ಕೇರುವ ಸಮುದ್ರಕ್ಕೆ ಅದನ್ನು ಮುಳುಗಿಸಿಬಿಡುವ ಪ್ರಳಯಸಮುದ್ರವಾದವನೂ ಮಹಾಬಲಿಷ್ಠವಾದ ಬಾಹುಬಲದ ದರ್ಪದಿಂದ ಗಂಭೀರನಾದವನೂ, ದುರ್ಯೋಧನನ ದೃಢವಾದ ತೊಡೆಗಳನ್ನು ಸೀಳುವೆನೆಂಬ ಪ್ರತಿಜ್ಞೆಯುಳ್ಳವನೂ, ಸರ್ಪಧ್ವಜ (ದುರ್ಯೋಧನ)ನಿಗೆ ಧೂಮಕೇತುವೆನಿಸಿದವನೂ, ಪಾಂಡವಬಲಕ್ಕೆ ದೀಪದಂತೆ ಹಾಗೂ ರಕ್ಷಿಸುವ ಕೋಟೆಯ ಸುತ್ತುಗೋಡೆಯಂತಿರುವವನೂ, ಅಸಹಾಯಶೂರನೂ, ಜರಾಸಂಧನ ದೇಹದ ಕೀಲುಗಳು ಮರಳಿ ಕೂಡದಂತೆ ಸೀಳಿ ಒಗೆದವನೂ, ಸತ್ಯಾಶ್ರಯಕುಲಕ್ಕೆ ಭೂಷಣನೂ, ಇರಿವಬೆಡಂಗನೆಂಬ ಬಿರುದುಳ್ಳವನೂ, ಪರಾಕ್ರಮಿಗಳೆಂದುಕೊಳ್ಳುವ (ಶತ್ರು) ವೀರರಿಗೆ ಯಮಸ್ವರೂಪನೂ, ಚಾಳುಕ್ಯ ಚಕ್ರವರ್ತಿಯೂ, ಚಾಳುಕ್ಯಸಿಂಹನೂ, ಚಾಳುಕ್ಯಸೂರ್ಯನೂ, ಪರಿಶುದ್ಧ ಶೀಲವುಳ್ಳವನೂ, 'ಅಮ್ಮನ ಗಂಧವಾರಣ'ನೂ, ಪರಾಕ್ರಮದಿಂದ ಪ್ರಖ್ಯಾತನಾದವನೂ ಎನಿಸಿದ ಭೀಮಸೇನನು ಕೋಪವೇರಿ ಪ್ರತಿಜ್ಞಾಬದ್ಧನಾಗಿ

ಸಮದೇಭಕುಂಭಭೇದನ ।
ಸಮಯೋಗ್ರನಖಂಗೆ ಹರಿಗೆ ಮೃಗರಿಪುವೆಸರು ॥
ತ್ತಮಿಕೆಯೆ ನಿನಗೆ ಜರಾಸಂ ।
ಧಮಥನ ಕುರುವೈರಿವೆಸರದೇನುನ್ನತಿಯೇ ॥೨॥

ಇಱಿವಬೆಡಂಗ ದೇವ ಪರಮೇಶ್ವರ ಸಾಹಸಭೀಮ ನಿನ್ನೊಳಾ ।
ರಿಱಿದು ಬರ್ದುಂಕುವರ್ ನಿಜಭುಜೋಗ್ರಗದಾಪರಿಘಪ್ರಹಾರದಿಂ ॥
ಪಱಿವಱಿಯಾಗಿ ಪುಣ್ಣುವೆಣನಾಗಿ ಮರುಳ್ಗುಣಿಸಾಗಿ ಯುದ್ಧದೊಳ್ ।
ಕುಱಿದಱಿಯಾಗಿ ಬಟ್ಟರಿಬಲಂಗಳೆ ಪೇೞ್ವವೆ ನಿನ್ನ ಬೀರಮಂ ॥೩॥

ಎಂದನಲನಂದನೆಯನಿಲನಂದನನಂ ಪೊಗಳ್ದು

ಒಡಲೊಡಮೆಯೆಂಬವೆರಡುಂ ।
ಕೆಡಲಿರ್ಪುವು ಕೆಡದ ಕಸವರಂ ಜಸಮದಱಿಂ ॥
ಕೆಡುವೊಡಲೊಡಮೆಯನೆಂದುಂ ।
ಕೆಡದೊಡಮೆಗೆ ಮಾಱುಗುಡುವುದಿಱಿವ ಬೆಡಂಗಾ ॥೪॥

ಮಣಿಕನಕಂ ವಸ್ತುವಿಭೂ ।
ಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ॥
ಗುಣಮನೆ ಮೆಱೆವುದು ಶಸ್ತ್ರ ।
ವ್ರಣಮಂ ನಿನ್ನಂತೆ ಮೆಱೆವುದಿಱಿವಬೆಡಂಗಾ ॥೫॥

೨. ಮದದಾನೆಯ ನೆತ್ತಿಯನ್ನು ತನ್ನ ಕ್ರೂರವಾದ ಉಗುರಿಂದ ಸೀಳಿ ಅದನ್ನು ಕೊಂದು ಹಾಕುವ ಸಿಂಹಕ್ಕೆ 'ಮೃಗರಿಪು' (ಜಿಂಕೆಗಳ ವೈರಿ) ಎಂಬ ಹೆಸರೇನು ಹೆಮ್ಮೆಯದೆ? ಜರಾಸಂಧನಂತಹ ಮಹಾಬಲಿಷ್ಠನನ್ನೆ ಸೀಳಿ ಒಗೆದ ನಿನಗೆ 'ಕುರುವೈರಿ' ಎಂಬ ಹೆಸರು ಹಿರಿಯದೆ ?

೩. ರಾಜಾಧಿರಾಜ, ಪರಾಕ್ರಮಭೀಮ, ಇರಿವಬೆಡಂಗ ದೇವನೆ, ನಿನ್ನೊಡನೆ ಯುದ್ಧಮಾಡಿ ಬದುಕುವವರು ಯಾರು ? ನಿನ್ನ ತೋಳಿಂದ ಹಾಗು ಘೋರವಾದ ನಿನ್ನ ಗದೆಯ ಹೊಡೆತದಿಂದ ಹರಿಹಂಚಾಗಿ ಮೈಯೆಲ್ಲ ಗಾಯ ತುಂಬಿದ ಹೆಣಗಳಾಗಿ, ಭೂತಪಿಶಾಚಿಗಳಿಗೆ ಆಹಾರವಾಗಿ ರಣಭೂಮಿಯಲ್ಲಿ ಚಿಕ್ಕ ಚಿಕ್ಕ ತುಂಡುಗಳಾಗಿ ಬಿದ್ದಿರುವ ಶತ್ರುಸೈನ್ಯಗಳೆ ನಿನ್ನ ಪರಾಕ್ರಮವನ್ನು ಸಾರುತ್ತಾ ಇಲ್ಲವೆ ?

ವ॥ ಎಂದು ದ್ರೌಪದಿಯು ಭೀಮಸೇನನನ್ನು ಹೊಗಳಿ,

೪. ದೇಹವಾಗಲಿ, ಧನವಾಗಲಿ ಎರಡೂ ನಶ್ವರವಾದವು. ನಾಶವಾಗದಂತಹ ದ್ರವ್ಯವೆಂದರೆ ಕೀರ್ತಿ. ಆದುದರಿಂದ ಇರಿವಬೆಡಂಗನೆ, ನಶ್ವರವಾದ ದೇಹ-ಧನಗಳನ್ನು ಕೊಟ್ಟು ಪ್ರತಿಯಾಗಿ ಶಾಶ್ವತವಾದ ಕೀರ್ತಿಯನ್ನು ಗಳಿಸಬೇಕು.

೫. ಚಿನ್ನ, ರತ್ನ, ವಸ್ತ್ರಾಭರಣಗಳನ್ನು ಕೊಟ್ಟರೆ ಹೆಂಡಿರು ಒಲಿಯುವರೆ ? ಗಂಡರೆಂಬವರು ತಮ್ಮ ಉತ್ತಮ ಗುಣಗಳನ್ನು ತೋರಬೇಕು ; ಯುದ್ಧದಲ್ಲಿ ಉಂಟಾದ ಶಸ್ತ್ರದ ಗಾಯಗಳಿಂದ ಶೋಭಿಸಬೇಕು.

ಎಂದು ಮೂದಲಿಸಿ ನುಡಿಯೆ ಬುದ್ಧಿಮತಿಯಿಂತೆಂದಳ್

ಎರೆವರ್ಗೀವಂ ಭಯದಿಂ ।
ಶರಣ್ಗೆವರೆ ಕಾವನೀವ ಕಾವ ಗುಣಕ್ಕಾರ್ ॥
ದೊರೆ ಪೆಱರಿಱಿವಬೆಡಂಗನ ।
ಕೊರಲೊಳ್ ಕೊಂಕುಂಟೆ ನುಡಿಯೊಳೇಂ ತೊದಳುಂಟೇ ॥೬॥

ಆರಯೆ ನೃಪರಾರುಂ ವಾ ।
ಕ್ಸಾರರ್ ಕರ್ತವ್ಯಸಾರರರಲ್ಲದಂತಂ ॥
ತಾರುಮನಱಿವೆಂ ಕೇಳ್ ಸ್ಥಿತಿ ।
ಸಾರಂ ನಿನ್ನನ್ನನಾವನಿಱಿವ ಬೆಡಂಗಾ ॥೭॥

ಎನಲುಂ ವೃದ್ಧಕಂಚುಕಿಯಿಂತೆಂದಳ್ ಅವರ ಪೂರ್ವಜರಪ್ಪರಸುಗಳೊಳಗ ಯೋಧ್ಯಾಪುರಪರಮೇಶ್ವರನುಂ ಸತ್ಯಾದಿಗುಣಾಶ್ರಯವಲ್ಲಭನುಮತಿಪ್ರೌಢದಿಶಾದಂತಿಪ್ರಕಟ ಪ್ರಭಾವನಪ್ಪ ಸತ್ಯಾಶ್ರಯದೇವನಿಂ ವಿಷ್ಣುವರ್ಧನಾಪರನಾಮಧೇಯನುಂ ರಾಷ್ಟ್ರಕೂಟಗಜ ಘಟಾವಿಘಟನಸಿಂಹನೆನಿಸಿದ ಜಯಸಿಂಹದೇವನಿಂ ಅತಿಪ್ರವರ್ಧಪ್ರಜಾನುರಾಗನುಮತಿಪ್ರಬಲ ರಣರಾಮನುಮೆನಿಸಿದ ರಣಸಿಂಗಸಿಂಹನಿಂ ವಾತಾಪಿಪುರವರೇಶ್ವರನುಮಶ್ವಮೇಧಯಜ್ಞ ದೀಕ್ಷಿತನುಂ ದ್ವೀಪಾಂತರಪ್ರಕಟಪ್ರಭಾವನುಮೆನಿಸಿದ ಪುಲಕೇಶಿದೇವನಿಂ ಪರಿರಕ್ಷಿತಪವಿತ್ರ ವರ್ಮನೆನಿಸಿದ ಕೀರ್ತಿವರ್ಮದೇವನಿಂ ತತ್ತಯನಪ್ಪೆರಡನೆಯ ಸತ್ಯಾಶ್ರಯದೇವನಿಂ ಅವನ ಕಿಱಿಯ ಮಗನಪ್ಪ ಮಂಗಳಾರ್ಣವನಿಂ ಸತ್ಯಾಶ್ರಯನಪ್ಪೆರಡನೆಯ ಸತ್ಯವ್ರತಿಯಿಂ ತತ್ತನಯನಪ್ಪ ಆದಿತ್ಯವರ್ಮನಿಂ ತದಪತ್ಯನಪ್ಪ ವಿಕ್ರಮಾದಿತ್ಯನಿಂ ತತ್ಪುತ್ರನಪ್ಪ ದುರ್ಧರಮಲ್ಲನಿಂ ತನ್ನಂದನನಪ್ಪ ನಿರವದ್ಯಾಪರನಾಮಧೇಯನಪ್ಪ ವಿಜಯಾದಿತ್ಯಭಟ್ಟಾರಕನಿಂ ತತ್ಸೂನು ಮಿತ್ರನಪ್ಪ ವಿಕ್ರಮಾರ್ಣವನೆನಿಸಿದ ಕೊಂಕಣಿವಿಕ್ರಮಾದಿತ್ಯನಿಂ ತತ್ಸೂನುಮಿತ್ರನಪ್ಪ

ವ॥ ಹೀಗೆ ಚುಚ್ಚಿ ನಡೆಯಲಾಗಿ, ಬುದ್ಧಿಮತಿ ಹೀಗೆ ನುಡಿದಳು -

೬. ಬೇಡಿದವರಿಗೆ ದಾನ ಕೊಡುತ್ತಾನೆ ; ಭಯದಿಂದ ಮೊರೆ ಹೊಕ್ಕವರನ್ನು ಕಾಪಾಡುತ್ತಾನೆ.ಹೀಗೆ ಕೊಡುವ ಹಾಗೂ ಕಾಪಾಡುವ ಗುಣಗಳಲ್ಲಿ ಇರಿವಬೆಡಂಗನಿಗೆ ಸಮನಾದವರು ಯಾರು ? ಇರಿವಬೆಡಂಗನ ಕೊರಳಲ್ಲಿ ಕೊಂಕಾಗಲಿ ಮಾತಿನಲ್ಲಿ ಹುಸಿಯಾಗಲಿ ಎಂದೂ ಇಲ್ಲ.

೭. ವಿಚಾರಿಸಿ ನೋಡಿದರೆ ಯಾವ ರಾಜರಾದರೂ ಮಾತಿನಲ್ಲಿ ಮಿಗಿಲಾಗಿರುವ ರಲ್ಲದೆ ಕೃತಿಯಿಂದ ಮಿಗಿಲಾದವರಲ್ಲ. ಹಾಗೆ ಎಲ್ಲರನ್ನೂ ನಾನು ಬಲ್ಲೆನು. ಇರಿವ ಬೆಡಂಗನೇ, ನಿನ್ನಂತೆ ನಿಜವಾದ ಶ್ರೇಷ್ಠರಾದವರು ಇನ್ನಾರುಂಟು ?

ವ॥ ಹೀಗೆನ್ನಲಾಗಿ ವೃದ್ಧಕಂಚುಕಿ ಈ ರೀತಿಯಾಗಿ ನುಡಿದಳು - "ಅವರ ಪೂರ್ವಜ ರಾದ ರಾಜರಲ್ಲಿ ಸತ್ಯವೇ ಮೊದಲಾದ ಸದ್ಗುಣಗಳಿಗೆ ಆಶ್ರಯನಾಗಿ, ತನ್ನ ಪ್ರಭಾವವನ್ನು ದಿಗಂತದವರೆಗೆ ಹಬ್ಬಿಸಿದವನು ಸತ್ಯಾಶ್ರಯದೇವನು ; ವಿಷ್ಣುವರ್ಧನನೆಂಬ ಇನ್ನೊಂದು ಹೆಸರುಳ್ಳವನೂ, ರಾಷ್ಟ್ರಕೂಟರೆಂಬ ಗಜಸೈನ್ಯಕ್ಕೆ ಅದನ್ನು ಸೀಳುವ ಸಿಂಹವೆನಿಸಿದವನೂ ಜಯಸಿಂಹದೇವನು ; ಪ್ರಜೆಗಳ ಪ್ರೇಮವನ್ನು ಅತ್ಯಧಿಕವಾಗಿ ಸಂಪಾದಿಸಿಕೊಂಡವನೂ,

**ಕೀರ್ತಿವರ್ಮನಿಂ ಆತನ ಕಿಱಿಯ ಮಗನಪ್ಪ ಭೀಮಪರಾಕ್ರಮನಿಂ ತಜ್ಜಾತನಪ್ಪೆರಡನೆಯ ಕೀರ್ತಿವರ್ಮನಿಂ ತತ್ಸೂನುವಪ್ಪ ಪಿರಿಯತೈಲಪನಿಂ ಆತನ ಮಗನಪ್ಪ ಮುಕುಂದಿಯ ಕೊಂದ ಕುಂದಿಯ ಭೀಮನಿಂ ಆತನ ಮಗನಪ್ಪ ವಿಕ್ರಮಾದಿತ್ಯದೇವನಿಂ ಆತನ ಮಗನಪ್ಪ ರಣರಂಗಮಲ್ಲನೆನಿಪ್ಪಯ್ಯಣದೇವನಿಂ ಆತನ ಮಗನುತ್ತುಂಗಮಲ್ಲನೆನಿಸಿದ ವಿಕ್ರಮಾದಿತ್ಯನಿಂ ಚಾಳುಕ್ಯಕುಲೋದ್ಭವನಪ್ಪ ವಿಕ್ರಮಾದಿತ್ಯದೇವಂಗಂ ಚೈದ್ಯಕುಲೋದ್ಭವೆಯಪ್ಪ ಬೊಂತಾದೇವಿಗಂ ಪುಟ್ಟಿದಂ ॥ಸ್ವಸ್ತಿ॥ ಸಮಸ್ತಭುವನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಂ ರಾಜಪರಮೇಶ್ವರಂ ಪರಮಭಟ್ಟಾರಕಂ ಕರಹಟಭಯಂಕರಂ ಜಾದಿಳಾಂಧ್ರಕುಲೀನ ಭುವನಸದ್ಗುಣಮಣಿವಿಭೂಷಣಂ ಸಿಂಧುರಕಂಧರಾಧಿ ರೂಢಪಲ್ಲಿ ಕೋಟೋಲ್ಲಂಘನಂ ಭದ್ರಕವಿದ್ರಾವಣಂ ಕೊಂಕಣಭಯಂಕರಂ ಉಭಯಬಲದಲ್ಲಣಂ ಮಾರ್ಮಲೆವರಿಗಜಕೇಸರಿ ಕರೀಂದ್ರಕಂಠೀರವಮಲ್ಲಂ ವೈರಿಫಣೀಂದ್ರಸೌಪರ್ಣಂ ಕ್ರಾಕಲಿಕರಾಜಗಜಕೇಸರಿ ರಣಕುಂಭಿಕುಂಭಕಂಠೀರವಂ ಯಾದವಕುಲಾಂಬರದ್ಯುಮಣಿ ರಣರಂಗಭೀಷಣಂ ರಿಪುಬಲಪುಂಜಗಜಘಟಾಭಂಜನಂ ಸಾಮಂತಮೃಗಶಾರ್ದೂಲಂ ರಣರಂಗರಾಕ್ಷಸಂ ಅಕಲಂಕರಾಮಂ ತಳವರ್ಗತಳಪ್ರಹಾರಂ ಅರಿಷ್ಟಘಟ್ಟರಾಷ್ಟ್ರಕೂಟಕಾಳಕೂಟಂ ನಿಜಭುಜಚಕ್ರವರ್ತಿ ಪಾಂಚಾಲಮದೇಭಪಂಚಾನನಂ ಸಂಹಾರಸಿಂಹಿತ್ವಘೂರ್ಜರ ವಜ್ರದಾಢಾಘೂರ್ಜರ ಭಯಜ್ವರಸಮಸ್ತ ಮಾಳವಸಪ್ತಾರ್ಚಿ ಶತ್ರುಗೃಹೋಚ್ಚಾಟನನುಂ ಮತ್ತಂ ಅನೇಕದೇಶಾಧೀಶ್ವರಂ ಪರನೃಪಮದಗಜಘಟಾಭಂಜನನುಮುತ್ಪಕ್ಕಮಲ್ಲಂ ಶ್ರೀಮನ್ನೂರ್ಮಡಿತೈಲಪನೆನಿಸಿದಾಹವಮಲ್ಲದೇವನಿಂ ಉದಿತೋದಿತಮಾಗಿ ಬಂದ ಚಾಳುಕ್ಯವಂಶದೊಳೆಲ್ಲಿಯುಮಿನ್ನೆವರೆಗಂ ನುಡಿದು ಪುಸಿವುದುಂ ಆಡಿ ಅಳುಪುವುದುಂ ಕೂಡಿ ತಪ್ಪುವುದುಂ ಬೇಡಿದರ್ಗಿಲ್ಲೆಂಬುದುಂ ಕಾದಿ ಸೊಲ್ವುದುಂ ಪೆಱವೆಣ್ಣಂ ಪಿಡಿಯಿಸುವುದುಂ ಕನಸಿನೊಳಪ್ಪೊಡಮಿಲ್ಲಂ**

ಅತ್ಯಂತ ಬಲಿಷ್ಠನಾದ ರಣಶೂರನೂ ಎನಿಸಿದವನು ರಣಸಿಂಗಸಿಂಹನು ; ವಾತಾಪಿ ಪುರಾಧಿಪತಿಯೂ, ಅಶ್ವಮೇಧಯಜ್ಞವನ್ನು ಮಾಡಿದವನೂ, ದ್ವೀಪಾಂತರಗಳವರೆಗೆ ತನ್ನ ಪ್ರಭಾವವನ್ನು ವಿಸ್ತರಿಸಿದವನೂ ಎನಿಸಿದ ಪುಲಿಕೇಶಿದೇವನು ; ಆಮೇಲೆ ಕೀರ್ತಿವರ್ಮದೇವನು ; ಆತನ ಮಗನಾದ ಎರಡನೆಯ ಸತ್ಯಾಶ್ರಯದೇವನು ; ಅವನ ಕಿರಿಯ ಮಗನಾದ ಮಂಗಳಾರ್ಣವನು ; ಸತ್ಯಾಶ್ರಯನಾದ ಎರಡನೆಯ ಸತ್ಯವ್ರತಿಯು; ಆತನ ಮಗನಾದ ಆದಿತ್ಯವರ್ಮನು; ಆತನ ಮಗನಾದ ವಿಕ್ರಮಾದಿತ್ಯನು ; ಆತನ ಮಗನಾದ ದುರ್ಧರಮಲ್ಲನು ; ಆತನ ಮಗನಾದ ನಿರವದ್ಯನೆಂಬ ಇನ್ನೊಂದು ಹೆಸರುಳ್ಳ ವಿಜಯಾದಿತ್ಯ ಭಟ್ಟಾರಕನು ; ಆತನ ಮಗನಾದ ಪರಾಕ್ರಮಸಮುದ್ರನೆನಿಸಿದ ಕೊಂಕಣಿ ವಿಕ್ರಮಾದಿತ್ಯನು; ಆತನ ಮಗನಾದ ಕೀರ್ತಿವರ್ಮನು ; ಆತನ ಕಿರಿಯ ಮಗನಾದ ಭೀಮಪರಾಕ್ರಮನು ; ಆತನ ಮಗನಾದ ಎರಡನೆಯ ಕೀರ್ತಿವರ್ಮನು ; ಆತನ ಮಗನಾದ ಹಿರಿಯ ತೈಲಪನು; ಆತನ ಮಗನಾದ ಹಾಗೂ ಮುಕುಂದಿಯನ್ನು ಕೊಂದ ಕುಂದಿಯ ಭೀಮನು ; ಆತನ ಮಗನಾದ ವಿಕ್ರಮಾದಿತ್ಯದೇವನು ; ಆತನ ಮಗನಾದ ರಣರಂಗಮಲ್ಲನೆನಿಸಿದ ಅಯ್ಯಣದೇವನು; ಅವನ ಮಗನಾದ ಉತ್ತುಂಗಮಲ್ಲನೆನಿಸಿದ ವಿಕ್ರಮಾದಿತ್ಯನು, ಚಾಳುಕ್ಯ ಕುಲದಲ್ಲಿ ಹುಟ್ಟಿದ ವಿಕ್ರಮಾದಿತ್ಯನಿಗೂ ಚೈದ್ಯಕುಲದವಳಾದ ಬೊಂತಾದೇವಿಗೂ ಹುಟ್ಟಿದ ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ರಾಜಪರಮೇಶ್ವರ,

ಧನರಕ್ಷೆಗೆ ಲೋಭಂ ನಿಜ ।
ತನುರಕ್ಷೆಗೆ ಪುಸಿ ನಿಜಾತ್ಮರಕ್ಷೆಗೆ ಭಯಮೆಂ ॥
ಬನಿತಮಕಾರಣಮಿವಱೊಳ ।
ಗನಪೇಕ್ಷಕನೆನಿಸಿ ನೆಗಱ್ದನಿಱಿವಬೆಡಂಗಂ ॥೮॥

ಎಂಬುದುಂ

ಭೀಮಸೇನನನುಮತದೊಳ್ ನರ್ಮಸಚಿವನುಂ ಪರಿಹಾಸಕೇಳಿಶೀಲನುಮೆನಿಸಿದ ವಿದೂಷಕನೆಂದಂ ಎಲೆ ವೃದ್ಧಕಂಚುಕಿ [ನೀನುಂ] ದೇವಾಸುರಯುದ್ಧಕ್ಕೆ ಕರಗಂಬೊತ್ತ

ಪರಮಭಟ್ಟಾರಕ ಎಂಬ ಬಿರುದುಳ್ಳವನೂ ಕರಹಟರಾಜರಿಗೆ ಭೀಕರನಾದವನೂ ಜಾದಿಳಾಂಧ್ರ ಕುಲೀನಭುವನ (?) ಸದ್ಗುಣಗಳೆಂಬ ರತ್ನಗಳಿಂದ ಭೂಷಿತನಾದವನೂ, ಆನೆಯನ್ನೇರಿ ಹೋಗಿ ಪಲ್ಲಿಕೋಟವನ್ನು ಗೆದ್ದವನೂ, ಭದ್ರಕ ವಿದ್ರಾವಣನೂ ಕೊಂಕಣ ರಾಜ್ಯಕ್ಕೆ ಭೀಕರನಾದವನೂ, ಉಭಯ ಸೈನ್ಯಗಳಿಗೆ ಭಯಾನಕನೆನಿಸಿದವನೂ, ಶತ್ರುಗಳೆಂಬ ಆನೆಗಳಿಗೆ ಸಿಂಹವಾದವನೂ, 'ಕರೀಂದ್ರ ಕಂಠೀರವಮಲ್ಲ'ನೂ ವೈರಿಗಳೆಂಬ ಸರ್ಪಗಳಿಗೆ ಗರುಡನೆನಿಸಿದವನೂ, ಕ್ರಾಕಲಿಕ ರಾಜನೆಂಬ ಆನೆಗೆ ಸಿಂಹನಾದವನೂ, ರಣ ಕುಂಭಿಕುಂಭಕ್ಕೆ ಸಿಂಹಸ್ವರೂಪನೂ, ಯಾದವಕುಲವೆಂಬ ಆಕಾಶಕ್ಕೆ ಸೂರ್ಯನಾದವನೂ, ಯುದ್ಧರಂಗ ಭಯಂಕರನೂ, ಶತ್ರುಸೈನ್ಯವೆಂಬ ಆನೆಯ ಹಿಂಡನ್ನು ಸೀಳಿ ಕೆಡಹಿದವನೂ ಸಾಮಂತರೆಂಬ ಮೃಗಗಳಿಗೆ ಸಿಂಹನೆನಿಸಿದವನೂ ಯುದ್ಧರಂಗದಲ್ಲಿ ರಾಕ್ಷಸನಂತೆ ಕ್ರೂರನಾದವನೂ, ಅಕಲಂಕರಾಮನೂ (ನಿಷ್ಕಲಂಕನಾಗಿ ಶೋಭಿಸುವವನೂ), ಸೈನ್ಯವನ್ನು ಇಕ್ಕಿ ಮೆಟ್ಟುವವನೂ, ಶತ್ರುನಾಶಕರೆನಿಸಿದ ರಾಷ್ಟ್ರಕೂಟರಿಗೆ ಕಾಲಕೂಟ ವಿಷವಾದವನೂ, ತನ್ನ ತೋಳಬಲದಿಂದ ಚಕ್ರವರ್ತಿಯಾದವನೂ, ಪಾಂಚಾಲರಾಜನೆಂಬ ಮದಗಜಕ್ಕೆ ಸಿಂಹನಾದವನೂ, ಘೂರ್ಜರರಿಗೆ ಭಯಜ್ವರವಾದವನೂ, ಸಕಲ ಮಾಳವ ರಾಜ್ಯಗಳಿಗೆ ಬೆಂಕಿಯಾದವನೂ, ಶತ್ರುವೆಂಬ ಗ್ರಹವನ್ನು ಹೊಡೆದೋಡಿಸಿದವನೂ ಮತ್ತು ಅನೇಕ ದೇಶಗಳಿಗೆ ಅಧಿರಾಜನೂ, ಶತ್ರುರಾಜರೆಂಬ ಮದದಾನೆಗಳ ಸೈನ್ಯವನ್ನು ನಾಶಮಾಡಿದವನೂ, ಉತ್ಪಕ್ಯಮಲ್ಲನೂ (?) ಶ್ರೀಮನ್ನೂರ್ಮಡಿ ತೈಲಪನೆನಿಸಿದವನೂ ಆದ ಆಹವಮಲ್ಲದೇವನು - ಹೀಗೆ ಇವರೆಲ್ಲರಿಂದ ಉತ್ತರೋತ್ತರವಾಗಿ ಅಭಿವೃದ್ಧಿ ಹೊಂದುತ್ತ ಬಂದ ಚಾಳುಕ್ಯರಲ್ಲಿ ಎಲ್ಲಿಯಾದರೂ ಇನ್ನುವರೆಗೆ ಆಡಿದ ಮಾತಿಗೆ ತಪ್ಪುವುದಾಗಲಿ, ಕೂಡಿದವರಿಗೆ ದ್ರೋಹಮಾಡುವುದಾಗಲಿ, ಬೇಡಿದವರಿಗೆ ಇಲ್ಲವೆಂಬುದಾಗಲಿ, ಯುದ್ಧದಲ್ಲಿ ಸೋಲುವುದಾಗಲಿ, ಪರಸ್ತ್ರೀಯರನ್ನು ಹಿಡಿಸುವುದಾಗಲಿ ಕನಸಿನಲ್ಲಿ ಕೂಡ ಇಲ್ಲ.

೮. ಧನ ರಕ್ಷಣೆಗೆ ಲೋಭ, ತನ್ನ ದೇಹ ರಕ್ಷಣೆಗೆ ಸುಳ್ಳು, ಪ್ರಾಣರಕ್ಷಣೆಗೆ ಭಯ - ಇವೆಲ್ಲಕ್ಕೆ ಆಸ್ಪದವೇ ಇಲ್ಲವಾಗಿ, ಲೋಭ, ಅಸತ್ಯ, ಭಯ - ಈ ಮೂರನ್ನೂ ಕಡೆಗಣಿಸಿಯೆ ಇರಿವಬೆಡಂಗನು ಪ್ರಸಿದ್ಧನಾದನು.

ವ॥ ಹೀಗೆ ನುಡಿಯಲಾಗಿ, ಭೀಮಸೇನನ ಒಪ್ಪಿಗೆಯಿಂದ ಆಪ್ತಸಚಿವನೂ,

ಡಾವರಡಾಕಿನಿಯೆನಿಸಿದ ಪಾಂಚಾಲಿಯುಂ ಬುದ್ಧಿಮತಿಯೆಂಬ ಮೇಳದ ಗಾಳುದೊಟ್ಟು ಮಿಂತೀ ಮೂವರುಂ ಬಂದ ವಂಶಾವಳಿಯುಮಂ ನಿಜಾವಳಿಯುಮನೊಳ್ಳಿತ್ತಾಗಿ ಪೇಟ್ದೆ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದಿದೇನಿನ್ನೆಲ್ಲಿಯ ಧೃತರಾಷ್ಟ್ರನೆತ್ತಣ ಗಾಂಗೇಯನೆಲ್ಲಿಯ ಸಂಧಿ ಕಾರ್ಯಂ ದುಶ್ಶಾಸನಾದಿಗಳಪ್ಪ ನೂರ್ವರ್ ಕೌರವರುಮನಗುರ್ವಾಗೆ ಕೊಂದಿಕ್ಕಿದ ನಿನ್ನೊರ್ಬನುಟೆದಂ ದುರ್ಯೋಧನನಂ ಕೊಲ್ವುದುಂ ಗೆಲ್ವುದುಂ ನಮ್ಮರಸಂಗಾವುದು ಗಹನಮದರ್ಕೆ ಚಿಂತಿಸದಿರಿಮೆಂದು ಪಾಂಚಾಲರಾಜತನೂಜೆಯ ಮೊಗಮಂ ನೋಡಿ

ಕುರುಕುಲಮಂ ನುಂಗಿದಯಿ ।
ನ್ನೆರೆಬರುಮಂ ನುಂಗಲಿರ್ಪೆ ಕುರುಪತಿಯುಮನಿ ॥
ನ್ನೆರಡನೆಯ ಹಿಡಿಂಬಿಯನೆ ।
ಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ ॥೯॥

ಮಾರುತಿ ನಿಜವೇಣೀಸಂ ।
ಹಾರಂ ಮಾಡಿದೊಡೆ ಮಾಟ್ಪುದೆನಗಂ ನಿನಗಂ ॥
ಪೂರಣೆಗೆ ಜಠರಪಿಠರಕ ।
ಪೊರಣೆಗೇಂ ಮಾಡದೆಂತು ಕರೆವೆಂ ನಿನ್ನಂ ॥೧೦॥

ವಿನೋದಶೀಲನೂ ಆದ ವಿದೂಷಕನೆಂದನು, "ಎಲೆ ವೃದ್ಧ ಕಂಚುಕಿಯೆ, ದೇವಾಸುರ ಯುದ್ಧಕ್ಕೆ ಕರಗ ಹೊತ್ತ ಡಾಕಿನಿಯೆನಿಸಿದ ದ್ರೌಪದಿಯೂ, ಬುದ್ಧಿಮತಿಯೆಂಬ ಈ ನಾಡಾಡಿ ದಾಸಿಯೂ ಕೂಡಿಬಂದು ನೀನು ವಂಶಾವಳಿಯನ್ನು ಚೆನ್ನಾಗಿ ಹೇಳಿದೆ. ವಂಶಾವಳಿಯನ್ನು ಹೇಳಿದ ನಿನ್ನ ನುಡಿ ತುಂಬ ಚೆನ್ನಾಗಿತ್ತು. ಇನ್ನೆಲ್ಲಿಯ ಧೃತರಾಷ್ಟ್ರ ? ಎಲ್ಲಿಯ ಭೀಷ್ಮ ? ಸಂಧಾನಕಾರ್ಯ ಎಲ್ಲಿಯದು ? ದುಶ್ಶಾಸನನೆ ಮೊದಲಾದ ನೂರು ಕೌರವರನ್ನು (ನಮ್ಮ ಇರಿವ ಬೆಡಂಗನು) ಭೀಕರವಾಗಿ ಕೊಂದು ಹಾಕಿರುವನು. ಇನ್ನು ಉಳಿದವನು ಒಬ್ಬನೇ ಒಬ್ಬ, ದುರ್ಯೋಧನನೆಂಬವನು. ಅವನನ್ನು ಕೊಲ್ಲುವುದಾಗಲಿ, ಗೆಲ್ಲುವುದಾಗಲಿ ನಮ್ಮ ಅರಸನಿಗೆ ಏನು ದೊಡ್ಡ ಮಾತು ? ಅದಕ್ಕೆ ನೀವೇನೂ ಚಿಂತಿಸಬೇಡಿ" ಎಂದು ದ್ರೌಪದಿಯ ಮುಖವನ್ನು ನೋಡಿ

೯. ನೀನು ಕುರುಕುಲವನ್ನೆಲ್ಲ ನುಂಗಿದೆ ; ಇನ್ನುಳಿದ ಕೆಲವರನ್ನೂ (ದುರ್ಯೋಧನ ನನ್ನೂ) ಇನ್ನೂ ನುಂಗುವವಳು. ಇಂತಹ ಎರಡನೆಯ ಹಿಡಿಂಬಿಯಾದ ರಾಕ್ಷಸಿ ನಿನ್ನನ್ನು ನಮ್ಮರಸನು ಎಲ್ಲಿಂದ ತಂದನೋ ಏನೊ !

೧೦. ಭೀಮಸೇನನು ನಿನ್ನ ಮುಡಿಯನ್ನು ಹೆಣೆದಾಗ ನಿನ್ನ ಹೊಟ್ಟೆ ತುಂಬಿದಂತೆ, ನನ್ನ ಹೊಟ್ಟೆಯೂ ತುಂಬುವಂತೆ ಏರ್ಪಾಟು ಮಾಡು. ಹಾಗೆ ಮಾಡದೆ ಇದ್ದರೆ ನಿನ್ನನ್ನು ಹೇಗೆ ಕರೆದೇನು ?

ಎಂದು ವಿದೂಷಕನಱುತ್ತುಂ ಬಂದ ತನ್ನಂ ನಗುತ್ತಂ ಪೋಪಂತೆ ಸಂತೋಷಂ ಮಾಡಿದುದರ್ಕೊಡಂಬಟ್ಟು ಚಾರುಹಾಸಿನಿ ನಿಜನಿವಾಸಕ್ಕೆ ಪೋದಳ್

ಅನ್ನೆಗಮಿತ್ತ ಶಂತನುತನೂಜನುಂ ಮಂದಾಕಿನೀನಂದನನುಂ ವಸಿಷ್ಠಶಾಪ ವಸುಂಧರಾವತೀರ್ಣಾವಶಿಷ್ಟವಸುವುಂ ಜಾಮದಗ್ನ್ಯಶಿಷ್ಯನುಂ ಪರಶುರಾಮವಿಜಯಿಯುಂ ಕನಕತಾಳಧ್ವಜನುಂ ದೇವವ್ರತಿಯುಂ ಸ್ವೇಚ್ಛಾಮೃತ್ಯುವುಂ ಕುರುಕುಲಪಿತಾಮಹನುಂ ಆಹವಭೀಷ್ಮನುಮೆನಿಸಿದ ಭೀಷ್ಮನ ಶರಶಯನದೊಳಂ ಭಾರದ್ವಾಜಗೋತ್ರನುಂ ಕುಂಭಸಂಭವ ನುಮುಭಯಬಲಪ್ರಧಾನೋಪಾಧ್ಯಾಯನುಂ ತ್ರೈಲೋಕ್ಯಧನುರ್ಧರನುಂ ರುದ್ರಾವತಾರ ಜನಕನುಂ ಜಾಮದಗ್ನ್ಯಶಸ್ತ್ರ ಸ್ವಪ್ರತಿಗ್ರಹಪ್ರಣಯಪವಿತ್ರಪ್ರಭಾವನುಂ ಚಾಪಸಾಮರ್ಥ್ಯ ಸಂಪನ್ನನುಂ ಶೋಣಾಶ್ವಸೇನಯಜ್ಞಸಾರಥಿಯುಂ ಕನಕಕಲಶಧ್ವಜನುಮೆನಿಸಿದ ಬಿಲ್ಲ ಜಾಣಂ ದ್ರೋಣನಳಿವಿನೊಳಂ ಸಿಂಧುದೇಶಾಧೀಶ್ವರನುಂ ದುಶ್ಶಳೆಯ ಮನೋನಯನವಲ್ಲಭನುಂ ಶಲ್ಯಸಾರಥಿಯುಂ ದುಶ್ಶಾಸನನ ಮನೋರಥಸಾರಥಿಯುಮೆನಿಸಿದ ತನ್ನ ಮೈದುನಂ ಜಯದ್ರಥನ ವಿಪತ್ತಿನೊಳಂ ಭೌಮಸುತನುಂ ಶತಮಖಸಹಾಯನುಂ ಚತುರ್ಲಕ್ಷ ಗಜಘಟಾವೇಷ್ಟಿತನುಂ ಸುಪ್ರತೀಕಸಿಂಧುರಬಂಧುರಕಂಧರಾಧಿರೂಢನುಂ ದೃಢಸಮಯ ಬಾಹುಪ್ರಭಾವೋದಾತ್ತನುಮೆನಿಸಿದ ಭಗದತ್ತನ ಮರಣದೊಳಂ ಕುರುಕುಲವೃದ್ಧನುಂ ಭೂರಿಭುಜಬಲಾವಷ್ಟಂಭಗಂಭೀರನುಮೆನಿಸಿದ ಭೂರಿಶ್ರವನ ವಿಯೋಗದೊಳಂ ಸೌಬಲಬೃಹದ್ಬಲವಿಂದಾನುವಿಂದಪ್ರಭೃತಿಗಳಳಿವಿನೊಳಂ ಯುವರಾಜನುಂ ದ್ರುಪದರಾಜ ನಂದನಾಂಬರಕಬರಿಕಾಕೃಷ್ಟಿಧೃಷ್ಟಕನುಮೆನಿಸಿದ ತನ್ನಣುಗದಮ್ಮಂ ದುಶ್ಶಾಸನನ ಪಂಚತ್ವ ಪ್ರಪಂಚದೊಳಂ ದಿನಕರತನಯನುಂ ರಾಧೇಯನುಂ ಅಂಗವಿಷಯಾಧೀಶ್ವರನುಂ ಸ್ವಭಾವ ಶೌರ್ಯಾವತಾರನುಂ ಕಾಳವಟ್ಟ ಕಾರ್ಮುಕನುಂ ಕಾರ್ಮುಕಗುರುಶಿಷ್ಯನುಂ ಜಾಮದಗ್ನ್ಯಶಿಷ್ಯನುಂ ಸಹಜಕವಚಾಲಂಕೃತಶರೀರನುಂ ಮದಗಜಲಕ್ಷಣಧ್ವಜನುಂ

ವ|| ಹೀಗೆ ನುಡಿದು ವಿದೂಷಕನು ಅಳುತ್ತ ಬಂದ ತನ್ನನ್ನು ನಗುತ್ತ ಹೋಗುವಂತೆ ಸಂತೋಷಗೊಳಿಸಿದುದಕ್ಕೆ ಮೆಚ್ಚಿ ಚಾರುಹಾಸಿನಿಯಾದ (ಚೆಲುವಾಗಿ ನಗುವವಳಾದ) ದ್ರೌಪದಿ ತನ್ನ ನಿವಾಸಕ್ಕೆ ಹೋದಳು.

ಅಷ್ಟರಲ್ಲಿ ಇತ್ತ ಶಂತನು ಹಾಗು ಗಂಗಾದೇವಿಯರ ಮಗನೂ, ವಶಿಷ್ಠ ಶಾಪದಿಂದ ಭೂಮಿಗೆ ಅವತರಿಸಿದ ವಸುಗಳಲ್ಲಿ ಕೊನೆಯವನಾಗಿ ಉಳಿದವನೂ, ಪರಶುರಾಮನ ಶಿಷ್ಯನೂ, ಆ ಪರಶುರಾಮನನ್ನೇ ಸೋಲಿಸಿದವನೂ, ಕನಕತಾಳಧ್ವಜವುಳ್ಳವನೂ, ದೇವವ್ರತಿಯೂ, ಇಚ್ಛಾಮರಣಿಯೂ, ಕುರುವಂಶಕ್ಕೆ ತಾತನೂ, ಯುದ್ಧಭಯಂಕರನೂ ಎನಿಸಿದ ಭೀಷ್ಮನು ಬಾಣಗಳ ಹಾಸುಗೆಯಲ್ಲಿ ಮಲಗಿಬಿಟ್ಟುದರಿಂದಲೂ, ಭಾರದ್ವಾಜ ಗೋತ್ರನೂ, ಕುಂಭಜನ್ಮನೂ, ಕೌರವ ಪಾಂಡವರಿಬ್ಬರ ತಂಡಗಳಿಗೆ ಪ್ರಧಾನ ಗುರುವೂ, ತ್ರಿಲೋಕಖ್ಯಾತ ಬಿಲ್ಗಾರನೂ, ರುದ್ರಾವತಾರನೆನಿಸಿದ ಅಶ್ವತ್ಥಾಮನ ತಂದೆಯೂ, ಪರಶುರಾಮನ ಶಸ್ತ್ರಗಳನ್ನೆಲ್ಲ ದಾನವಾಗಿ ಸ್ವೀಕರಿಸಿ, ಆತನ ಅನುಗ್ರಹದಿಂದ ಪವಿತ್ರ ಹಾಗೂ ಪ್ರಭಾವಿಯಾದವನೂ, ಧನುರ್ವಿದ್ಯೆಯಲ್ಲಿ ಸಾಮರ್ಥ್ಯವುಳ್ಳವನೂ, ಕನಕಕಲಶ ಧ್ವಜನೂ ಎನಿಸಿದ ಧನುರ್ವಿದ್ಯಾನಿಪುಣ ದ್ರೋಣನು ಮಡಿದುದರಿಂದಲೂ ; ಸಿಂಧು ದೇಶದ ರಾಜನೂ, ದುಶ್ಶಳೆಯ ಪತಿಯೂ, ಶಲ್ಯಸಾರಥಿಯೂ, ದುಶ್ಶಾಸನನ

ಪ್ರತಿದಿನಪ್ರವರ್ತಿತಾಷ್ಟಾದಶಕೋಟಿಸುವರ್ಣದಾನಸಂತರ್ಪಿತಸಕಲ ಭೂಸುರಲೋಕನುಂ ಮಹಾಭಾರತಸಮರಸಾಗರಸಮುತ್ತರಣಪರಿಣತಾಂತಃಕರಣಪರಿಣತಕರ್ಣಧಾರನುಮೆನಿಸಿದ ತನ್ನನುಗಾಳಪ್ಪ ಕರ್ಣನ ಸಾವಿನೊಳಂ ಮದ್ರವಿಷಯಾಧಿಪತಿಯುಂ ವ್ಯಾಘ್ರಕೇತನನುಂ ಶಸ್ತ್ರನಿರ್ಭರನಿಪುಣನುಂ ಸಮರೇಭಶಲ್ಯನುಮೆನಿಸಿದ ತನ್ನ ಮಾವನಪ್ಪ ಶಲ್ಯನ ಸಂಹರಣದೊಳಂ ಕುರುಕುಲಚೂಡಾಮಣಿಯುಂ ಗಾಂಧಾರೀಧೃತರಾಷ್ಟ್ರನಂದನನುಂ ಭಾನುಮತೀವದನಕಮಲಭಾನುವುಂ ಚಂದ್ರಮತೀನಯನಕುವಲಯಚಂದ್ರನುಂ ದುಶ್ಶಾಸ ನಾಗ್ರಜನ್ಮನುಂ ಲಕ್ಷ್ಮಣಜನಕನುಂ ಪನ್ನಗಪತಾಕನುಂ ಕನಕಲತಾಲಾಂಛಿತೋತ್ತುಂಗ ಘನಗದಾಯುಧನುಂ ದಿವ್ಯಮುನಿವರಾಪರಾಧನುಂ ಸಕಲಲಕ್ಷ್ಮೀನಿವಾಸನುಂ ಸಮರ ಧೈರ್ಯನುಂ ಮಹಾಶೌರ್ಯನುಂ ರಾಧೇಯನಿಜಸಹಾಯನುಂ ಛಲದಂಕಮಲ್ಲನುಂ

ಮನೋರಥಕ್ಕೆ ಸಾರಥಿಯೂ ಎನಿಸಿದ ತನ್ನ ಮೈದುನನಾದ ಜಯದ್ರಥನು ಮೃತನಾದುದರಿಂದಲೂ ; ನರಕಾಸುರನ ಮಗನೂ, ಇಂದ್ರನ ಮಿತ್ರನೂ, ನಾಲ್ಕು ಲಕ್ಷ ಆನೆಗಳ ಪಡೆಯುಳ್ಳವನೂ, ಸುಪ್ರತೀಕವೆಂಬ ಮಹಾಗಜವನ್ನು ಸವಾರಿ ಮಾಡುವವನೂ, ದೃಢಪ್ರತಿಜ್ಞನೂ, ಬಾಹುಬಲಶಾಲಿಯೂ ಎನಿಸಿದ ಭಗದತ್ತನ ಮರಣದಿಂದಲೂ; ಕುರುಕುಲದಲ್ಲಿ ಹಿರಿಯನೂ, ಮಹಾಭುಜಬಲದ ದರ್ಪದಿಂದ ಗಂಭೀರನೂ ಎನಿಸಿದ ಭೂರಿಶ್ರವನ ಅಗಲಿಕೆಯಿಂದಲೂ ; ಶಕುನಿ, ಬೃಹದ್ಬಲ, ವಿಂದ, ಅನುವಿಂದ ಮೊದಲಾದವರ ಸಾವಿನಿಂದಲೂ, ಯುವರಾಜನೂ, ದ್ರೌಪದಿಯ ಮುಡಿಯನ್ನು ಹಿಡಿದೆಳೆದ ಧೈರ್ಯಶಾಲಿಯೂ ಎನಿಸಿದ ತನ್ನ ಅಕ್ಕರೆಯ ತಮ್ಮನಾದ ದುಶ್ಶಾಸನನ ಮರಣಪ್ರಸಂಗದಿಂದಲೂ ; ಸೂರ್ಯಪುತ್ರನೂ, ರಾಧೆಯ ಆರೈಕೆಯಲ್ಲಿ ಬೆಳೆದವನೂ, ಅಂಗದೇಶದ ಅರಸನೂ ಜನ್ಮತಃ ಶೂರನೂ, ಕಾಳವಟ್ಟವೆಂಬ ಬಿಲ್ಲನ್ನು ಉಳ್ಳವನೂ, ಧನುರ್ವಿದ್ಯಾಗುರುವಿನ ಪರಮ ಶಿಷ್ಯನೂ,ಪರಶುರಾಮನ ಶಿಷ್ಯನೂ, ಜನ್ಮಜಾತವಾಗಿಯೆ ಬಂದ ಕವಚದಿಂದ ಶೋಭಿಸುವವನೂ, ಮದಗಜಧ್ವಜನೂ, ಪ್ರತಿದಿವಸ ಹದಿನೆಂಟು ಕೋಟಿ ಸುವರ್ಣನಾಣ್ಯಗಳ ದಾನ ಮಾಡುತ್ತ ಬ್ರಾಹ್ಮಣರೆಲ್ಲರನ್ನೂ ತೃಪ್ತಿಪಡಿಸಿದವನೂ, ಮಹಾಭಾರತ ಯುದ್ಧವೆಂಬ ಸಾಗರವನ್ನು ದಾಟಿಸುವ ನೈಪುಣ್ಯವುಳ್ಳ ಹಾಗೂ ಪರಿಣತ ಹೃದಯಿಯಾದ ಕರ್ಣಧಾರನೆನಿಸಿದ ತನ್ನ ಆಪ್ತ ಕಿಂಕರನಾದ ಕರ್ಣನ ಸಾವಿನಿಂದಲೂ ; ಮದ್ರದೇಶದ ರಾಜನೂ, ವ್ಯಾಘ್ರಧ್ವಜನೂ, ಶಸ್ತ್ರವಿದ್ಯೆಯಲ್ಲಿ ನಿಪುಣನೂ, ಯುದ್ಧವೆಂಬ ಗಜಕ್ಕೆ ಶಲ್ಯಸ್ವರೂಪನೆನಿಸಿದವನೂ ಆದ ತನ್ನ ಮಾವ ಶಲ್ಯನ ಸಂಹಾರದಿಂದಲೂ ; ಕುರುಕುಲಶ್ರೇಷ್ಠನೂ ಧೃತರಾಷ್ಟ್ರ ಗಾಂಧಾರಿಯರ ಮಗನೂ, ಭಾನುಮತಿಯ ಹಾಗು ಚಂದ್ರಮತಿಯ ಪತಿಯೂ, ದುಶ್ಶಾಸನನ ಅಣ್ಣನೂ, ಲಕ್ಷ್ಮಣನ ತಂದೆಯೂ, ಸರ್ಪಧ್ವಜನೂ, ಕನಕಲತಾಚಿಹ್ನದ ಬೃಹದ್‌ಗಾತ್ರದ ಗದೆಯುಳ್ಳವನೂ, ಮೈತ್ರೇಯ ಮುನಿಗಳಿಗೆ ಅಪರಾಧವೆಸಗಿದವನೂ, ಸಕಲೈಶ್ವರ್ಯಸಂಪನ್ನನೂ, ಯುದ್ಧಧೀರನೂ, ಮಹಾಶೂರನೂ, ಕರ್ಣನ ಆಪ್ತಮಿತ್ರನೂ, ಛಲದಂಕಮಲ್ಲನೂ (ಹಿಡಿದ ಛಲವನ್ನು ಎಂದಿಗೂ ಬಿಡದ ಶೂರನೂ), ಸಕಲ ಭೋಗಸಂಪತ್ತಿಗೆ ಅಧಿಪತಿಯೂ, ಅಭಿಮಾನಶಾಲಿಯೂ ಎನಿಸಿದ ಸುಯೋಧನನು ಚಿಂತಾಬಾಧೆಗೆ ಈಡಾಗಿ -

ಸಕಲಭೋಗಲಕ್ಷ್ಮೀಪತಿಯುಂ ಅಭಿಮಾನಧನನುಮೆನಿಸಿದ ಸುಯೋಧನಂ ಚಿಂತಾಕ್ರಾಂತನಾಗಿ

ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ ರುದ್ರಾವತಾರಂ ಗಡಂ ।
ನೊಸಲೊಳ್ ಕಣ್ಗಡಮೆಂದು ನಚ್ಚಿ ಪೊರೆದೆಂ ತಾನಕ್ಕೆ ತಮ್ಮಮ್ಮನ ॥
ಕ್ಕಿಸಲಂಬಂ ತಿರುವಾಯ್ಗೆ ತಂದಱಿವರೇ ತಾಮಿರ್ವರುಂ ಕಯ್ದುವಂ ।
ಬಿಸುಟರ್ ಜೋಳದ ಪಾಟಿಯಂ ಬಗೆದರಿಲ್ಲಾ ದ್ರೌಣಿಯುಂ ದ್ರೋಣನುಂ॥೧೧॥

ಮುಳಿದಾಂಪರ್ ಧರಣೀಶ್ವರರ್ ಮಿಗೆ ಪೆಱರ್ ಬಿಲ್ಗೊಂಡುಮೇಗೆಯ್ವರೆ ।
ನ್ನೊಳಮಿಂ ತೀರದ ತನ್ನ ಕಾರ್ಯಭರಮಂ ತೀರ್ಚಲ್ ಪೆಱರ್ ಗಂಡರಿ ॥
ನ್ನೊಳರೇ ಪಾಂಡವರೆಂಬರೇಗಹನಮೆಂಬಾ ದರ್ಪದಂತಾಜಿಯೊಳ್ ।
ಸುಳರಂಬೆತ್ತಿರೆ ಸತ್ತರೆನ್ನಿನಿಬರುಂ ತಮ್ಮಂದಿರುಂ ಮಕ್ಕಳುಂ ॥೧೨॥

ಪದುಳಂ ಕುಳ್ಳಿರ್ದೆಮಗಾ ।
ಯದ ಮಾತಂ ತಗುಳೆ ಗಟಪಿ ಪೋದಂ ಸಂದಿ ॥
ರ್ದದಟರೊಳಿಱಿದಱಿಯಂ ತ ।
ಪ್ಪದೆ ಕಮ್ಮಱಿಯೋಜನೆನಿಸಿದಂ ಬಿಲ್ಲೋಜಂ ॥೧೩॥

೧೧. ಶತ್ರುಸೈನ್ಯವನ್ನು ತರಿಯಲು ಇವನೊಬ್ಬನೆ ಸಾಕಂತೆ ! ತಾನು ರುದ್ರನ ಅವತಾರವಂತೆ ! ಹಣೆಯಲ್ಲೊಂದು ಕಣ್ಣೂ ಉಂಟಂತೆ ! ಇವನನ್ನು ನೆಚ್ಚಿ ನಾನು ಪೋಷಿಸಿದೆನು. ಆದರೆ ಇವನಾಗಲಿ, ಇವನ ತಂದೆಯಾಗಲಿ ಹೊಡೆಯಲೆಂದು ಹೆದೆಗೆ ಬಾಣವನ್ನು ಹೂಡಿಯಾದರೂ ಬಲ್ಲರೆ ? ಇಬ್ಬರೂ ಆಯುಧಗಳನ್ನು ಬಿಸಾಕಿ ಬಿಟ್ಟರು. ಉಂಡ ಅನ್ನದ ಋಣವನ್ನು ತೀರಿಸಬೇಕೆಂಬ ಯೋಚನೆ ಕೂಡ ಬರಲಿಲ್ಲ - ಈ ದ್ರೋಣನಿಗೆ ಹಾಗು ಇವನ ಮಗನಿಗೆ.

೧೨. ಕೋಪಾವಿಷ್ಟರಾಗಿ ಮೇಲೇರಿ ಬಂದ ಅನ್ಯರಾಜರು ಬಿಲ್ಲು ಹಿಡಿದು ಸಾಧಿಸುವುದಾದರೂ ಏನು ? ನನ್ನಿಂದ ಸಾಧಿಸಲಾಗದ ಕಾರ್ಯವನ್ನು ತಾನು ಸಾಧಿಸುವೆನೆಂಬ ಶೂರರು ಬೇರೆ ಯಾರಾದರೂ ಉಂಟೆ ? ಪಾಂಡವರೆಂಬವರು ಏನು ಮಹಾಶೂರರು ? ಎಂಬ ದರ್ಪದಿಂದ ಯುದ್ಧರಂಗದಲ್ಲಿ ಹೋರಾಡಿ ನನ್ನ ಎಲ್ಲ ತಮ್ಮಂದಿರು ಮಕ್ಕಳೂ ಸತ್ತರು.

೧೩. ನೆಮ್ಮದಿಯಾಗಿ ಕುಳಿತುಕೊಂಡು ತನ್ನ ಶೌರ್ಯದ ಬಡಾಯಿ ಕೊಚ್ಚಿಕೊಂಡು ಹೋದನಲ್ಲವೆ ನಮ್ಮ ಧನುರ್ವಿದ್ಯಾಗುರು ದ್ರೋಣನು ? ಶೂರರೊಡನೆ ಯುದ್ಧಮಾಡಿಯೆ ಗೊತ್ತಿಲ್ಲ ಇವನಿಗೆ. ತಾನೇನನ್ನೂ ಮಾಡದೆ ಇತರರಿಗೆ ಹೇಳಿ ಕೆಲಸ ಮಾಡಿಸುವ ಕಂಬಾರ ಸಾಲೆಯ ಓಜ ಇವನು.

ಅರ[ಸಂಗರಗಜ್ಜ] ದೊಳಂ ।
ಧುರದೊಳಮರಿಸೇನೆಗೆಂಬರದು ಪುಸಿಯಾಯ್ತಂ ॥
ತೆರಡಱೊಳೊಂದಱ ಫಲಮುಂ ।
ಪರಿಣತಿಗಾಯ್ತಿಲ್ಲನರ್ಥಕಂ ವಾಕ್ಯಾರ್ಥಂ ॥೧೪॥

ಒಸೆದರ್ಜುನಂಗೆ ಮುಂ ಕಳ ।
ಶಸಂಭವಂ [ಮಾನ್ಯಪದವಿಯಂ ಮಾಡಿದೊಡಂ] ॥
ಬೆಸುಗೆಗಿಡೆ ಪಾಟಿಗಿಡೆ ತ ।
ನ್ನಸುವಂ ತೆಲ್ಲಟಿಗೆಗುಡುವ ತೆಱದೊಳ್ ಕೊಟ್ಟಂ ॥೧೫॥

ಈಯಲಿಱಿಯಲ್ ಶರಣ್ಬುಗೆ ।
ಕಾಯಲ್ ಕ್ಷತ್ರಿಯರೆ ಬಲ್ಲರ[ಬ್ರಹ್ಮಣ್ಯಂ ॥
ಭೋಯೆನಲುಂ ಬ್ರಾಹ್ಮಣರವಿ ।
ಧಾಯೆನಲುಂ ಬಲ್ಲರಿಱಿಯಲವರೆಂತಱಿವರ್] ॥೧೬॥

ಚಾತುರ್ವರ್ಣ್ಯದೊಳಂ ದ್ವಿಜ ।
ಜಾತಿಗೆ ದರ್ಭಾಧಿಕಾರಮಲ್ಲದೆ ವಂಶೋ ॥
ದ್ಭೂತನೃಪೋಚಿತಮರಿಯಂ ।
ಘಾತಿಪ ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ ॥೧೭॥

೧೪. ರಾಜಕಾರ್ಯದಲ್ಲಿಯೂ, ಶತ್ರುಸೇನೆಯೊಡನೆ ಯುದ್ಧಮಾಡುವಲ್ಲಿಯೂ ಇವರು ನನಗೆ ಮುಖ್ಯ ಸಹಾಯಕರಾಗುವೆವೆಂದು ಹೇಳುತ್ತಿದ್ದರು. ಆ ಎರಡರಲ್ಲಿ ಒಂದನ್ನೂ ಇವರು ಸಮರ್ಪಕವಾಗಿ ನೆರವೇರಿಸಲಿಲ್ಲ. ಅವರ ಮಾತು ನಿರರ್ಥಕವಾಯಿತು. [ಮೊದಲನೆಯ ಚರಣದಲ್ಲಿ ಗ್ರಂಥಪಾತವಾಗಿದ್ದು, ಊಹೆಯ ಪಾಠದಿಂದಲೂ ಅರ್ಥ ಸ್ಪಷ್ಟವಾಗುವಂತಿಲ್ಲ. ಪದ್ಯದ ಒಟ್ಟು ಭಾವವನ್ನು ಸ್ಥೂಲವಾಗಿ ಇಲ್ಲಿ ಬರೆಯಲಾಗಿದೆ.]

೧೫. ಈ ಮೊದಲು ದ್ರೋಣನು ಮೆಚ್ಚುಗೆಯಿಂದ ಅರ್ಜುನನಿಗೆ (ಪರಮ ಶಿಷ್ಯನೆಂಬ) ಮಾನ್ಯ ಪದವಿಯನ್ನು ಕೊಟ್ಟುದುಂಟು. ಈಗ ನಮ್ಮ ಪಕ್ಷದ ಸಂಬಂಧವನ್ನು ಕಡಿದುಕೊಂಡು, ಕರ್ತವ್ಯದ ಋಣವನ್ನು ತೊರೆದು ತನ್ನ ಪ್ರಾಣವನ್ನು ಕೂಡ ಆ ಶಿಷ್ಯನಿಗೆ ಕಾಣಿಕೆಯಂತೆ ಒಪ್ಪಿಸಿಬಿಟ್ಟನು.

೧೬. ದಾನ ಮಾಡುವುದು, ಯುದ್ಧ ಮಾಡುವುದು ಹಾಗೂ ಮೊರೆಹೊಕ್ಕವರನ್ನು ಕಾಪಾಡುವುದು - ಈ ಮೂರನ್ನು ಕ್ಷತ್ರಿಯರೇ ಬಲ್ಲರು. ಗೌರವದಿಂದ ಕರೆಯುವಾಗ 'ಭೋ' ಎಂದೂ, ಯಾರಾದರೂ ಕೊಲ್ಲಲು ಬಂದಾಗ 'ಧೋ' ಎಂದೂ ನುಡಿಯಲು ಮಾತ್ರ ಬಲ್ಲರಲ್ಲದೆ ಬ್ರಾಹ್ಮಣರು ಯುದ್ಧ ಮಾಡಲು ಅದೆತ್ತ ಬಲ್ಲರು ?

೧೭. ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣ ವರ್ಣಕ್ಕೆ ದರ್ಭಾಧಿಕಾರ ಮಾತ್ರ ಉಂಟಲ್ಲದೆ, ಜಾತಿಕ್ಷತ್ರಿಯನಾದ ಅರಸನಂತೆ ಶತ್ರುಮರ್ದನಮಾಡುವ ಶಸ್ತ್ರಾಸ್ತ್ರಗಳ ಉಪಯೋಗ ಅವರಿಗೆ ಜನ್ಮತಃ ನಿಷಿದ್ಧವಾಗಿದೆ.

ಓಜಂ ಗಡ ಚಃ ಭಾರ ।
ದ್ವಾಜದಂ ಗಡ ಬಿಲ್ಲ ಬಲ್ಮೆಯುಂ ಕುಲಮುಂ ನಿ ॥
ರ್ವ್ಯಾಜಂ ಮಸುಳ್ದುವು ಪಾಂಡುತ ।
ನೂಜರ ಪಕ್ಕದೊಳೆ ಪಾಟೆಗಿಡೆ ನೆಗಳ್ದುದಱೆಂ ॥೧೮॥

ಪ್ರಿಯಮಿತ್ರನೆನಗೆ ಕಮಲ ।
ಪ್ರಿಯನಂದನನವನೆನ್ನ ಪಕ್ಕದೆ ಪಱೆದ ॥
ಪ್ರಿಯಮಂ ಮಾಡಿದನಾ ಕಳ ।
ಶಯೋನಿ ನೆಗಟ್ದಿಂದ್ರಸುತನಿನೇಗುಂದಿದನೋ ॥೧೯॥

ತಪನಸುತಂ ಬೇಱಾಂ ಬೇ ।
ಱೆ ಪೊಲ್ಲದಂ ನುಡಿದನಾ [ವಗಂ ಬಿಸುಟಂ ರ ॥
ಕ್ಷಿಪ ಕಯ್ದುವನೆನಲಾ] ಮಱೆ ।
ಯ ಪಾಂಡವಂ ಬಗೆದು ನೋಟ್ಪೊಡಶ್ವತ್ಥಾಮಂ ॥೨೦॥

ಗೆಲಲಾರ್ಪೊಡಿಱೆದು ಗೆಲ್ವುದು ।
ಗೆಲಲಾಱದೊಡಣ್ಮಿ ಸಾವುದಾಳ್ಗಿನಿತೆ ಗುಣಂ ॥
ಗೆಲಲುಂ ಸಾಯಲುಮಾಱದೆ ।
ತೊಲಗಿದೊಡೆ ನೆಗಟ್ತೆ ತೊಲಗದಿ [ಕುರ್ಮೆ] ಮೆಯ್ಯಂ ॥೨೧॥

೧೮. ಈ ದ್ರೋಣನು ಗುರುವಂತೆ ! ಭರದ್ವಾಜ ಮುನಿಯ ಮಗನಂತೆ ! ಆತನ ಧನುರ್ವಿದ್ಯೆಯ ಸಾಮರ್ಥ್ಯವಾಗಲಿ, ಕುಲದ ಮಹಿಮೆಯಾಗಲಿ ಎಷ್ಟಿದ್ದರೇನು ? ಸ್ವಾಮಿದ್ರೋಹಿಯಾಗಿ ಪಾಂಡವರ ಪಕ್ಷಪಾತಿಯಾದುದರಿಂದ ಅವೆರಡೂ ಹಾಳಾಗಿ ಹೋದುವು.

೧೯. ಸೂರ್ಯಪುತ್ರನಾದ ಕರ್ಣನು ನನ್ನ ಪ್ರಿಯಸ್ನೇಹಿತ. ಅಂತಹ ನನ್ನ ಗೆಳೆಯನನ್ನು ನನ್ನ ಸನ್ನಿಧಿಯಲ್ಲಿಯೆ ಆ ದ್ರೋಣನು ಹೀಯಾಳಿಸಿ ನುಡಿದು ನನಗೆ ಅಹಿತವೆಸಗಿದನು. ಇಂದ್ರಸುತನಾದ ಅರ್ಜುನನಿಗೆ ಕರ್ಣನು ಏನು ಕಡಿಮೆಯಾಗಿದ್ದನು?

೨೦. ಕರ್ಣನು ಬೇರೆ, ನಾನು ಬೇರೆಯೆ ? (ಕರ್ಣನನ್ನು ಕುರಿತು) ಹೀನವಾದ ಮಾತುಗಳನ್ನು ಆಡಿದನು ; (ಅದು ಸಾಲದೆಂಬಂತೆ) ನಮ್ಮ ಪಕ್ಷದವರನ್ನು ರಕ್ಷಿಸಬೇಕಾಗಿದ್ದ ತನ್ನ ಆಯುಧವನ್ನು ಕೂಡ ಬಿಸಾಕಿ ಹೊರಟು ಹೋದನಲ್ಲವೆ ? ವಿಚಾರಿಸಿ ನೋಡಿದರೆ ಈ ಅಶ್ವತ್ಥಾಮನು ನಮ್ಮವನಂತೆ ನಟಿಸಿ ಒಳಗಿಂದೊಳಗೆ ಪಾಂಡವಪಕ್ಷಪಾತಿಯಾಗಿಯೆ ವರ್ತಿಸಿದನು.

೨೧. ಗೆಲ್ಲಲು ಶಕ್ತನಾದರೆ ಯುದ್ಧಮಾಡಿ ಗೆಲ್ಲಬೇಕು ; ಸಾಧ್ಯವಾಗದಿದ್ದರೆ ಪರಾಕ್ರಮದಿಂದ ಹೋರಾಡಿ ಪ್ರಾಣ ನೀಗಬೇಕು. ಬಂಟನಾದವನಿಗೆ ಇರುವುದು ಇದೊಂದೇ ಮಾರ್ಗ. ಗೆಲ್ಲಲಾರದೆ, ಸಾಯಲೂ ಒಲ್ಲದೆ, ಯುದ್ಧರಂಗದಿಂದ ಜಾರಿಕೊಂಡರೆ ಚಾರಿತ್ರಕ್ಕೆ ಕಳಂಕ ತಟ್ಟುವುದಿಲ್ಲವೆ ?

ಸೆರಗಂ ಬೆಱಗಂ ಬಗೆಯದೆ ।
ಪೊರೆಯಿಲ್ಲದೆ ಕಲಿಯ ದಂಡೆಯಂ ನೂಂಕಿದವೋಲ್ ॥
ಪೊರೆದಾಳ್ದನ ಕಾರಣದಿಂ ।
ಪರಿಹರಿಪುದು ಭೃತ್ಯನರ್ಥಮಮಂ ಪ್ರಾಣಮುಮಂ ॥೨೨॥

ಕರವಾಳಂ ಮಸೆವಂದದೆ ।
ಮರವಾಳಂ ಮಸೆಯೆ ಕೂರಿತಕ್ಕುಮೆ ಕಲಿಯಂ ॥
ಪೊರೆದೊಡೆ ಕೂರ್ಪಂ ತೋರ್ಪಂ ।
ತಿರೆ ತೋರ್ಕುಮೆ ಪಂದೆ ಪತಿಗೆ ಸಂಗರದೆಡೆಯೊಳ್ ॥೨೩॥

ತುರು [ಗೋಳೊಳ್] ಪೆಣ್ಬುಯ್ಯಲೊ ।
ಳೞಿವೆಸದೊಳ್ ನಂಟನೆಡಱೊಳೂರಟೆವಿನೊಳಂ ॥
ತಱಿಸಂದು ಗಂಡುತನಮನೆ ।
ನೆಱಪದವಂ ಗಂಡನಲ್ಲನೆಂತುಂ ಪಂಡಂ ॥೨೪॥

ಎಂದರಸನವರ್ಗೆ ಏಸರಮಾಗಿ ಪರುಷಂನುಡಿಯೆ ಸಂಜಯಂ ತನ್ನಂತರ್ಗತದೊಳ್

ನೆಗೞ್ದೇಕಾದಶರುದ್ರನಾದಿಪುರುಷಂ ದೇವಂ ಲಲಾಟೇಕ್ಷಣಂ ।
ನಗರಾಜಪ್ರಿಯನಂದನಾಪ್ರಿಯತಮಂ ದ್ರೋಣಂಗೆ ಕಾರ್ಯಾರ್ಥದಿಂ ॥
ಮಗನಾದಂ ಸ್ಮರಘಸ್ಮರಂ ದಯೆಯಿನಶ್ವತ್ಥಾಮನೆಂದೆಂದೊಡಾ ।
ತ್ಮಗತಂ ಸತ್ವದಿನೇಂ ಪರೀಕ್ಷಿಪನೊ ಪಿಂಗಾಕ್ಷಂ ವಿರೂಪಾಕ್ಷನಂ ॥೨೫॥

೨೨. ಸಹಾಯವನ್ನು ಅಪೇಕ್ಷಿಸದೆ, ಭಯರಹಿತನಾಗಿ, ಮುನ್ನುಗ್ಗಿ, ಭೃತ್ಯನೆನಿಸಿಕೊಂಡವನು ಸಾಕಿದ ಒಡೆಯನ ಕಾರ್ಯಕ್ಕಾಗಿ ತನ್ನ ಅರ್ಥವನ್ನೂ ಪ್ರಾಣವನ್ನೂ ಅರ್ಪಿಸಿ ಋಣವನ್ನು ನೀಗಬೇಕು.

೨೩. ಉಕ್ಕಿನ ಖಡ್ಗವನ್ನು ಮಸೆದಂತೆ ಮರದ ಕತ್ತಿಯನ್ನು ಮಸೆದರೆ ಅದೆಂದಾದರೂ ಹರಿತವಾದೀತೆ ? ಶೂರನನ್ನು ಸಾಕಿದರೆ ಯುದ್ಧರಂಗದಲ್ಲಿ ಆತನು ಶೌರ್ಯವನ್ನು ತೋರಬಲ್ಲನು. ಹೇಡಿಯಾದವನು ತನ್ನ ಸ್ವಾಮಿಗೆ ಸೇವೆ ಸಲ್ಲಿಸಬಲ್ಲನೆ ?

೨೪. ಗೋಗ್ರಹಣದ ಕಾಳಗದಲ್ಲಿ, ಸ್ತ್ರೀಯರ ಮಾನರಕ್ಷಣೆಯಲ್ಲಿ, ಸ್ವಾಮಿಕಾರ್ಯದಲ್ಲಿ, ನಂಟರ ಆಪತ್ತಿನಲ್ಲಿ, ಗ್ರಾಮದ ದಾಳಿಯಲ್ಲಿ ದೃಢನಿರ್ಧಾರದಿಂದ ಮುನ್ನುಗ್ಗಿ ತನ್ನ ಪೌರುಷವನ್ನು ಒರೆಗೆ ಹಚ್ಚಿ ಹೋರಾಡದವನು ಗಂಡಲ್ಲ ; ಅವನು ಷಂಡನೇ ಸರಿ.

ವ॥ ಹೀಗೆಂದು ರಾಜನಾದ ದುರ್ಯೋಧನನು ಭೀಷ್ಮಾದಿಗಳ ವಿಷಯದಲ್ಲಿ ಕಠಿನವಾಗಿ ನುಡಿದುದನ್ನು ಕೇಳಿ ಸಂಜಯನು ತನ್ನ ಮನಸ್ಸಿನಲ್ಲಿಯೇ (ಹೀಗೆಂದುಕೊಂಡನು)-

೨೫. ಆದಿಪುರುಷನೂ, ಹನ್ನೊಂದನೆಯ ರುದ್ರನೂ, ಕಾಮಾಂತಕನೂ, ಪಾರ್ವತೀಪತಿಯೂ, ತ್ರಿಣೇತ್ರನೂ ಆದ ಪರಮೇಶ್ವರನು ದ್ರೋಣನ ಮೇಲೆ ಅನುಗ್ರಹ ಮಾಡಿ, ಕಾರ್ಯಾರ್ಥವಾಗಿ ಅವನಿಗೆ ಅಶ್ವತ್ಥಾಮನೆಂಬ ಮಗನಾಗಿ ಹುಟ್ಟಿದನು. ಅಂತಹ ವಿರೂಪಾಕ್ಷನ ಸಾಮರ್ಥ್ಯವನ್ನು ಈ ದುರ್ಯೋಧನನೇನು ಪರೀಕ್ಷಿಸಬಲ್ಲನು ?

ಪಗೆ ಚಿತ್ರಾಂಗದನುಯ್ಯಲ್ ।
ಗಗನದೊಳುಱೆ ತನ್ನ ತಂದ ಬಾಂಧವಕೃತಮಂ ॥
ಬಗೆಯದಹಿತಮನೆ ಬಗೆದಂ ।
ಪುಗದಿರ್ಕುಮೆ ಪೋಗಿ ಕೌರವಂ ರೌರವಮಂ ॥೨೬॥

ಕಾರ್ಯಸಖಂ ಶಕುನಿ ಗಡಾ ।
ಶೌರ್ಯಸಖಂ ಸೂತಜಂ ಗಡಾ ಭೀಷ್ಮಶರಾ ॥
ಚಾರ್ಯರ ನುಡಿ [ಕಯ್ಪು] ಗಡಮು ।
ಕಾರ್ಯಂಗಹಿಕೇತನಂಗೆ ವಿಧಿವಿಳಸನದಿಂ ॥೨೭॥

ಗುರು ಕವಚಂ ಕರ್ಣಂ ಬಾ ।
ಹುರಕ್ಕೆ ಸುರಸಿಂಧುನಂದನಂ ಸೀಸಕಮಾ ॥
ಗಿರೆ ಮೆಯ್ಗೆ ಮುಳಿಯಲಱಿಯದೆ ।
ಕುರುರಾಜನ ತೊಡೆಯನುಡಿವೆನೆಂದಂ ಭೀಮಂ ॥೨೮॥

ಧೃತರಾಷ್ಟ್ರಂ ದ್ರುಮಮಾದುದು ।
ಶತಶಾಖಂ ಪಂಚಶಾಖಮಾದುದು ಪಾಂಡು ॥
ಕ್ಷಿತಿರುಹಮಕ್ಷಯಮಾಯ್ತಾ ।
ದ್ವಿತೀಯಮಾಯ್ತೇಕಶಾಖಮಿವನಿಂದಾದ್ಯಂ ॥೨೯॥

ಎಂದು ಸಂಜಯಂ ಕುರುರಾಜನಂ ನೋಡಿ

೨೬. ಶತ್ರುವಾಗಿ ಬಂದ ಚಿತ್ರಾಂಗದನು ಹೆಡಮುರಿಗಟ್ಟಿ ಆಕಾಶಮಾರ್ಗವಾಗಿ ಒಯ್ಯುತ್ತಿರುವಾಗ ತನ್ನನ್ನು ಬಿಡಿಸಿಕೊಂಡು ಬಂದ ಪಾಂಡವರ ಬಂಧುಪ್ರೇಮವನ್ನು ನೆನೆಯದೆ, ದುರ್ಯೋಧನನು ಅವನಿಗೆ ಕೇಡನ್ನು ಬಗೆದನು. ಈ ಪಾಪದಿಂದ ಅವನು ರೌರವ ನರಕಕ್ಕೇ ಹೋಗದಿರುವನೆ ?

೨೭. ದುಷ್ಕೃತ್ಯನಿರತನಾದ ದುರ್ಯೋಧನನಿಗೆ ಕಾರ್ಯದಲ್ಲಿ ಸ್ನೇಹಿತ ಶಕುನಿ ! ಶೌರ್ಯಕ್ಕೆ ಸ್ನೇಹಿತ ಕರ್ಣ ! ಭೀಷ್ಮರ ಹಾಗು ದ್ರೋಣಾಚಾರ್ಯರ ಮಾತು ಇವನಿಗೆ ಕಹಿ । ಇದು ವಿಧಿವಿಲಾಸ.

೨೮. ದ್ರೋಣಾಚಾರ್ಯರು ಈತನಿಗೆ ಕವಚ ; ಕರ್ಣನು ಭುಜರಕ್ಷೆ ; ಭೀಷ್ಮರು ಶಿರಸ್ತ್ರಾಣ. ಹೀಗೆ ಮೈಯೆಲ್ಲ ಸುರಕ್ಷಿತವಾಗಿದ್ದರಿಂದಲೆ (ಅರಕ್ಷಿತವಾಗಿ ಉಳಿದ) ತೊಡೆಗಳನ್ನು ಮುರಿಯುವೆನೆಂದು ಭೀಮನು ಭಾಷೆ ತೊಟ್ಟನು.

೨೯. ಧೃತರಾಷ್ಟ್ರವೆಂಬ ಮರಕ್ಕೆ ನೂರು ಶಾಖೆಯೊಡೆದುವು ; ಪಾಂಡುವೆಂಬ ಮರಕ್ಕೆ ಐದೇ ಶಾಖೆಗಳಾದುವು. ಆ ಪಾಂಡುವೃಕ್ಷ ಅಕ್ಷತವಾಗಿ (ಅಳಿವಿಲ್ಲದೆ) ನಿಂತಿದೆ. ಆದರೆ ಈ ದುರ್ಯೋಧನನಿಂದಾಗಿ ನೂರು ಶಾಖೆಯ ಹೆಮ್ಮರ ಒಂದೇ ಶಾಖೆಯಾಗಿ ಉಳಿದುಕೊಂಡಿದೆ.

ವ॥ ಹೀಗೆಂದುಕೊಂಡು ಸಂಜಯನು ಕೌರವರಾಜನನ್ನು ನೋಡಿ (ಹೀಗೆ ನುಡಿದನು)

ಭುವನಕ್ಕಾರಾಧ್ಯನೆಂಬೀ ನೆಗಳ್ದ ಬಿರುದಿನಂಕಕ್ಕೆ ತಕ್ಕಂದದಿಂ ಭಾ ।
ರ್ಗವನೊಳ್ ದಿವ್ಯಾಸ್ತ್ರಮಂ ಮುಂ ಪಡೆದು ನೆಗಳ್ದ ಶೌರ್ಯಕ್ಕೆ ತಕ್ಕಂದದಿಂ ಪಾಂ ॥
ಡವರುಂ ಕೌರವ್ಯರುಂ ಕೈಮುಗಿಯೆ ನೆಗಳ್ದ ಪೆಂಪಿಂಗೆ ತಕ್ಕಂದದಿಂ ಬ ।
ಲ್ಲೊವಜಂ ಗಾಂಡೀವಿಯೊಳ್ ಕಾದಿದನವರ ಶರಾಸಾರಮಂ ನೀನೆ ಕಂಡೈ ॥೩೦॥

ಇದ ದಲ್ ಗಂಗಾತ್ಮಜನ್ಮಕ್ಕನುಗುಣಮಿದು ರಾಜಪ್ರಸಾದಕ್ಕೆ ಪೋ ತ ।
ಕ್ಕುದಿದೀ ದೋರ್ದಂಡಕಂಡೂಯನಕಿದು ಸದೃಶಂ ಕಲ್ತ ಬಿಲ್ಬಿನ್ನಣಕ್ಕಿಂ ॥
ತಿದು ಯುಕ್ತಂ ಭೀಷ್ಮನಾಮಕ್ಕಿದು ಸಮುಚಿತಮೆಂಬಂತೆ ಸಂಗ್ರಾಮರಂಗೋ ।
ನ್ಮದರೆಲ್ಲರ್ ನೋಡೆ ಪೆಂಪಂ ಕದನದೊಳದಟಂ ತೋಱಿದಂ ಸಿಂಧುಪುತ್ರಂ ॥೩೧॥

ಕಳಶನದೀಜರ್ ಭಕ್ತಿಗೆ ।
ಕಳಶಾರೋಹಣಮಿದೆನಿಸಿ ನೆಱಿಪಿದರವರೊಂ ॥
ದಳವಲ್ತು ಕಾದಿ ಗೆಲಲಾ ।
ರಳವಲ್ತರ್ಜುನನ ಶೌರ್ಯಮಂ ನೀನಱಿಯಾ ॥೩೨॥

ಅರಿಚಿತ್ರಾಂಗದನುಯ್ಯೆ ಭಾನುಮತಿ ಬಂದಾಕ್ರಂದನಂಗೆಯ್ಯೆ ಧ ।
ರ್ಮರತಂ ತಮ್ಮನ ಪೇೞೆ ಧರ್ಮತನಯಂ ನಿನ್ನಂ ನಭೋಮಾರ್ಗದೊಳ್ ॥
ಶರನಿಶ್ರೇಣಿಯೊಳಂದು ತಂದನದನಾರ್ಗಂ ಮೊಗ್ಗೆ [ಕೃಷ್ಣಾಸ್ವಯಂ ।
ವರಮತ್ಸ್ಯೇಷು] ವರಪ್ರಕಾಶಿತಧನುರ್ವಿದ್ಯಾಗುಣಂ ಫಲ್ಗುಣಂ ॥೩೩॥

೩೦. ಲೋಕಕ್ಕೆ ಸ್ತುತ್ಯನೆಂಬ ಅಗ್ಗಳಿಕೆಯ ಬಿರುದಿಗೆ ಸಾರ್ಥಕವಾಗಿ, ಪರಶುರಾಮನಲ್ಲಿ ದಿವ್ಯಾಸ್ತ್ರಗಳನ್ನು ಪಡೆದು ಗಳಿಸಿದ ಶೌರ್ಯಕ್ಕೆ ತಕ್ಕಂತೆ, ಪಾಂಡವರೂ ಕೌರವರೂ ಕೈಮುಗಿಯುವಂತೆ ಗುರುವಾಗಿ ನಡೆದುಕೊಂಡು ಅತ್ಯುನ್ನತಿಗೆ ತಕ್ಕಂತೆ ಧನುರ್ವಿದ್ಯಾಗುರು ದ್ರೋಣಾಚಾರ್ಯನು ಅರ್ಜುನನೊಡನೆ ಯುದ್ಧಮಾಡಿದನು. ಅವನ ಬಾಣವೃಷ್ಟಿಯನ್ನು ನೀನೆ ಕಣ್ಣಾರೆ ಕಂಡಿರುವೆ.

೩೧. ದೇವಗಂಗೆಯ ಉದರಲ್ಲಿ ಹುಟ್ಟಿಬಂದುದಕ್ಕೆ ಇದು ಅನುಗುಣ, ರಾಜನ ಮೆಚ್ಚುಗೆಗೆ ಇದು ತಕ್ಕುದು, ತೋಳ ತೀಟೆಗೆ ಇದು ಸಾರ್ಥಕ, ಕಲಿತ ವಿದ್ಯೆಗೆ ಇದು ಯೋಗ್ಯ, 'ಭೀಷ್ಮ'ನೆಂಬ ಹೆಸರಿಗೆ ಇದು ಸುಯೋಗ್ಯ ಎಂಬಂತೆ ರಣರಂಗದಲ್ಲಿ ಯುದ್ಧೋನ್ಮಾದಿಗಳೆಲ್ಲರೂ ನೋಡುತ್ತಿರುವಂತೆ ಭೀಷ್ಮನು ಯುದ್ಧದಲ್ಲಿ ತನ್ನ ಪರಾಕ್ರಮವನ್ನು ತೋರಿದನು.

೩೨. ದ್ರೋಣನೂ, ಭೀಷ್ಮನೂ ತಮ್ಮ ಸ್ವಾಮಿಭಕ್ತಿಗೆ ಕಳಸವಿಟ್ಟ ರೀತಿಯಲ್ಲಿ ಯುದ್ಧವನ್ನು ನಡೆಸಿದರು. ಆದರೆ (ಅರ್ಜುನನನ್ನು) ಸೋಲಿಸುವ ಸಾಮರ್ಥ್ಯ ಅವರಿಗಿಲ್ಲ. ಅರ್ಜುನನ ಪರಾಕ್ರಮವನ್ನು ನೀನು ತಿಳಿಯೆಯಾ ?

೩೩. ಶತ್ರುವಾದ ಚಿತ್ರಾಂಗದನು ನಿನ್ನನ್ನು ಸೆರೆಹಿಡಿದುಕೊಂಡು ಆಕಾಶಮಾರ್ಗವಾಗಿ ಹೊರಟು ಹೋದಾಗ ಭಾನುಮತಿಯ ಹುಯ್ಯಲನ್ನು ಕೇಳಿ ಧರ್ಮಿಷ್ಠನಾದ ಧರ್ಮರಾಜನು ಅಪ್ಪಣೆ ಮಾಡಲಾಗಿ ಅವನ ತಮ್ಮನಾದ ಅರ್ಜುನನು ಬಾಣದ ಏಣಿಯನ್ನು

ನೃಪ ನಿನ್ನಂ ಪಿಡಿದುಯ್ಯೆ ಭಾನುಮತಿಯಂ ಸಂತೈಸಿ ಚಿತ್ರಾಂಗದಂ ।
ಗುಪಯೋಗಾಸ್ತ್ರಮನೆಚ್ಚು ಕೂಡೆ ನಭದಿಂ ಗಾಂಡೀವಿ ತರ್ಪಾಗಳೀ ॥
ಕೃಪನೀ ಸೈಂಧವನೀ ಸರಿತ್ತನಯನೀ ರಾಧೇಯನೀ ಮದ್ರಭೂ ।
ಮಿಪನೀ ಕುಂಭಜನೀ ಕುರುಪ್ರಭವರಂದೇಂ ಹಮ್ಮದಂಬೋದರೇ ॥೩೪॥

ಪರಿದಿಱಿದಂತಕನೊಳ್ ಪಾ ।
ರ್ವರ ಪಿಳ್ಳೆಯ ಪೋದ ಜೀವಮಂ ತಂದಂ ಬಂ ॥
ದೆರೆಯೆ ಶಿಖಿಗಿತ್ತನಾ ಸ ।
ಚ್ಚರಿತಂ ಭುಜಬಲದೆ ಪಾಂಡವಂ ಖಾಂಡವಮಂ ॥೩೫॥

[ಕೇತೂಕೃತಾಂಜನೇಯಂ] ।
ಸೂತೀಕೃತಹರಿವರಪ್ರಸಾದಂ ಮದನಾ ॥
ರಾತಿಕೃತಾಸ್ತ್ರಂ ಪಿತೃಪುರು ।
ಹೂತಂ ಕೃತಿಪೂರ್ಣತಾಕೃತಾರ್ಥಂ ಪಾರ್ಥಂ ॥೩೬॥

ಒಟ್ಟಜೆಗಿತ್ತ ಲಂಕೆಯ ವಿಭೀಷಣನಿತ್ತ ಕುಬೇರನಳ್ಕಿ ತಂ ।
ದೊಟ್ಟಿದ ಪೊನ್ನ ರಾಸಿಗಳನಿತ್ತು ಧರಾಮರರ್ಗಂದು ತಂದೆ ಪೇ ॥
ಳ್ದಟ್ಟಿದ ರಾಜಸೂಯಮಖಮಂ ತಡಮಿಲ್ಲದೆ ಬೇಳ್ದ ಬೀರಮಂ ।
ನೆಟ್ಟನೆ ನೀನೆ ಕಂಡಿಟೆಸಲಕ್ಕುಮೆ ಗಾಂಡಿವಿಯಂ ಸುಯೋಧನಾ ॥೩೭॥

ರಚಿಸಿ ಆಕಾಶದಿಂದ ನಿನ್ನನ್ನು ಮರಳಿ ತಂದನು. ಇದು ಇನ್ನಾರಿಗೆ ಸಾಧ್ಯ ? ದ್ರೌಪದೀ ಸ್ವಯಂವರ ಕಾಲದಲ್ಲಿ ಮತ್ಸ್ಯಯಂತ್ರವನ್ನು ಭೇದಿಸುವಾಗಲೆ ತನ್ನ ಬಿಲ್ವಿದ್ಯೆಯ ನೈಪುಣ್ಯವನ್ನು ಆತನು ಪ್ರಕಟಿಸಿದ್ದನಲ್ಲವೆ ?

೩೪. ಚಿತ್ರಾಂಗದನು ನಿನ್ನನ್ನು ಹಿಡಿದೊಯ್ಯಲು, ಭಾನುಮತಿಯನ್ನು ಸಮಾಧಾನ ಗೊಳಿಸಿ, ಚಿತ್ರಾಂಗದನನ್ನು ತನ್ನ ಅಸ್ತ್ರಗಳಿಂದ ಸೋಲಿಸಿ, ಅರ್ಜುನನು ನಿನ್ನನ್ನು ಬಿಡಿಸಿ ಕೊಂಡು ಆಕಾಶದಿಂದ ಮರಳಿ ತರುವಾಗ ಈ ಕೃಪ, ಈ ಜಯದ್ರಥ, ಈ ಭೀಷ್ಮ, ಈ ಕರ್ಣ, ಈ ಶಲ್ಯ, ಈ ದ್ರೋಣ, ಈ ಕೌರವಾನುಜರು ಅಂದೇನು ಮೂರ್ಛೆ ಹೋಗಿದ್ದರೆ?

೩೫. ಸಚ್ಚರಿತನಾದ ಬಲಶಾಲಿಯಾದ ಆ ಅರ್ಜುನನು ಬೆನ್ನಟ್ಟಿ ಹೋಗಿ ಯಮನೊಡನೆ ಹೋರಾಡಿ, ಹೊರಟು ಹೋಗಿದ್ದ ಹಾರುವರ ಮಗುವಿನ ಜೀವವನ್ನು ಮರಳಿ ತಂದು ಕೊಟ್ಟನು ; ಅಗ್ನಿ ಬಂದು ಯಾಚಿಸಲಾಗಿ ಖಾಂಡವವನವನ್ನು ಅವನಿಗೆ ದಾನ ಮಾಡಿದನು.

೩೬. ಆಂಜನೇಯನನ್ನು ತನ್ನ ಧ್ವಜದಲ್ಲಿ ನಿಲ್ಲಿಸಿಕೊಂಡನು ; ವಿಷ್ಣು ಸ್ವರೂಪನಾದ ಕೃಷ್ಣನನ್ನು ತನ್ನ ಸಾರಥಿಯಾಗಿ ಮಾಡಿಕೊಂಡನು ; ಶಿವನನ್ನು ಮೆಚ್ಚಿಸಿ ಅವನಿಂದ ಪಾಶಪತಾಸ್ತ್ರವನ್ನು ಪಡೆದುಕೊಂಡನು. ಇಂದ್ರನೇ ಅವನಿಗೆ ತಂದೆಯಾಗಿದ್ದಾನೆ. ಇಂತಹ ಪಾರ್ಥ (ಅರ್ಜುನ)ನು ಕೈಗೊಂಡ ಕೃತಿಗಳನ್ನು ಪೂರ್ಣಗೊಳಿಸಿ ಕೃತಾರ್ಥನಾಗಿದ್ದಾನೆ.

೩೭. ಕಾಣಿಕೆಯೆಂದು ಲಂಕೆಯ ವಿಭೀಷಣನೂ, ಭಯದಿಂದ ಕುಬೇರನೂ ರಾಶಿರಾಶಿಯಾಗಿ ತಂದು ಒಟ್ಟಿದ ಚಿನ್ನವನ್ನು ಹೇರಳವಾಗಿ ಬ್ರಾಹ್ಮಣರಿಗೆ ದಾನವಾಗಿ

ಮೃಡನೊಳ್ ಪಾಶುಪತಾಸ್ತ್ರಂ ।
ಬಡೆದಂ ತ್ರಿದಶಾಧಿಪತಿಯೊಳರ್ಧಾಸನಮಂ ॥
ಪಡೆದಂ ನಾರಾಯಣನೊಳ್ ।
ಪಡೆದಂ ಗಾಂಡಿವಿ ಸುಭದ್ರೆಯಂ ಭದ್ರಮನಂ ॥೩೮॥

ಕಲಿ ಪನ್ನೊಂದಕ್ಕೋಹಿಣಿ ।
ಬಲಮೆಲ್ಲಮನೊಂದೆ ರಥದೊಳೊರ್ವನೆ ಗೆಲ್ದಂ ॥
ಗೆಲಲರಿಯಂ ಗೋಗ್ರಹಣದ ।
ಕಲಹದೊಳೇಕಾಂಗವಿಜಯನಾದಂ ವಿಜಯಂ ॥೩೯॥

ಅಂತಕನುಮಿಂದ್ರನುಂ ಕಾ ।
ಮಾಂತಕನುಂ ಭಾನುಸೂನುವುಂ ಕಳಶಜನುಂ ॥
ಶಂತನುತನೂಜನಾಱದೆ ।
ಕುಂತೀಸುತನಂ ಗೆಲಲ್ಕೆ ಪೆಱರಾರ್ತಪರೇ ॥೪೦॥

ಏದೊರೆಯಂ ಲಂಕಾಪುಟ ।
ಭೇದನಪಟುತರಕವಾಟಪುಟಭೇದನನಂ ॥
ತಾದೊರೆಯಣುವಂ ಪಟಯಿಗೆ
ಯಾದಂ ಗಾಂಡಿವಿಗೆ ಮಲೆವ ಗಂಡರುಮೊಳರೇ ॥೪೧॥

ಕೊಟ್ಟು ತನ್ನ ತಂದೆ ಹೇಳಿ ಕಳಿಸಿದಂತೆ ರಾಜಸೂಯಯಜ್ಞವನ್ನು ತಡಮಾಡದೆ ಪೂರ್ಣವಾಗಿ ನೆರವೇರಿಸಿದ ಗಂಡುತನವನ್ನು ನೀನೆ ಕಣ್ಣಾರೆ ಕಂಡು ಕಂಡು ಅರ್ಜುನನನ್ನು ಹೀಗಳೆದು ನುಡಿಯಬಹುದೆ ?

೩೮. ದೃಢಮನಸ್ಕನಾದ ಪಾರ್ಥನು ಶಿವನಿಂದ ಪಾಶುಪತಾಸ್ತ್ರವನ್ನು ಪಡೆದುಕೊಂಡನು ; ದೇವೇಂದ್ರನಿಂದ ಅರ್ಧಾಸನಗೌರವವನ್ನು ಪಡೆದನು ; ಕೃಷ್ಣನಿಂದ ಸುಭದ್ರೆಯನ್ನು ಪಡೆದನು.

೩೯. ಈ ಶೂರನು ಹನ್ನೊಂದಕ್ಕೋಹಿಣಿ ಸೈನ್ಯವನ್ನು ಒಂದೇ ರಥದಲ್ಲಿ ಒಬ್ಬನೇ ಗೆದ್ದನು. 'ವಿಜಯ'ನೆಂಬ ಹೆಸರಿಗೆ ಸಾರ್ಥಕವಾಗಿ ಗೋಗ್ರಹಣದ ಕಾಳಗದಲ್ಲಿ ಏಕಾಕಿಯಾಗಿ ಹೋರಾಡಿ ಎಲ್ಲರನ್ನೂ ಅವನು ಸೋಲಿಸಿದನು.

೪೦. ಯಮರಾಜ, ಇಂದ್ರ, ಶಿವ, ಕರ್ಣ, ದ್ರೋಣ, ಭೀಷ್ಮ ಇವರಾರಿಗೂ ಅರ್ಜುನನನ್ನು ಗೆಲ್ಲಲು ಸಾಧ್ಯವಾಗಿಲ್ಲವೆಂದಮೇಲೆ, ಬೇರೆ ಯಾರಾದರೂ ಅವನನ್ನು ಗೆಲ್ಲುವುದು ಸಾಧ್ಯವೆ ?

೪೧. ಲಂಕಾಪುರದ ಕೋಟೆಯನ್ನು ಸೀಳಿದ ಆ ಹನುಮಂತನ ಯೋಗ್ಯತೆ ಎಂತಹುದು ! ಅಂತಹ ಮಹಾಸಾಮರ್ಥ್ಯದ ಆ ಹನುಮಂತನೆ ಅರ್ಜುನನಿಗೆ ಧ್ವಜವಾದನೆಂದ ಮೇಲೆ ಅವನಿಗೆ ಎದುರಾಗುವ ವೀರರುಂಟೆ ?

ಉರಗೇಂದ್ರಲೋಕಮಂ ಪೊ ।
ಕ್ಕುರಗರೊಳಿಱಿದುರಗಪತಿಯ ನಿಜಸುತೆಯೊಡನಾ ॥
ದರದಿಂ ಜಯಲಕ್ಷ್ಮಿಯೊಳೊಡ ।
ವೆರೆದಂ ಕೀರ್ತಿಯೊಳಮೊಂದೆ ಪಸೆಯೊಳೆ ಪಾರ್ಥಂ ॥೪೨॥

ಉರಿ ಕೊಳೆ ಕೋಟ್ಕೆಗಂ ಕೊಳೆ ವಿಷಾಹಿಕುಳಂ ಕೊಳೆ ಶತ್ರುಭೂಮಿಯೊಳ್ ।
ಗಿರಿಗಹನಂಗಳೊಳ್ ವಿಷಮರಾಕ್ಷಸಸಂಕುಲದೊಳ್ ವರಾಹಸಿಂ ॥
ಧುರ[ಖ]ರಶಯ್ಯೆಯೊಳ್ ವಿಪುಲಭೀಕರದೊಳ್ ನಿಜಬಾಹುವಜ್ರಪಂ ।
ಜರದೊಳಗಿಟ್ಟು ರಕ್ಷಿಸಿದನಲ್ತೆ ಸಹೋದರರಂ ವೃಕೋದರಂ ॥೪೩॥

ಪುಗೆ ಸೌಗಂಧಿಕವನಮಂ ।
ಪುಗಲೀಯದೆ ಪೊಣರ್ದ ಯಕ್ಷರಂ ಯಮಪುರಮಂ ॥
ಪುಗಿಸಿ ಕನಕಾಬ್ಜಮಮಂ ತಂ ।
ದ ಗಂಡನಾಜಿಪ್ರಚಂಡನಿಱಿವಬೆಡಂಗಂ ॥೪೪॥

ಕಾನನದಿಂದಗಲ್ದಂಬುಜ ।
ಕಾನನಮಂ ಬಿಟ್ಟು ಬಂದು ಸರಸತಿ ಸಿರಿ ತ ॥
ನ್ನಾನನದೊಳುರದೊಳಿರೆ ಚತು ।
ರಾನನನುಂ ಕೃಷ್ಣನೆನಿಪನಿಱಿವಬೆಡಂಗಂ ॥೪೫॥

೪೨. ನಾಗಲೋಕವನ್ನು ಹೊಕ್ಕು, ನಾಗರೊಡನೆ ಹೋರಾಡಿ ಗೆದ್ದು ನಾಗೇಂದ್ರನ ಮಗಳೊಡನೆ ಜಯಲಕ್ಷ್ಮಿಯನ್ನೂ,ಕೀರ್ತಿಯನ್ನೂ ಏಕಕಾಲದಲ್ಲಿ ಗಳಿಸಿಕೊಂಡವನು ಈ ಅರ್ಜುನನು.

೪೩. ಬೆಂಕಿ ಬಿದ್ದಾಗ, ಕ್ರೂರಮೃಗಗಳು ದಾಳಿಯಿಟ್ಟಾಗ, ವಿಷಸರ್ಪಗಳು ಮುತ್ತಿದಾಗ, ಶತ್ರುಭೂಮಿಯಲ್ಲಿ, ಬೆಟ್ಟಗಳಲ್ಲಿ, ಕಟ್ಟಡವಿಗಳಲ್ಲಿ, ಪ್ರಚಂಡ ರಾಕ್ಷಸ ಸಮೂಹ ಎದುರಾದಲ್ಲಿ, ಕಾಡುಹಂದಿ ಕಾಡಾನೆಗಳ ಪ್ರದೇಶದಲ್ಲಿ, ಹೀಗೆ ಹೇರಳವಾದ ಭಯಾನಕ ಪ್ರಸಂಗಗಳೆಲ್ಲವುಗಳಲ್ಲಿಯೂ ತನ್ನ ತೋಳುಗಳೆಂಬ ವಜ್ರಪಂಜರದಲ್ಲಿ ನೆಮ್ಮದಿಯಾಗಿರುವಂತೆ ಇಟ್ಟುಕೊಂಡು ತಮ್ಮ ಅಣ್ಣತಮ್ಮಂದಿರನ್ನು ಭೀಮಸೇನನು ಕಾಪಾಡಿದನಲ್ಲವೆ ?

೪೪. ಸೌಗಂಧಿಕ ವನವನ್ನು ಪ್ರವೇಶಮಾಡಗೊಡದೆ ಕಾವಲಿನ ಯಕ್ಷರು ಅಡ್ಡಗಟ್ಟಲಾಗಿ ಅವರನ್ನು ಯಮಪುರಕ್ಕೆ ಅಟ್ಟಿ ಸುವರ್ಣಕಮಲವನ್ನು ಎತ್ತಿಕೊಂಡು ಬಂದವನು ರಣರಂಗಪ್ರಚಂಡನಾದ ಇರಿವಬೆಡಂಗ(ಭೀಮಸೇನ)ನು.

೪೫. ಬ್ರಹ್ಮನ ಮುಖವನ್ನು ಬಿಟ್ಟು ಸರಸ್ವತಿಯೂ, ಕಮಲವನವನ್ನು ತೊರೆದು ಲಕ್ಷ್ಮಿಯೂ ಈತನ ಮುಖ ಹಾಗು ಎದೆಯಲ್ಲಿ ಕ್ರಮವಾಗಿ ನೆಲಸಿರುವುದರಿಂದ ಇರಿವಬೆಡಂಗನು ಬ್ರಹ್ಮನೂ ಹೌದು, ಕೃಷ್ಣನೂ ಹೌದು.

ಬಕನಂ ಹಿಡಿಂಬನಂ ಕೀ ।
ಚಕನಂ ಕಿಮ್ಮೀರನಂ ಜಟಾಸುರನಂ ಕೊಂ ॥
ದ ಕಲಿ ಜರಾಸಂಧನನಿ ।
ಕ್ಕಿ ಕೊಂದ ಬಲ್ಲಾಳ್ ಮರುತ್ಸುತಂ ಕೇವಳನೇ ॥೪೬॥

ನರಪತಿತೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯಂ ।
ಪರಿಯಿಸಿ ಗೆಲ್ದನೊಟ್ಟಜೆಯ ಕಪ್ಪಮನಟ್ಟುವುದೆಂದು ಕೊಂಕಣೇ ॥
ಶ್ವರನನಿದಿರ್ಚಿ ಸಾಧಿಸಿದನಂಬುಧಿಸೀಮೆವರಂ ನಿಮಿರ್ಚಿದಂ ।
ಧರೆಯನದೇಕೆ ಕೇಳ್ದಜೆಯ ಸಾಹಸಭೀಮನ ಸಾಹಸಂಗಳಂ ॥೪೭॥

ಬಲವತ್ತುಂಗಕಳಿಂಗರಾಜಮದವನ್ಮಾತಂಗಸಿಂಹಂ ಭುಜಾ ।
[ರ್ಗ]ಲಸಂಚೂರ್ಣಿತವೀರಕೌರವಶತಂ ದುಶ್ಶಾಸನೋರಸ್ಸ್ಥಳೋ ॥
ಚ್ಛಲದುಷ್ಣಾಂಬುನಿಮಗ್ನಪೂರ್ಣಜಠರಂ ಕೋಪಾಗ್ನಿಮಗ್ನದ್ವಿಷ ।
ದ್ಬಲನಾವಂಗಮಸಾಧ್ಯನಾರ್ಗಮಧಿಕಂ ಚಾಳುಕ್ಯಕಂಠೀರವಂ ॥೪೮॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀ ಸತ್ಯಾಶ್ರಯ ಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿ ಕವಿರನ್ನವಿರಚಿತಮಪ್ಪ ಚಾಳುಕ್ಯ ಚಕ್ರವರ್ತಿ ಶ್ರೀಸಾಹಸ ಭೀಮವಿಜಯದೊಳ್ ಸಂಜಯವಚನವ್ಯಾವರ್ಣನಂ ದ್ವಿತೀಯಾಶ್ವಾಸಂ ಸಂಪೂರ್ಣಂ ॥

೪೬. ಬಕಾಸುರ, ಹಿಡಿಂಬ, ಕೀಚಕ,ಕಿಮ್ಮೀರ, ಜಟಾಸುರ ಹಾಗು ವೀರನಾದ ಜರಾಸಂಧ ಇವರೆಲ್ಲರನ್ನೂ ಹೊಡೆದು ಕೊಂದ ಮಹಸತ್ತ್ವನಾದ ಭೀಮಸೇನನು ಸಾಮಾನ್ಯನೇ ?

೪೭. ತೈಲಪ ದೊರೆಯ ಅಪ್ಪಣೆಯ ಮೇರೆಗೆ ಘೂರ್ಜರ ಸೈನ್ಯದ ಮೇಲೆ ತನ್ನ ಸೂಚಿಯಾನೆಯನ್ನು ನುಗ್ಗಿಸಿ ಗೆದ್ದನು ; ಹೇರಳವಾದ ಕಪ್ಪವನ್ನೊಪ್ಪಿಸೆಂದು ಕೊಂಕಣದ ರಾಜನನ್ನು ಇದಿರಿಸಿ ಗೆದ್ದನು ; ತನ್ನ ರಾಜ್ಯವನ್ನು ಸಮುದ್ರತಟದವರೆಗೆ ವಿಸ್ತರಿಸಿದನು. ಹೀಗಿರುವ ಸಾಹಸಭೀಮನ ಸಾಹಸಗಳನ್ನು ನೀನು ಕೇಳಿ ತಿಳಿಯೆಯಾ ?

೪೮. ಕಲಿಂಗರಾಜನ ಬಲಿಷ್ಠವಾದ ಮದದಾನೆಗಳಿಗೆಲ್ಲ ಸಿಂಹನಾಗಿ, ತನ್ನ ತೋಳುಗಳಿಂದ ನೂರು ಜನ ಕೌರವರನ್ನು ಕುಟ್ಟಿ ಪುಡಿಮಾಡಿ, ದುಶ್ಶಾಸನನ ಎದೆಯಿಂದ ಚಿಮ್ಮಿದ ಬಿಸಿನೆತ್ತರನ್ನು ಕುಡಿಕುಡಿದು ಹೊಟ್ಟೆ ತುಂಬಿಸಿಕೊಂಡು ಶತ್ರುಗಳನ್ನು ತನ್ನ ಕೋಪಾಗ್ನಿಯಿಂದ ಆವರಿಸುತ್ತಿರುವ ಚಾಳುಕ್ಯಕಂಠೀರವನು ಯಾರಿಗೂ ಸೋಲುವವನಲ್ಲ; ಎಲ್ಲರಿಗೂ ಅಧಿಕನಾದವನು.

# ತೃತೀಯಾಶ್ವಾಸಂ

ಶ್ರೀಮದಮೃತಾಂಶುವಂಶ ।
ವ್ಯೋಮಾಮೃತಕಿರಣನಮರವಂದಿತಚರಣಂ ॥
ಭೀಮಭುಜದಳಿತರಿಪುನೃಪ ।
ಸಾಮಜನವದಾತಕೀರ್ತಿ ಸಾಹಸಭೀಮಂ ॥೧॥

ಎಂದು ಸಂಜಯಂ ಸಾಹಸಭೀಮ ಸಾಹಸಸಂಗಳನಭಿವರ್ಣಿಸುವಂ -

ನೆಗಟ್ದಾಭಾರತಮಲ್ಲ [ಶಕ್ರಸುತ] ಬಾಣಾಘಾತದಿಂ ಭೀಮಭೀ ।
ಮಗದಾದಂಡವಿಘಾತದಿಂ ಕುರುನೃಪಾನೀಕಂ ಪಡಲ್ವಟ್ಟು ಜೇ ॥
ರಿಗೆಯೊಕ್ಕಲ್ಗೆಣೆಯಾಗಿ ಬಿಟ್ದ ಭಟರಿಂ ಬಿಟ್ದಶ್ವದಿಂ ಬಿಟ್ದ ದಂ ।
ತಿಗಳಿಂದಂ ಜವನುಂಡು ಕಾಱಿದವೊಲಾಯ್ತೆತ್ತಂ ಕುರುಕ್ಷೇತ್ರದೊಳ್ ॥೨॥

ದೊಣೆಯಿಂದಂ ತೆಗೆವಾಗಳೊಂದು ತುಡುವಾಗಳ್ ಪತ್ತುಬಾಣಂ ಧನು ।
ರ್ಗುಣದಿಂದಂ ಬಿಡುವಲ್ಲಿ ನೂಱು ಪರಿವಾಗಳ್ ಸಾಸಿರಂ ವೈರಿಮಾ ॥
ರ್ಗಣಮಂ ಭೇದಿಸುವಲ್ಲಿ ಲಕ್ಕ ನಡುವಾಗಳ್ ಕೋಟಿ ಸೇನಾಂಗದೊಳ್ ।
ಗಣನಾತೀತಮಿದೆಂದೊಡೇವೊಗಟ್ಟುದೋ ಬಿಲ್ಬಲ್ಮೆಯಂ ಪಾರ್ಥನಾ ॥೩॥

೧. ಘನತೆವೆತ್ತ ಸೋಮವಂಶವೆಂಬ ಆಕಾಶಕ್ಕೆ ಚಂದ್ರನಂತಿರುವವನೂ ಗೌರವಾನ್ವಿತನೂ ತನ್ನ ಪ್ರಚಂಡ ಭುಜಬಲದಿಂದ ಶತ್ರುರಾಜರೆಂಬ ಆನೆಗಳನ್ನು ಹುಡಿಗುಟ್ಟಿದವನೂ ಆದ ಪರಾಕ್ರಮಿ ಭೀಮಸೇನನು ನಿಷ್ಕಳಂಕವಾದ ಕೀರ್ತಿಯುಳ್ಳವನು.

ವ॥ ಹೀಗೆ ಪರಾಕ್ರಮಿ ಭೀಮನ ಸಾಹಸಗಳನ್ನು ಸಂಜಯನು ವರ್ಣಿಸುತ್ತ -

೨. ಆಗ್ಗಳಿಕೆಯ ಭಾರತಮಲ್ಲನಾದ ಅರ್ಜುನನ ಬಾಣಗಳ ಹೊಡೆತದಿಂದಲೂ, ಭೀಮನ ಭೀಕರವಾದ ಗದೆಯ ಹೊಡೆತಗಳಿಂದಲೂ ಕೌರವ ಸೌನ್ಯವು ಚೆಲ್ಲಾಪಿಲ್ಲಿಯಾಗಿ, ಜೇರಿಗೆಯ ಒಕ್ಕಲಿಗೆ ಸಮನಾಗಿ ಬೆದರಿ ಬಿದ್ದ ಸೈನಿಕರಿಂದಲೂ ಸತ್ತು ಬಿದ್ದ ಕುದುರೆಗಳಿಂದಲೂ, ಆನೆಯ ಹೆಣಗಳಿಂದಲೂ ಕುರಕ್ಷೇತ್ರದಲ್ಲಿ ಎತ್ತೆತ್ತಲೂ ಯಮನು ಉಂಡುಂಡು ಅಜೀರ್ಣವಾಗಿ ಕಾರಿಕೊಂಡಂತೆ ಆಯಿತು.

೩. ಬತ್ತಳಿಕೆಯಿಂದ ಹಿರಿದುಕೊಳ್ಳುವಾಗ ಒಂದು, ಹೆದಗೆ ಜೋಡಿಸುವಾಗ ಹತ್ತು, ಬಿಲ್ಲಿಂದ ಚಿಮ್ಮುವಾಗ ನೂರು, ಅಲ್ಲಿಂದ ಮುನ್ನುಗ್ಗುವಾಗ ಸಾವಿರ, ಶತ್ರು ಬಾಣಗಳನ್ನು ಕತ್ತರಿಸುವಾಗ ಲಕ್ಷ, ಸೈನ್ಯದ ಒಡಲಲ್ಲಿ ನಡುವಾಗ ಕೋಟಿ - ಹೀಗೆ ಎಣಿಕೆಗೆ ಅಳವಡದಂತೆ ವೇಗವಾಗಿ, ಬಾಣಗಳ ಪ್ರಯೋಗವಾಗುತ್ತಿತ್ತೆಂದ ಮೇಲೆ ಅರ್ಜುನನ ಬಿಲ್ಗಾರಿಕೆಯ ಸಾಮರ್ಥ್ಯವನ್ನು ಎಷ್ಟೆಂದು ಹೊಗಳಿದರೂ ಸಾಲದು.

ಬೆಟ್ಟುಗಳುಗ್ರಾಶನಿಸಂ ।
ಘಟ್ಟದೆ ಕೆಡೆವಂತೆ ಭೀಮಭೀಮಗದಾಸಂ ॥
ಘಟ್ಟದೆ ಕೆಡೆದೊಡನೆ ಪಡ ।
ಲ್ವಟ್ಟುವು ಕಾಳಿಂಗರಾಜಸಮರಗಜಂಗಳ್ ॥೪॥

ಪವನಜವದಿಂದಲದಿಱೆಯೆ ।
ಲವಣಾರ್ಣವವೀಚಿಚಯಮೆ ಕೆಡೆವಂತಿರೆ ಕೆಡೆ ॥
ದುವು ತಾಂ ಬಿಡೆ ಕಾಂಭೋಜಾ ।
[ಶ್ವವಿಸರಮಾ] ಪವನಸುತಗದಾಸಂಹತಿಯಿಂ ॥೫॥

ರಥವಾಜಿಗಳೊಂದೆಸೆಯೊಳ್ ।
ರಥಂಗಳೊಂದೆಸೆಯೊಳುರುಳ್ದು ಕೆಡೆದುವು ನೋಡಾ ॥
ರಥಚೋದಕರೊಂದೆಸೆಯೊಳ್ ।
ಪೃಥಾಸುತಪ್ರಥಿತಪೃಥುಗದಾಪ್ರಹರ[ಣದಿಂ] ॥೬॥

ಬಲ್ವಡೆ ಪಡಲಿಟ್ಟಂತೆ ಪ ।
ಡಲ್ವಡೆ ಕಡಿತಲೆಯ ಕೊಂತದಣಿಕಟ್ಟನ ತೊಂ ॥
ಗಲ್ವೆರಸು ನೋಡೆನೋಡ ।
ಲೆಲ್ವಾದುವು ಪವನಜೋದ್ಗದಾಸಂಹತಿಯಿಂ ॥೭॥

೪. ಘೋರವಾದ ವಜ್ರಾಯುಧದ ಪೆಟ್ಟಿನಿಂದ ಬೆಟ್ಟಗಳು ಪುಡಿಪುಡಿಯಾಗಿ ಬೀಳುವಂತೆ ಭೀಮನ ಗದೆಯ ಹೊಡೆತದಿಂದ ಕಳಿಂಗರಾಜನ ಯುದ್ಧಗಜಗಳು ಪಟಪಟನೆ ಉದುರಿ ಬಿದ್ದವು.

೫. ಬಿರುಗಾಳಿಯ ವೇಗಕ್ಕೆ ತತ್ತರಿಸಿ ಲವಣಸಮುದ್ರದ ತೆರೆಗಳ ಸಾಲು ಸಾಲು ಮುರಿದು ಬೀಳುವ ಹಾಗೆ ಭೀಮಸೇನನ ಗದಾಪ್ರಹಾರದಿಂದ ಕಾಂಭೋಜಾಶ್ವಗಳು ಹಿಂಡು ಹಿಂಡಾಗಿ ನೆಲಕ್ಕೆ ಬಿದ್ದವು.

೬. ಭೀಮಸೇನನ ಅದ್ಭುತವಾದ ಗದಾಪ್ರಹಾರದಿಂದ ರಥದ ಕುದುರೆಗಳೊಂದು ಕಡೆಗೆ, ರಥಗಳು ಇನ್ನೊಂದು ಕಡೆಗೆ ಸಾರಥಿಗಳು ಬೇರೊಂದು ಕಡೆಗೆ ಚೆಲ್ಲಾಪಿಲ್ಲಿಯಾಗಿ ಬಿದ್ದುವು.

೭. ಭೀಮನ ಮಹಾಗದೆಯ ಘಾತದಿಂದ ಕಡಿತಲೆ, ಕೊಂತ, ಸೊಗಸಾಗಿ ಕಟ್ಟಿಕೊಂಡ ಶಿರೋಭೂಷಣಗಳ ಸಹಿತವಾಗಿ ಬಿಲ್ಗಾರರ ಪಡೆಗಳು ನೋಡು ನೋಡುವಷ್ಟರಲ್ಲಿ ಬಿದ್ದು ಎಲುವಿನ ಗೂಡುಗಳಾದುವು.

ನರರಿಂ ನರರಂ ಹರಿಯಿಂ ।
ಹರಿಯಂ ವರೂಥಮಮಂ ತದ್ವರೂಥದಿಂದಿಟ್ಟಸುಹೃ ॥
ತ್ಕರಿಯಂ ಪಡಲಿಟ್ಟಂತಿರೆ ।
ಮರುತ್ಸುತಂ ಮೋದಿ ತವಿಸಿದಂ ಮಾರ್ಬಲಮಂ ॥೮॥

ಕೆಲರಂ ನುಣ್ಣನೆ ನೊಣೆದಂ ।
ಕೆಲರಂ ಪಿಡಿದಡಿಸಿ ನುಂಗಿದಂ ಕುರುಕುಲರಂ ॥
ಕೆಲರಂ ಸೌಳನೆ ಸೀಳ್ದಂ ।
ಕೆಲರಂ ಮಾರುತಿ ಜವಂಗೆ ಬಾಣಸುಗೆಯ್ದಂ ॥೯॥

ಕೆಲರಂ ಕುಱಿದಱಿದಱಿದಂ।
ಕೆಲಂಬರಂ ಸಂಧಿಸಂಧಿಯಂ ಪಱಿಯೆಚ್ಚಂ ॥
ಕೆಲರಂ ದೆಸೆವಲಿಗೆಯ್ದಂ ।
ಕೆಲರಂ ಭುಜಬಲದಿನಱಿದು ಶಿಲೆಯೊಳ್ ಪೊಯ್ದಂ ॥೧೦॥

ಬಡಿಗೊಂಡು ಗೋಣಿಪಣ್ಣಂ ।
ಬಡಿವಂತಿರೆ ಪವನಸೂನು ಪೆಂಕುಳಿನಾಯಂ ॥
ಬಡಿವಂತಿರೆ ಪಾಟುಡುವಂ ।
ಬಡಿವಂತಿರೆ ಬಡಿದನನಿಬರಂ ಕೌರವರಂ ॥೧೧॥

ಕೆಲರಂ ಬೀಸಿಯುಮೊತ್ತಿಯುಂ ಪಿಡಿದುಮಾರ್ದಿಟ್ಟುಂ ಗದಾದಂಡದಿಂ ।
ಕೆಲರಂ ಗುರ್ದಿಯುಮುರ್ದಿಯುಂ ತಿರುಪಿಯುಂ ತೇದುಂ ಭುಜಾದಂಡದಿಂ ॥
ಕೆಲರಂ ಕುತ್ತಿಯುಮೆತ್ತಿಯುಂ ಪೊಣಱಿಯುಂ ಪೊಯ್ದುಂ ಧನುರ್ದಂಡದಿಂ ।
ಕಲಿ ಕಟ್ಟಾನೆ ಕಡಂಗಿ ಕೊಲ್ವ ತೆಱದಿಂ ಕೊಂದಂ ಮರುನ್ನಂದನಂ ॥೧೨॥

೮. ಮನುಷ್ಯರನ್ನು ಮನುಷ್ಯ ದೇಹಗಳಿಂದ, ಕುದುರೆಗಳನ್ನು ಕುದುರೆಗಳಿಂದ, ರಥಗಳನ್ನು ರಥಗಳಿಂದ ಕುಕ್ಕಿ, ಕುಟ್ಟಿ ಭೀಮಸೇನನು ವೈರಿಸೈನ್ಯವನ್ನು ನಾಶಮಾಡಿದನು.

೯. ಭೀಮನು ಕುರುಕುಲದ ಕೆಲವರನ್ನು ನುಣ್ಣಗೆ ನುಂಗಿಬಿಟ್ಟನು ; ಕೆಲವರನ್ನು ಹಿಡಿದು ಹಿಸುಕಿ ನುಂಗಿದನು ; ಕೆಲವರನ್ನು ಸರಸರನೆ ಸೀಳಿ ಒಗೆದನು ; ಇನ್ನೂ ಕೆಲವರನ್ನು ಯಮರಾಜನಿಗೆ ಬಡಿಸಿದನು.

೧೦. ಕೆಲವರನ್ನು ಸಣ್ಣ ಸಣ್ಣಗೆ ಕತ್ತರಿಸಿದನು ; ಕೆಲವರನ್ನು ಸಂದುಗಳೆಲ್ಲ ಮುರಿಯುವಂತೆ ಒತ್ತಿ ಹೊಡೆದನು ; ಕೆಲವರನ್ನು ದಿಗ್ಬಲಿ ಮಾಡಿದನು ; ಕೆಲವರನ್ನು ತನ್ನ ತೋಳುಗಳಿಂದ ಬಡಿದು ಕಲ್ಲಿಂದ ಕುಟ್ಟಿದನು.

೧೧. ಬಡಿಗೋಲಿನಿಂದ ಗೋಣಿಹಣ್ಣನ್ನು ಬಡಿದಂತೆ, ಹುಚ್ಚುನಾಯಿಯನ್ನು ಬಡಿವಂತೆ, ಹಾಳು ಉಡುವನ್ನು ಬಡಿದಂತೆ ಕೌರವರೆಲ್ಲರನ್ನೂ ಭೀಮನು ಬಡಿದನು.

೧೨. ಕೆಲವರನ್ನು ಬೀಸಿ, ಅದುಮಿ, ಹಿಡಿದು, ಗದೆಯಿಂದ ಕುಟ್ಟಿಯೂ, ಕೆಲವರನ್ನು ತೋಳುಗಳಿಂದ ಗುದ್ದಿಯೂ, ತಿಕ್ಕಿಯೂ, ತಿರುಹಿಯೂ, ತೇದೂ, ಕೆಲವರನ್ನು

ಪ್ರಕಟಾಟೋಪದೆ ಪೊಯ್ದು ಪೊಯ್ದು ಶಿಲೆಯೊಳ್ ವೃಕ್ಷಂಗಳೊಳ್ಮೋದಿ ಮೋ ।
ದಿ ಕರದ್ವೈತದೆ ಗುರ್ದಿ ಗುರ್ದಿ ಕಠಿನಾಂಗಂ ನುರ್ಗುನುರ್ಗಪ್ಪಿನಂ ॥
ಬಕನಂ ಬಾಹುಮದಾವಳಂಬಕನನುರ್ದು [ರ್ದು]ಗ್ರವಿದ್ಯುತ್ಕದಂ ॥
ಬಕನಂ ವೈರಿಗಜೇಂದ್ರನಂ ಬಸಕನಂ ಕೊಂದಂ ಮರುನ್ನಂದನಂ ॥೧೩॥

ದೆಸೆದೆಸೆಗೀಡಾಡಿದ ಕರಿ ।
ದೆಸೆಯಾನೆಗಳಬ್ಧಿಯೊಳಗೆ ನೀರಾನೆಗಳಾ ॥
ಗಸದೊಳಮವಭ್ರ ಗಜಮೆನೆ ।
ಪೊಸತಾಗಿರೆ ಭಿನ್ನಸೃಷ್ಟಿವಡೆದನೊ ಭೀಮಂ ॥೧೪॥

ಸುತಪಕ್ಷಪಾತದಿಂದಂ ।
ಕೃತಾಂತನುಱ್ ಬರ್ಚಿದಂತೆ ಕೊಂದಂ ಕುರುಭೂ ॥
ಪತಿಯ ಬಲಮೆಲ್ಲಮಂ ಧ ।
ರ್ಮತನೂಜಂ ಭರದಿನಿಕ್ಕಿದಂ ಭುಜಬಲದಿಂ ॥೧೫॥

ಪವನಸುತಂ ಗದೆಗೊಳೆ ಗಾಂ ।
ಡಿವಿ ಬಿಲ್ಗೊಳೆ ಕಯ್ದುಗೊಳ್ವ ಮಾರ್ಕೊಳ್ವದಟರ್ ॥
ಭುವನದೊಳಿಲ್ಲವರ್ಗಳ ಬಾ ।
ಹುವಿಕ್ರಮಂ ನಿನಗೆ ಪೊಸತೆ ಕೌರವರಾಜಾ ॥೧೬॥

ಬಿಲ್ಲಿನಿಂದ ಕುಕ್ಕಿಯೂ, ಎತ್ತಿಯೂ, ಬಡಿದೂ ಮದದಾನೆ ಆವೇಶದಿಂದ ಕೊಲ್ಲುವ ಹಾಗೆ ಭೀಮಸೇನನು ಕೊಂದನು.

೧೩. ಆವೇಶದಲ್ಲಿ ಕಲ್ಲಿಂದ ಹೊಡೆಹೊಡೆದು, ಮರಗಳಿಂದ ಬಡಿಬಡಿದು, ಎರಡೂ ಕೈಗಳಿಂದ ಗುದ್ದಿ ಗುದ್ದಿ, ಕರ್ಕಶವಾದ ಮೈಯೆಲ್ಲಾ ನುಗ್ಗುನುಗ್ಗಾಗುವಂತೆ ಭುಜಬಲಗರ್ವಿಯಾದ ಬಕಾಸುರನನ್ನು ಭೀಮಸೇನನು ಕೊಂದನು.

೧೪. ದಿಕ್ಕು ದಿಕ್ಕಿಗೆ ಬೀಸಾಡಿದ ಆನೆಗಳೆ ದಿಗ್ಗಜಗಳು, ಕಡಲಲ್ಲಿ ಬಿಸಾಕಿದ ಆನೆಗಳೆ ನೀರಾನೆಗಳು, ಆಕಾಶಕ್ಕೆ ಚಿಮ್ಮಿದುವೆ ಸ್ವರ್ಗದಾನೆಗಳು ಎಂಬಂತೆ ಭೀಮಸೇನನು ಒಂದು ಹೊಸ ಸೃಷ್ಟಿಯನ್ನೇ ಮಾಡಿದನು.

೧೫. ಮಗನ ಪಕ್ಷ ವಹಿಸಿ ಯಮರಾಜನೆ ಆವೇಶದಿಂದ ಬಂದು ಇರಿದಂತೆ ಧರ್ಮರಾಜನು ರಭಸದಿಂದ ಕೌರವರಾಜನ ಸೈನ್ಯವೆಲ್ಲವನ್ನೂ ತನ್ನ ತೋಳ್ಬಲದಿಂದ ಕೊಂದನು.

೧೬. ಗದೆ ಹಿಡಿದು ಭೀಮನು, ಗಾಂಡೀವ ಧನುವನ್ನು ಹಿಡಿದು ಅರ್ಜುನನೂ ಯುದ್ಧಸನ್ನದ್ಧರಾಗಿ ನಿಂತಾಗ ಅವರನ್ನು ಎದುರಿಸುವ ವೀರರು ಈ ಲೋಕದಲ್ಲಿಯೆ ಇಲ್ಲ. ಕೌರವರಾಜನೇ, ಅವರಿಬ್ಬರ ಭುಜಪರಾಕ್ರಮವು ನಿನಗೆ ಹೊಸದೆ ?

ಜವನ ಮುಳಿಸವನ ಮುಳಿಸೆನೆ ।
ಜವನೇ ಬರ್ಚಿದವೊಲಿಂತು ಕುಱಿದಱಿದಱಿದಂ ॥
ಜವನಂ ಮುಳಿಯಿಸಿ ಸುಭಟರ ।
ಜವನಂ ಮುಳಿಯಿಸಿ ಬರ್ದುಂಕುವನ್ನರುಮೊಳರೇ ॥೧೭॥

ಯಮರಾಜಂ ತಂದೆ ಭೋಜಪ್ರಭವೆ ತನಗೆ ತಾಯ್ ಮಯ್ದುನಂ ವಾಸುದೇವಂ ।
ಸಮರಕ್ರೀಡಾರ್ಥದಭ್ಯರ್ಥನೆಯಮಳನುಜರ್ ಸಂದ ಭೀಮಾರ್ಜುನರ್ ಕೋ ॥
ಪಮವಂಧ್ಯಂ ಚಾಪವಿದ್ಯಾಗುರು ಕಳಶನೆಂದಂದು ಸಾಮಾನ್ಯನಲ್ಲಂ ।
ಹಿಮಕೃದ್ವಂಶಾವತಾರಂ ಭರತಕುಲಶಿರಶ್ಶೇಖರಂ ಧರ್ಮಪುತ್ರಂ ॥೧೮॥

ದಾನಂ ಪ್ರಿಯವಾಕ್ಸಹಿತಂ ।
ಜ್ಞಾನಮಗರ್ವಂ ಕ್ಷಮಾನ್ವಿತಂ ಶೌರ್ಯಮೆನಿ ॥
ಪ್ಪೀ ನುಡಿಯನೆ ನುಡಿಯಿಸಿದುದು ।
ದಾನಂ ಜ್ಞಾನಂ ಕ್ಷಮಾಗುಣಂ ಧರ್ಮಜನಾ ॥೧೯॥

ಅಮಳ್ಗಳ್ ವಿನಯದ ವಿಕ್ರಮ ।
ದಮಳ್ಗಳವರ್ ಮುಳಿಯೆ ಗಂಡರಿಲ್ಲವರ ಪರಾ ॥
ಕ್ರಮಮಂ ನೀನಱಿದಿರ್ದುಂ ।
ಸಮರದೊಳಿಳಿಸುವುದೆ ಕುರುಕುಲಾಂಬರಭಾನೂ ॥೨೦॥

೧೭. ಭೀಮನ ಕೋಪವೆಂದರೆ ಯಮರಾಜನ ಕೋಪ. ಹಾಗಾಗಿ ಯಮನೇ ಹೊಕ್ಕು ಇರಿದಂತೆ ಎದುರಾಳಿಗಳನ್ನು ಆತನು ಚೂರುಚೂರಾಗಿ ಕತ್ತರಿಸಿ ಹಾಕಿದನು. ಯಮನನ್ನೂ, ಶೂರರಿಗೆ ಯಮನಾದ ಭೀಮನನ್ನೂ ಕೆರಳಿಸಿದವರು ಬದುಕಿ ಉಳಿಯುವುದೂ ಉಂಟೆ ?

೧೮. ತಂದೆ ಯಮರಾಜ, ತಾಯಿ ಭೋಜರಾಜನ ಮಗಳು, ಮೈದುನ ಕೃಷ್ಣ, ಯುದ್ಧವೊಂದು ಕ್ರೀಡೆಯಾಗಿ ಅದನ್ನೇ ಬೇಡುತ್ತಿರುವ ಭೀಮಾರ್ಜುನರು ತಮ್ಮಂದಿರು ; ಕೋಪವೋ ಎಂದೂ ನಿರರ್ಥಕವಲ್ಲದುದು ; ಧನುರ್ವಿದ್ಯೆಯನ್ನು ಕಲಿಸಿಕೊಟ್ಟವನು ದ್ರೋಣಾಚಾರ್ಯ ; ಹೀಗೆ ಧರ್ಮಪುತ್ರನು ಸಾಮಾನ್ಯನಲ್ಲ, ಸೋಮವಂಶದಲ್ಲಿ ಭರತ ಕುಲಕ್ಕೇ ಶಿರೋಮಣಿಯಾಗಿರುವನು.

೧೯. ದಾನವೆಂದರೆ ಸವಿಮಾತಿನಿಂದ ಕೂಡಿರಬೇಕು ; ಜ್ಞಾನವು ಗರ್ವ ರಹಿತವಾಗಿರಬೇಕು ; ಶೌರ್ಯವು ಕ್ಷಮಾಯುಕ್ತವಾಗಿರಬೇಕು. ಧರ್ಮರಾಜನ ದಾನ, ಜ್ಞಾನ, ಶೌರ್ಯಗಳು ಹೀಗಿದ್ದು ಹೊಗಳಿಸಿಕೊಂಡುವು.

೨೦. ಅವಳಿ ಸೋದರರಾದ ನಕುಲ ಸಹದೇವರು ವಿನಯ - ಪರಾಕ್ರಮಗಳ ಜೊತೆಯಂತಿರುವರು. ಅವರು ಕೆರಳಿದರೆ ಎದುರಿಸಿ ಉಳಿಯುವ ವೀರರಿಲ್ಲ. ರಣರಂಗದಲ್ಲಿ ಅವರ ಶೌರ್ಯವನ್ನು ನೀನು ತಿಳಿದವನಾಗಿದ್ದೂ ಹೀಗೆ ಹೀಯಾಳಿಸಿ ಮಾತಾಡಬೇಕೆ ?

ಅಂದು ಕುಶಸ್ಥಲಂ ಜತುಗೃಹಜ್ವಲನಕ್ಕೆ [ಜಯಂತಮಂತೆ] ಕಾ ।
ಳಿಂದಿ ವೃಕಸ್ಥಳಂ ವಿಷದ ಲಡ್ಡುಗೆಗಾದುದು ವಾರಣಾವತಂ ॥
ಸಂದ ಸಭಾಪ್ರತಾರಣಕೆ ಕಾರಣಮೆಂದಱಿಪಲ್ಕೆ ಬೇಡಿದರ್ ।
ಸಂಧಿಗೆಯಲ್ಕೆ ಬೇಡಿದರೆ ಪಾಂಡುತನೂಭವರಯ್ದು ಬಾಡಮಂ ॥೨೧॥

ಅತಿಲಜ್ಜಾನ್ವಿತನಾ ನದೀಜನಧಿಕಕ್ರೋಧಾವಹಂ ದ್ರೋಣನು ।
ದ್ಧತಕೌರವ್ಯಕೃತಾಟ್ಟಹಾಸಮಸುಹೃದ್ವೀರಾವತಾರಂ ಪೃಥಾ ॥
ಸುತರಾರೋಪಿತಚಾಪರುದ್ಧತರುಮಾ ಗಾಂಡೀವಿಯುಂ ಭೀಮನುಂ ।
ಪತಿಗಳ್ ನೋಟ್ಟಿನಮಾಯ್ತು ನಿನ್ನನುಜನಿಂ ಕೃಷ್ಣಾಂಬರಾಕರ್ಷಣಂ ॥೨೨॥

ಎಂದು ನುಡಿದ ಸಂಜಯನ ನುಡಿಗೆ ಫಣಿರಾಜಕೇತನಂ ಸಿಡಿಲ್ದು -

ಸ್ಥಿರಸತ್ಯವ್ರತಿಯೆಂದು ಧರ್ಮರುಚಿಯೆಂದಾ ಧರ್ಮಪುತ್ರಂ ದಯಾ ।
ಪರನೆಂದೆಲ್ಲರ ಪೇಟ್ದ ಮಾತು ಪುಸಿಯಾಯ್ತೀ ಕಾರ್ಮುಕಾಚಾರ್ಯನಂ ॥
ಗುರುವಂ ಬ್ರಾಹ್ಮಣನಂ ತೊದಳ್ನುಡಿದು ಕೊಂದಂದಾ ಮೃಷಾಪಾತಕಂ ॥
ಪರಮೆಂಬೀ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ ॥೨೩॥

ತನಗೆ ಹತೋಶ್ವತ್ಥಾಮೋ ।
ಯೆನಲಕ್ಕುಮೆ ಯಮಪುರಕ್ಕೆ ಗುರು ಪೋಪೆಡೆಯೊಳ್ ॥
ಘನಕುಂಜರ ಎಂದೆಂಗುಮೆ ।
ಜನರಂಜನೆಗಱಿಯಲಾದುದಿಲ್ಲಱಿಮಗನಂ ॥೨೪॥

೨೧. ಅಂದು ಕುಶಸ್ಥಾಲವೆಂಬ ಗ್ರಾಮವನ್ನೂ ಜಯಂತವೆಂಬ ಗ್ರಾಮವನ್ನೂ ಅರಗಿನ ಮನೆ ಸುಟ್ಟುದದಕ್ಕಾಗಿಯೂ, ಕಾಳಿಂದಿ ವಕ್ಷಸ್ಥಳ ಗ್ರಾಮಗಳಲ್ಲಿ ವಿಷದ ಲಡ್ಡುಗೆ ಉಣಿಸಿದುದಕ್ಕಾಗಿಯೂ, ವಾರಣಾವತವನ್ನು ಸಭೆಯ ನೆವದಿಂದ ಮಾಡಿದ ಮೋಸಕ್ಕಾಗಿಯೂ ಗುರುತುಗಳೆಂದು ನಿನಗೆ ತಿಳಿಸುವ ಉದ್ದೇಶದಿಂದಲೆ ಪಾಂಡವರು ಐದು ಗ್ರಾಮಗಳನ್ನು ಬೇಡಿದರಲ್ಲದೆ ಸಂಧಿ ಮಾಡಿಕೊಳ್ಳಲು ಬೇಡಿದರೆ ?

೨೨. ಭೀಷ್ಮಾಚಾರ್ಯನು ಅತ್ಯಂತವಾಗಿ ನಾಚಿಕೊಂಡು, ದ್ರೋಣಾಚಾರ್ಯನು ಅತಿಶಯವಾಗಿ ಕ್ರೋಧಗೊಂಡು, ಉದ್ಧಟರಾದ ಕೌರವರು ಅಟ್ಟಹಾಸಮಾಡುತ್ತಿರಲಾಗಿ, ಪತಿಗಳಾದ ಅರ್ಜುನನೂ ಭೀಮನೂ ನೋಡುತ್ತಿರಲಾಗಿ ಎಲ್ಲರ ಕಣ್ಣೆದುರಲ್ಲಿಯೇ ನಿನ್ನ ತಮ್ಮನು ದ್ರೌಪದಿಯ ಸೀರೆಯನ್ನು ಸೆಳೆದನು.

ವ॥ ಹೀಗೆ ನುಡಿದ ಸಂಜಯನ ಮಾತಿಗೆ ದುರ್ಯೋಧನನು ಸಿಡಿದೆದ್ದು -

೨೩. ಅತ್ಯಂತ ನಿಷ್ಠನಾದ ಸತ್ಯವಂತನೆಂದೂ, ಧರ್ಮಪ್ರೇಮಿಯೆಂದೂ, ಕರುಣಾಮಯನೆಂದೂ ಎಲ್ಲರೂ ಹೇಳುತ್ತಿದ್ದಾರಲ್ಲವೆ ? ಗುರುವೂ ಬ್ರಾಹ್ಮಣನೂ ಆದ ದ್ರೋಣಾಚಾರ್ಯನನ್ನೂ ಸುಳ್ಳು ಹೇಳಿ ಕೊಂದುದರಿಂದ ಆ ಎಲ್ಲರ ಮಾತೂ ಸುಳ್ಳಾಯಿತು. ಅಸತ್ಯವಚನವೆಂಬುದು ಪಾತಕಗಳಲ್ಲಿ ಅತ್ಯಧಿಕವಾದುದೆಂದು ವಾಕ್ಯವುಂಟು. ಅದರಿಂದ ಕುಂತಿಯ ಈ ಅಕ್ಕರೆಯ ಮಗನು ಪಾಪಕ್ಕೆ ಈಡಾಗದಿರುವನೆ ?

೨೪. "ಅಶ್ವತ್ಥಾಮನ ವಧೆಯಾಯಿತು" ಎಂದು ನುಡಿದು, ಗುರು ದ್ರೋಣಾಚಾರ್ಯನು (ಮಗನ ಜೀವವನ್ನು ಹುಡುಕಿಕೊಂಡು) ಯಮಪುರಕ್ಕೆ ಹೋಗುವಾಗ ಜನರಂಜನೆಗೆ ಮಾತ್ರ "ವಧೆಯಾದುದು ಮನುಷ್ಯನಲ್ಲ, ಆ ಹೆಸರಿನ ಆನೆ" ಎಂದು

ಈ. ದೊರೆಯಱಿಮಗನುಂ ಮೃಷ ।
ವಾದಂ ನೋಡೆಂದು ಧರ್ಮನಂ ಮೂದಲಿಸಲ್ ॥
ಪೋದಂ ಪುತ್ರನನಱಿಸಲ್ ।
ಪೋದನೆ ಯಮಪುರಕೆ ಮುಕ್ತಬಾಣಂ ದ್ರೋಣಂ ॥೨೫॥

ಕಳಶಜನನಿಂತು ಕೊಲಿಸಿದ ।
ಖಳನೆ ಗಡಂ ಧರ್ಮನಂದನಂ ಕ್ರೂರದಿನಂ ॥
ಗಳ ಪೆಸರಂ ಮಱಿಯಿಸಿ ಮಂ ।
ಗಳವಾರಂ ವಡ್ಡವಾರಮೆಂಬಂತೆ ವಲಂ ॥೨೬॥

ವನಿತೆಯ ಕೇಶಮಂ ಸಭೆಯೊಳೆನ್ನನುಜಂ ತೆಗೆವಲ್ಲಿ ಗಂಡನಾ ॥
ಗನೆ ಭಗದತ್ತನಾನೆ ಬರಿಯೆಲ್ವುಡಿವನ್ನೆಗಮೊತ್ತೆ ಗಂಡನಾ ॥
ಗನೆ ಕೊಲಲೊಲ್ಲದಂಗಪತಿ ಬಿಲ್ಲೊಳೆ ಕೊಂಡೆಟಿವಲ್ಲಿ ಗಂಡನಾ ।
ಗನೆ ಕುರುಬಾಲಸಂಹರಣಮಾತ್ರದೆ ಮಾರುತಿ ಗಂಡನಾದನೇ ॥೨೭॥

ಒಡವುಟ್ಟಿದರಂ ಕೊಂದವ ।
ರಡಗಂ ತಿಂದವರ ನೆತ್ತರಂ ಬೆಲಗಸೆಯೊಳ್ ॥
ಕುಡಿವೀ ನಿಸ್ತ್ರಿಂಶತೆಯಂ ।
ಹಿಡಿಂಬಿಯಂ ಪೊರ್ದಿ ಕಲ್ತನಾಗನೆ ಭೀಮಂ ॥೨೮॥

ಇವನು ನುಡಿದುದು ಸರಿಯೆ ? ಧರ್ಮಪುತ್ರನನ್ನು (ನೀನು) ಸರಿಯಾಗಿ ಅರಿತುಕೊಂಡಿಲ್ಲ.

೨೫. ಮಹಾತ್ಮನೆಂದು ಹೆಸರಾದ ಧರ್ಮಪುತ್ರನು ಕೂಡ ಸುಳ್ಳುಗಾರನಾದನು ನೋಡು ಎಂದು ಯಮಧರ್ಮನಿಗೆ ತಿವಿದು ಹೇಳಲು ದ್ರೋಣನು ಯಮಪುರಕ್ಕೆ ಹೋದನಲ್ಲದೆ ಮಗನನ್ನು ಹುಡುಕುವುದಕ್ಕೆ ಹೋದನೆ ?

೨೬. ದ್ರೋಣಾಚಾರ್ಯನನ್ನು ಕೊಲಿಸಿದ ನೀಚನು 'ಧರ್ಮಪುತ್ರ'ನಂತೆ ! ಕ್ರೂರ ದಿನಗಳ ಹೆಸರನ್ನು ಬದಲಿಸಿ (ಅಮಂಗಳವಾದ ಕುಜವಾರವನ್ನು) ಮಂಗಳವಾರವೆಂದೂ (ಕ್ರೂರ ದಿನವಾದ ಶನಿವಾರವನ್ನು) ವಡ್ಡವಾರವೆಂದೂ ಹೇಳುವಂತೆ ಇವನನ್ನೂ ಧರ್ಮಪುತ್ರನೆಂದು ಹೇಳಬೇಕಷ್ಟೆ.

೨೭. (ಭೀಮನು ಮಹಾ ಪರಾಕ್ರಮಿಯಂತೆ ! ಹಾಗಾದರೆ) ತನ್ನ ಹೆಂಡತಿಯ ತಲೆಗೂದಲನ್ನು ತನ್ನ ತಮ್ಮನು ಹಿಡಿದೆಳೆವಾಗ ಇವನು ಶೂರನಾಗಿರಲಿಲ್ಲ ; ಪಕ್ಕೆಯ ಮೂಳೆ ಮುರಿಯುವಂತೆ ಭಗದತ್ತನ ಆನೆ ಬಂದು ತನ್ನನ್ನು ಒತ್ತುತ್ತಿರುವಾಗ ಇವನು ಶೂರನಾಗಿರಲಿಲ್ಲ ; ಇವನನ್ನು ಕೊಲ್ಲಲು ಬಯಸದೆ ಕರ್ಣನು ಬಿಲ್ಲಿನ ಕೊನೆಯಿಂದ ಹಿಡಿದೆಳೆವಾಗ ಇವನು ಶೂರನಾಗಿರಲಿಲ್ಲ. ಕೌರವ ಬಾಲಕರನ್ನು ಕೊಂದ ಮಾತ್ರಕ್ಕೆ ಶೂರನಾದನೆ ?

೨೮. ಒಡಹುಟ್ಟಿದವರನ್ನು ಕೊಂದು, ಅವರ ಮಾಂಸವನ್ನು ತಿಂದು, ಅವರ ನೆತ್ತರನ್ನು ಬೊಗಸೆ ಬೊಗಸೆಯಾಗಿ ಎತ್ತಿ ಕುಡಿಯುವ ಈ ಕ್ರೂರತೆಯನ್ನು ಭೀಮನು ಹಿಡಿಂಬಿಯ ಸಹವಾಸದಿಂದ ಕಲಿತನವಲ್ಲವೆ ?

ಎನಗಾ ಜೂದಿನೊಳಗ್ರಜಾನುಜಸಮೇತಂ ಗಂಡುದೊಱ್ತಾಗಿ ಕಾ ।
ನನದೊಳ್ ವಲ್ಕಲಧಾರಿಯಾಗಿ ಹರನೊಳ್ ದಿವ್ಯಾಸ್ತ್ರಮಂ ಬೇಡೆ ಬೆ ॥
ಳ್ತನದಿಂ ತಾಪಸನಾಗಿ ಪೇಡಿಯೆನೆ ಮತ್ಸ್ಯಾವಾಸದೊಳ್ ವಾಸುದೇ ।
ವನ ನಂಟಂ ನಟನಾಗಿ ಬಾರದ ಭವಂ ಬಂದಂ ಪೃಥಾನಂದನಂ ॥೨೯॥

ದೊರೆ ಯಮಪುತ್ರನಿರ್ದಿರವು ವಾಯುಜನಿರ್ದಿರವಗ್ನಿಪುತ್ರಿಯಿ ।
ರ್ದಿರವಮಳರ್ಕಳಿರ್ದಿರವು ಮತ್ಸ್ಯನಿವಾಸದೊಳೆಲ್ಲಮಂತೆ ಮೆ ।
ಯ್ಗರೆದಿರೆ ಗಂಡುಗೆಟ್ಟು ಬಳೆದೊಟ್ಟು ಬೃಹನ್ನಳೆಯಾಗಿ ಪಾರ್ಥನಿ ।
ರ್ದಿರವುಮೆನಲ್ಕೆ ಪಾರ್ಥನದು ರಂಭೆಯ ಶಾಪಮೊ ತನ್ನ ಪಾಪಮೋ ॥೩೦॥

ಗುರುವಂ ದ್ವಿಜನ್ಮನಂ ಸುತ ।
ವಿರಹಾಗ್ನಿಗ್ರಸ್ತನಂ ನಿರಾಯುಧನಂ ಸಂ ॥
ಹರಿಸಿದ ಶಕ್ರಸುತಂಗಾ ।
ಗುರುವಧಮೆ ಯಶೋವಧಕ್ಕೆ ಕಾರಣಮಲ್ತೇ ॥೩೧॥

ಎನಗಿದಯುಕ್ತಮೆಂದಿರದೆ ಪೆರ್ಬುಸಿಯೊಳ್ ಪುದಿದಿರ್ದ ಧರ್ಮನಂ ।
ದನನನೆ ಧರ್ಮನಂದನನೆನಲ್ ದೊರೆ ದಿಗ್ಗಜಮೊತ್ತೆ ಬಿರ್ದು ಬಿ ॥
ರ್ದಿನಿಸಗಿದಿರ್ದ ಭೀಮನನೆ ಭೀಮನೆನಲ್ ದೊರೆ ಪೇಡಿಯಾಗಿ ಮ ।
ತ್ಸ್ಯನ ಮನೆವೊಕ್ಕ ಪಾರ್ಥನನೆ ಪಾರ್ಥನೆನಲ್ ದೊರೆ ಗಂಡರೆಂಬರೇ ॥೩೨॥

೨೯. ಅಂದಿನ ಜೂಜಿನಲ್ಲಿ ಅಣ್ಣ ತಮ್ಮಂದಿರು ಸಹಿತವಾಗಿ ನನಗೆ ಗಂಡುದೊತ್ತಾಗಿ, ಕಾಡಿನಲ್ಲಿ ನಾರುಬಟ್ಟೆ ಉಟ್ಟು ತಿರುಗಾಡಿ, ಶಿವನಲ್ಲಿ ದಿವ್ಯಾಸ್ತ್ರವನ್ನು ಪಡೆಯಲೆಂದು ತಾಪಸವೇಷವನ್ನು ಹೊತ್ತು, ವಿರಾಟನಗರದಲ್ಲಿ ಹೇಡಿಯಾಗಿ ನಿಂತು, ಕೃಷ್ಣನ ಬೀಗನಾದ ಅರ್ಜುನನು ಪಡಬಾರದ ಅವಸ್ಥೆಯನ್ನೆಲ್ಲ ಅನುಭವಿಸಿದನು.

೩೦. ದೊರೆಯಾಗಿದ್ದ ಧರ್ಮರಾಜ, ಭೀಮಸೇನ, ದ್ರೌಪದಿ, ನಕುಲ ಸಹದೇವರು - ಎಲ್ಲರೂ ತಮ್ಮ ನಿಜಸ್ವರೂಪವನ್ನು ಮರೆಯಿಸಿಕೊಂಡು ಇರುವಾಗ, ನಪುಂಸಕನಾಗಿ, ಬಳೆ ತೊಟ್ಟು ಬೃಹನ್ನಳೆಯಾಗಿ ಅರ್ಜುನನು (ಒಂದು ವರ್ಷ) ಇದ್ದುದು ರಂಭೆಯ ಶಾಪದಿಂದಲೊ, ತನ್ನದೇ ಆದ ಪಾಪದಿಂದಲೊ ?

೩೧. ಗುರುವೂ, ಬ್ರಾಹ್ಮಣನೂ, ಪುತ್ರಮರಣಶೋಕದಿಂದ ಪರಿತಪಿಸುತ್ತಿರುವವನೂ, ನಿರಾಯುಧನೂ ಆದ ದ್ರೋಣಾಚಾರ್ಯನನ್ನು ಕೊಂದ ಅರ್ಜುನನಿಗೆ ಯಶೋನಾಶವೂ ಆಯಿತು. ಗುರುವಧೆಯೆ ಅವನ ಯಶೋವಿನಾಶಕ್ಕೆ ಕಾರಣವಲ್ಲವೆ ?

೩೨. ತನಗೆ ಇದು ಅಯೋಗ್ಯವೆಂದುಕೊಳ್ಳದೆ ಹಸಿಸುಳ್ಳಿನಿಂದ ತುಂಬಿದ ಧರ್ಮಪುತ್ರನಿಗೆ ಧರ್ಮಪುತ್ರನೆಂಬುದು ಸರಿ. ಸುಪ್ರತೀಕವೆಂಬ ದಿಗ್ಗಜವು ಮೇಲೇರಿ ಬಂದು ಒತ್ತುತ್ತಿರುವಾಗ ಅಳುಕಿ ಹಿಂಜರಿದಿದ್ದ ಭೀಮನಿಗೆ ಭೀಮನೆಂಬುದೆ ಸರಿ. ಷಂಡನಾಗಿ ವಿರಾಟನ ಮನೆಯನ್ನು ಹೊಕ್ಕ ಅರ್ಜುನನನಿಗೆ ಅರ್ಜುನನೆಂಬುದೇ ಸರಿ. ಇವರನ್ನು ಯಾರಾದರೂ ಶೂರರೆಂದಾರೆಯೆ ?

ಗುರುವಂ ಪ್ರೋಜ್ಝಿತಚಾಪನಂ ಪುಸಿದು ಕೊಂದಾ ಬೀರಮಂ ಭೀಷ್ಮರಂ ।
ಶರಶಯ್ಯಾಗತರಂ ಕರುತ್ತು ಗುಜಿಯೆಚ್ಚಾ ಪೊಚ್ಚಱಂ ಕರ್ಣನಂ ॥
ವಿರಥಜ್ಯಾಯುಧನೆನ್ನದೆಚ್ಚು ತಲೆಗೊಂಡಾ ಶೌರ್ಯಮಂ ಪಾಂಡುಪು ।
ತ್ರರೆ ಬಲ್ಲರ್ ಮೆಱೆಯಲ್ಕೆ ಸಾಹಸಧನಂ ದುರ್ಯೋಧನಂ ಬಲ್ಲನೇ ॥೩೩॥

ಸೋಕಮಿರ್ಕಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪು ।
ತ್ರಕನುಂ ಜರ್ಜರಹಸ್ತನಿಂದ್ರತನಯಂ ದಸ್ರಾತ್ಮಜರ್ ದಂಡಮು ॥
ಷ್ಟಿಕರರ್ ಶಸ್ತ್ರವಿಡಂಬಮೇವುದವರ್ಗಂ ಪಾಂಚಾಲಿಯುಂ ಗಂಧದಾ ।
ಯಕಿಯಾಗಿರ್ಪಿನಮಂದು ಮತ್ಸ್ಯಗೃಹದಿಂದೀ ನಿಗ್ರಹಂ ಪೊಲ್ಲದೇ ॥೩೪॥

ಅಧಿಕಾರಿಗಳೆನೆ ಸೈರಿಪೆ ।
ವಧಿಕಾರಿಗಳಾಗಿ ಬಾಳ್ಗೆ ಬಡವುಗಳವರ್ಗಾ ।
ಯುಧಭಾರಮೇಕೆ [ಬಗೆಯ
ಲ್ಕೆ] ಧರ್ಮದಿಂ ಕ್ಷತ್ರಧರ್ಮಮವರ್ಗೆ ವಿರುದ್ಧಂ ॥೩೫॥

ಸಭೆಯೊಳ್ ತಮ್ಮಯ ಪಕ್ಕದೆನ್ನನುಜನಾ ಪಾಂಚಾಲಿಯುಂ ಪಂಚವ ।
ಲ್ಲಭೆಯಂ ಮೋದೆಯುಮಲ್ಲಿ ಮಿಳ್ಮಿಳನೆ ನೋಡುತ್ತಿರ್ದ ಬಲ್ಲಾಳ್ಗಳಿ ॥
ಲ್ಲಿ ಭರಂಗೆಯ್ದಪರೀ ಪರಾಕ್ರಮಮುಮೀ ಪೆರ್ಮಾತುಮೀ ಗಂಡುಮೀ ।
ಸುಭಟಾಲಾಪಮುಮೆಲ್ಲಮಾ ನೃಪತಿಗಳ್ಗೇನೆಂಬೆನೆಲ್ಲಿರ್ದುದೋ ॥೩೬॥

೩೩. ಕೈಯಲ್ಲಿಯ ಬಿಲ್ಲನ್ನು ಬಿಟ್ಟ (ನಿರಾಯುಧನಾದ) ಗುರುವನ್ನು ಸುಳ್ಳು ಹೇಳಿ ಕೊಂದ ಶೌರ್ಯವನ್ನೂ, ಬಾಣಗಳ ಹಾಸಿನ ಮೇಲೆ ಒರಗಿದ ಭೀಷ್ಮರನ್ನು ಕೋಪದಿಂದ ಗುರಿಯಿಟ್ಟು ಹೊಡೆದ ಕೌಶಲವನ್ನೂ,ರಥವಿಲ್ಲದೆ ಬಿಲ್ಲಿಲ್ಲದೆ ನಿಂತವನೆಂದು ಬಗೆಯದೆ ಕರ್ಣನ ತಲೆ ಕತ್ತರಿಸಿದ ಶೌರ್ಯವನ್ನೂ ಪಾಂಡವರೇ ಬಲ್ಲರಲ್ಲದೆ ಇಂತಹ ಪ್ರದರ್ಶನವನ್ನು ಸಾಹಸಿಯಾದ ದುರ್ಯೋಧನನು ಬಲ್ಲನೆ ?

೩೪. ದರ್ಭೆ ಹಿಡಿದ (ಬ್ರಾಹ್ಮಣ ವೇಷದಾರಿಯಾದ) ಧರ್ಮರಾಜನೂ, ಹುಟ್ಟು ಹಿಡಿದು (ಅಡುಗೆಭಟ್ಟನಾದ) ಭೀಮನೂ, ಕೈಗೆಟ್ಟ (ಬೃಹನ್ನಳೆಯಾದ) ಅರ್ಜುನನೂ, ಕೋಲು ಹಿಡಿದ (ದನಕಾಯುವ, ಕುದುರೆ ಕಾಯುವ) ನಕುಲ ಸಹದೇವರೂ ಹಾಗೆಯೇ ತಣ್ಣಗಿರಬಾರದೆ ? ಶಸ್ತ್ರಾಸ್ತ್ರಗಳನ್ನು ಎತ್ತಿಕೊಂಡು ಬರುವ ಆಡಂಬರವಾದರೂ ಏಕೆ ಅವರಿಗೆ ? ದ್ರೌಪದಿಯೂ ಗಂಧ ಅರೆಯುವ ದಾಸಿಯಾಗಿರಲಿಲ್ಲವೆ ? ವಿರಾಟರಾಜನ ಅರಮನೆಯಲ್ಲಿ ಹೀಗೆ ಇವರೆಲ್ಲರಿಗೆ ಉಂಟಾಗಿದ್ದ ಸ್ಥಿತಿಯೇನು ಕೇಡೆ ?

೩೫. (ರಾಜ್ಯಕ್ಕೆ) ಇವರು ಅಧಿಕಾರಿಗಳೆಂದರೆ ನಾವು ಸಹಿಸೆವು. ಈ ಬಡ ಪ್ರಾಣಿಗಳು (ವಿರಾಟನ ಅರಮನೆಯಲ್ಲಿದ್ದ ಹೀನ ವೃತ್ತಿಗಳಿಗೇ) ಅಧಿಕಾರಿಗಳಾಗಿ ಬದುಕಲಿ. ಪಾಪ ! ಅವರಿಗೆ ಆಯುಧಗಳ ಭಾರವೇಕೆ ? ನ್ಯಾಯವಾಗಿ ಅವರಿಗೆ ಕ್ಷತ್ರಿಯವೃತ್ತಿ ನಿಷಿದ್ಧವಾದುದು.

೩೬. ತಮ್ಮೈವರಿಗೂ ಹೆಂಡತಿಯಾದ ದ್ರೌಪದಿಯನ್ನು ತುಂಬಿದ ಸಭೆಯಲ್ಲಿ, ತಮ್ಮ ಎದುರಿಗೇ ನನ್ನ ತಮ್ಮನು ಹಿಂಸಿಸಿದಾಗ ಪಿಳಿಪಿಳಿ ನೋಡುತ್ತ ಕುಳಿತ ಮಹಾವೀರರು

ಯಮವಾಯುತ್ರಿದಶಾಶ್ವಿನೀತನಯರುಂ ತಾವಾದರೀಯಯ್ವರುಂ ।
ಹಿಮಕೃದ್ವಂಶಕಳಂಕರಂತವರ್ಗಮಾ ಪಾಂಚಾಲಭೂಪಾಲಪು ॥
ತ್ರಿ ಮನೋವಲ್ಲಭೆಯಾದಳೆಂದೊಡೆ ಗಡಂ ಕೇಳಲ್ಕದೇಂ ಕ್ಷತ್ರಧ ।
ರ್ಮಮೊ ಭೂಲೋಕಕೆ ಪೇಟಿಮೀ ದೊರೆಯ ಚಾರಿತ್ರಂ ಪೃಥಾಪುತ್ರರಾ ॥೩೭॥

ಪಸೆಯೊಳ್ ಪಸುರ್ವಂದರೊಳ ।
ಗ್ನಿಸಾಕ್ಷಿಯೊಳ್ ಕೊಂಡ ಪಾಂಡುಪತಿಯಿರೆ ದೋಷಾ ॥
ವಸಥರ್ ಪಾದರದಿಂ ಜನಿ ।
ಯಿಸಿದರ್ ಪಾಂಡವರೊಳಲ್ಲದೆಮ್ಮೊಳಮುಂಟೇ ॥೩೮॥

ಎಂದು ಧೃತರಾಷ್ಟ್ರನಂದನಂ ಧರ್ಮನಂದನನುಮಂ ವಾಯುನಂದನನುಮಂ ಸಂಕ್ರಂದನನಂದನನುಮನಶ್ವಿನೀನಂದನರುಮಂ ಸಂಕ್ರಂದನನಂದನನುಮನಶ್ವಿನೀನಂದನರುಮಂ ನಿರಾಕರಣಂಗೆಯ್ದನಿತಜಿೞೊಳಂ ಮಾಣದೆ –

ಬಿಡದಾರಾಧಿಸೆ ಮುನ್ನಮೆ ।
ಕುಡಲಾರದೆ ಬಟಿಕೆ ಗಂಟಲಂ ಮೆಟ್ಟದೊಡಿ ॥
ಟ್ಟೆಡೆಯೊಳ್ ಕೊಟ್ಟಂ ಗೆಲ್ಲಂ ।
ಗುಡುವಂತೆ ನರಂಗೆ ಪಾಶುಪತಮನೆ ರುದ್ರಂ ॥೩೯॥

ಈಗ ಆರ್ಭಟಿಸುತ್ತ ಇದ್ದಾರೆ. ಈ ಶೌರ್ಯ, ಈ ದೊಡ್ಡ ದೊಡ್ಡ ಮಾತು, ಈ ಗಂಡಸುತನ, ಈ ಶೂರಾಲಾಪ ಎಲ್ಲವೂ ಆ ರಾಜರಿಗೆ ಎಲ್ಲಿಂದ ಬಂದಿತು ?

೩೭. ಯಮ, ವಾಯು, ಇಂದ್ರ ಹಾಗೂ ಅಶ್ವಿನೀಕುಮಾರರಿಂದ ಈ ಐವರೂ ಜನ್ಮ ತಾಳಿ (ನಮ್ಮ) ಸೋಮವಂಶಕ್ಕೆ ಕಳಂಕವಾದರು. ಅಂತಹ ಅವರಿಗೆ ಪಾಂಚಾಲ ರಾಜನ ಮಗಳು ಹೆಂಡತಿಯಾದಳು. ಕುಂತಿಯ ಮಕ್ಕಳ ಚಾರಿತ್ರ ಈ ಪರಿಯದು. ಭೂಲೋಕದಲ್ಲಿ ಇಂತಹುದನ್ನು ಕೇಳಿದ್ದುಂಟೆ ? ಇದು ಕ್ಷತ್ರಿಯಧರ್ಮಕ್ಕೆ ಅನುಗುಣ ವಾದುದೆ ? ಹೇಳಿ.

೩೮. ವಿಧಿವತ್ತಾಗಿ ಮದುವೆ ಚಪ್ಪರದಲ್ಲಿ ಹಸೆಮಣೆಯ ಮೇಲೆ ಅಗ್ನಿ ಸಾಕ್ಷಿಕವಾಗಿ ಮಾಡಿಕೊಂಡ ಗಂಡ ಪಾಂಡು ಜೀವಂತವಾಗಿ ಇರುವಾಗಲೆ (ಕುಂತಿಗೆ) ಈ ಪಾಂಡವರೆಂಬವರು ಹಾದರದಿಂದ ಹುಟ್ಟಿದವರಲ್ಲದೆ (ಎಂದಾದರೂ) ನಮ್ಮ ವಂಶದವರಾದಾರೆಯೆ ?

ವ॥ ಹೀಗೆ ಧೃತರಾಷ್ಟ್ರನ ಮಗನು (ದುರ್ಯೋಧನನು) ಧರ್ಮ, ಭೀಮ, ಅರ್ಜುನ, ನಕುಲ ಸಹದೇವರನ್ನು (ವಂಶವಿಹೀನರೆಂದು) ನಿರಾಕರಿಸಿ, ಅಷ್ಟಕ್ಕೇ ನಿಲ್ಲದೆ-

೩೯. (ತಪಸ್ಸಿನಿಂದ) ಮೆಚ್ಚಿಸುವುದಕ್ಕೆ ಪ್ರಯತ್ನ ಮಾಡಿದಾಗ ಕೊಡದೆ, ತನ್ನ ಗಂಟಲನ್ನು ಮೆಟ್ಟಿದಾಗ ಸೋಲೊಪ್ಪಿಸುವಂತೆ ರುದ್ರನು ಅರ್ಜುನನಿಗೆ ಪಾಶುಪತವನ್ನು ಕೊಟ್ಟನಂತೆ !

ತನಯನೆನಗೆಂದು ಮನ್ನಿಸಿ ।
ತನಗುರುಗಜ್ಜಕ್ಕೆ ಪಾಕಶಾಸನನರ್ಧಾ ॥
ಸನಮೇಱಿಸಿ ನೀರೇಱಿಸಿ ।
ಮನುಜಂಗಂ ಮಾನ್ಯಪದವಿಯಂ ಮಾಡಿದನೇ ॥೪೦॥

ಪವನಂಗೆ ಪುಟ್ಟಿದಂ ರಾ ।
ಘವನಣುಗಾಳ್ ತ್ರಿಣಯನಾಂಶಮೆನಿಪಣುವಂ ಪಾಂ ॥
ಡವಕೇತುದಂಡದೊಳ್ ನೆಲ ।
ಸುವುದಾವಗ್ಗಳಿಕೆ ಕಪಿಗೆ ಚಪಲತೆ ಸಹಜಂ ॥೪೧॥

ಅನುಜೆಯನಿತ್ತು ನರಂಗಾ ।
ತನ ತನಯಂಗಿತ್ತು ತನ್ನ ಮಗಳಂ ತಾನಾ ॥
ತನ ರಥಮನೆಸಗಿ ಧರ್ಮಜ ।
ನನುಜನ ನೆವದಿಂದಮರುಸುಗೆಯ್ವಂ ಕೃಷ್ಣಂ ॥೪೨॥

ಪುರುಷರ್ ಮೂವರೊಳೊರ್ವನೆಂಬರಸುರಪ್ರಧ್ವಂಸಿಯೆಂಬರ್ ಜಗ ।
ದ್ಗುರುವೆಂಬರ್ ಪೆಱರ್ಗೇಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂ ॥
ಕರನಾದಂ ಕರವೇಟಿಯಾದನದಱಿಂ ಸೂತಂ ಭಟಂ ಪೇಟಿಮೆಂ ।
ಬರ ಮಾತೊಪ್ಪುಗುಮಾದಿದೇವನೆನಿಸಲ್ ಕೃಷ್ಣಂಗದೆಂತೊಪ್ಪುಗುಂ ॥೪೩॥

೪೦. ತನಗೆ ಇವನು ಮಗನೆಂದು ಗೌರವಿಸಿ, ತನ್ನ ಕಾರ್ಯಸಾಧನೆಗಾಗಿ ಇಂದ್ರನು ಅರ್ಧಾಸನವನ್ನಿತ್ತು ಸಂತೋಷಪಡಿಸಿ ಮನುಷ್ಯಮಾತ್ರನಾದ ಅರ್ಜುನನಿಗೆ ಗೌರವದ ಪದವಿಯನ್ನು ನೀಡಿದನೆ ?

೪೧. ವಾಯುದೇವನ ಮಗನಾಗಿ ಹುಟ್ಟಿ, ರಾಮಚಂದ್ರನಿಗೆ ನೆಚ್ಚಿನ ಬಂಟನಾಗಿ, ರುದ್ರಾಂಶನೆನಿಸಿದ ಹನುಮಂತನು ಅರ್ಜುನನ ಧ್ವಜದಂಡದಲ್ಲಿ ಬಂದು ನೆಲಸಿದನಂತೆ. ಏನು ದೊಡ್ಡ ವಿಷಯ ? ಕೋತಿಗೆ ಚಾಪಲ್ಯ ಸ್ವಭಾವವೆ ತಾನೆ !

೪೨. (ಈ ಕೃಷ್ಣನೆಂತಹವನು !) ಅರ್ಜುನನಿಗೆ ತನ್ನ ತಂಗಿಯನ್ನು ಕೊಟ್ಟು, ಅವನ ಮಗನಿಗೆ ತನ್ನ (ಅಣ್ಣನ) ಮಗಳನ್ನು ಕೊಟ್ಟು, ತಾನೆ ಅವನಿಗೆ ಸಾರಥಿಯಾಗಿದ್ದುಕೊಂಡು ಧರ್ಮರಾಜನ ತಮ್ಮನ ನೆವದಿಂದ ತಾನೇ ರಾಜ್ಯಭಾರ ಮಾಡುತ್ತಾನೆ.

೪೩. ಕೃಷ್ಣನು ತ್ರಿಮೂರ್ತಿಗಳಲ್ಲಿ ಒಬ್ಬನಂತೆ ! ದೈತ್ಯಧ್ವಂಸಿಯಂತೆ ! ಜಗತ್ತಿಗೇ ಹಿರಿಯನಂತೆ ! ಹಾಗಿದ್ದ ಪಕ್ಷದಲ್ಲಿ ಇವನೇಕೆ ಹೆರವರ ಸಾರಥಿಯಾಗಿದ್ದಾನೆ ? ಅರ್ಜುನನಿಗೆ ಸೇವಕನಾಗಿರುವುದೇಕೆ ? ಮಹಾ ಹೇಡಿಯಾದವನಿವನು. ಆದುದರಿಂದ ಇವನಿಗೆ ಸಾರಥಿ, ಭಟ, ಹೇಡಿ ಎಂಬ ಮಾತೇ ಒಪ್ಪುವುದಲ್ಲದೆ ಆದಿದೇವನೆಂಬ ಹೆಸರು ಅದು ಹೇಗೆ ಒಪ್ಪೀತು ?

ಅನಿಮೇಷಾದ್ಯವತಾರಂ ।
ತನಗಾಗೆ ದಶವತಾರಮನಿತಱೊಳಿರದ ॥
ರ್ಜುನನ ರಥಮೆಸಗಿ ಪನ್ನೊಂ ।
ದನೆಯದು ಸೂತಾವತಾರಮುಂ ಹರಿಗಾಯ್ತೇ ॥೪೪॥

ಎಂದು ದುರ್ಯೋಧನಂ ಹರನುಮಂ ಪುರಂದರನುಮಂ ಕಪಿರಾಜನುಮಂ ಕಂಜೋದರನುಮಂ ನಿರಾಕರಣಂಗೆಯ್ದನಿತಱೊಳಂ ಮಾಣದೆ ಸಮರೋದ್ಯೋಗಂಗೆಯ್ಯೆ ಸಂಜಯನಂಜದೆ ಮಾರ್ಕೊಂಡು –

ಪ್ರತಿಕೂಲದೈವನೈ ನೀಂ ।
ಪ್ರತಿನೃಪರನುಕೂಲದೈವರಸಹಾಯನೆ ನೀಂ ॥
ಪ್ರತಿನೃಪರಸಹಾಯರ್ ನೀಂ ।
ಪ್ರತಿಬಲನದಱಿಂದನರ್ಥಕಂ ವಾಕ್ಯಾರ್ಥಂ ॥೪೫॥

ಎಂದು ನುಡಿದ ಸಂಜಯನ ನುಡಿ ಕರ್ಣಕಠೋರಮಾಗೆ ದುರ್ಯೋಧನನದರ್ಕೆ ನಿರ್ವೆಸಿ, –

ಸಮರಜಯಂ ದೈವಾಯ ।
ತ್ತಮದಱಿನಾ ಪುರುಷಕಾರಮೆಮಗಾಯ್ತೀಗಳ್ ॥
ಯಮನಂದನಾದಿಗಳೊಳೊಂ ।
ದೆ ಮೆಯ್ಯೊಳಾಂತಿಱಿವೆನೆನ್ನ ಚಲಮಂ ಮೆಱೆವೆಂ ॥೪೬॥

೪೪. ಮತ್ಸ್ಯ ಕೂರ್ಮ ಮೊದಲಾದ ಹತ್ತು ಅವತಾರಗಳನ್ನು ತಾಳಿದುದು ಸಾಲದೆಂದು ಅರ್ಜುನನ ಬಂಡಿಯ ಬೋವನಾಗಿ ಹನ್ನೊಂದನೆಯ ಸೂತಾವತಾರವನ್ನೂ ಈ ವಿಷ್ಣು ತಾಳಿದನೆ ?

ವ॥ ಈ ರೀತಿಯಾಗಿ ದುರ್ಯೋಧನನು ರುದ್ರನನ್ನೂ, ಇಂದ್ರನನ್ನೂ, ಹನುಮಂತನನ್ನೂ, ಕೃಷ್ಣನನ್ನೂ ನಿರಾಕರಿಸಿ, ಅಷ್ಟಕ್ಕೆ ನಿಲ್ಲದೆ ಯುದ್ಧಕ್ಕೆ ಹೊರಟು ನಿಲ್ಲಲಾಗಿ, ಸಂಜಯನು ಅಂಜದೆ ಅವನನ್ನು ತಡೆಗಟ್ಟಿ -

೪೫. ನಿನಗೆ ದೈವ ವಿರೋಧಿಯಾಗಿದೆ ; ನಿನ್ನ ಶತ್ರುರಾಜರಿಗೆ ಅದು ಅನುಕೂಲ ವಾಗಿದೆ. ನಿನಗೆ ಈಗ ಯಾರ ಸಹಾಯವೂ ಇಲ್ಲ ; ನಿನ್ನ ಶತ್ರುಗಳು ಅಸಹಾಯ (ಸಹಾಯ ವನ್ನು ಅಪೇಕ್ಷಿಸದಂತಹ) ಶೂರರು. ಅಂತಹವರಿಗೆ ನೀನು ಈಗ ವೈರಿಯಾಗಿರುವುದರಿಂದ ನಿನ್ನ (ಯುದ್ಧಮಾಡಿ ಗೆಲ್ಲುವೆನೆಂಬ) ಮಾತು ನಿರರ್ಥಕವಾದುದೇ ಸರಿ.

ವ॥ ಹೀಗೆಂದ ಸಂಜಯನ ಮಾತು ಕಿವಿಗೆ ಕಠೋರವಾಗಲಾಗಿ, ದುರ್ಯೋಧನನು ಜುಗುಪ್ಸೆಗೊಂಡು ಹೀಗೆ ನುಡಿದನು -

೪೬. ಯುದ್ಧದಲ್ಲಿ ಜಯ ದೊರೆಯುವುದು ಅದೃಷ್ಟದ ವಿಷಯ. ಪೌರುಷ ಮಾತ್ರ ನಮಗೆ ಸೇರಿದುದು. ಆದುದರಿಂದ ಈಗ ಧರ್ಮರಾಜನೆ ಮೊದಲಾದ ಎಲ್ಲ ಪಾಂಡವರನ್ನೂ ನಾನು ಏಕಾಕಿಯಾಗಿ ಎದುರಿಸಿ ಹೋರಾಡಿ ನನ್ನ ಛಲವನ್ನು ಮೆರೆಯುವೆನು.

ಸುರಸಿಂಧೂದ್ಭವ ಕುಂಭಜನ್ಮ ದಿನಕೃತ್ಸುತ್ರಾದಿಗಳ್ ಸಾಯೆ ಸಂ ।
ಗರದೊಳ್ ಪಾಂಡವರಂ ಗೆಲಲ್ ನೆಱಿದನಿಲ್ಲೇಕಾಕಿ ದುರ್ಯೋಧನಂ ।
ಸೆರಗಂ ಸಾರ್ದಪನೆಂಗುಮೀ ಧರೆ ಭುಜಾದಂಡಂ ಗದಾದಂಡಮೆಂ ।
ಬೆರಡುಂ ಸಂಜಯ ಮಜ್ಜಯಕ್ಕೊದವಿರಲ್ ಮತ್ತನ್ಯರಂ ಪಾರ್ವೆನೇ ॥೪೭॥

ಮದವತ್ಕರಿಗಳ ಬದುವಂ ।
ವಿದಾರಣಂಗೆಯ್ದು ಕೊಲ್ವ ಕಂಠೀರವಕಂ ॥
ಕದನದೊಳರಿನೃಪರಂ ಕೋ ।
ಪದೆ ಕೊಲ್ವೆನಗಂ ಸಹಾಯಮೆಂಬರುಮೊಳರೇ ॥೪೮॥

ಕಟಿದರ್ ಕರ್ಣಾದಿಗಳಿ ।
ನ್ನುಟಿದುದನಾನಾಸೆಗೆಯ್ಯೆನೆನಗಂ ನೆರಮೇ ॥
ಗಟಿಗೆಗೆ ಕರಡೆಯ ತಾಳದ ।
ಪಟಹದ ಮದ್ದಳೆಯ ಮಿಕ್ಕ ವಾದ್ಯಮುಮೊಳವೇ ॥೪೯॥

ಎಂದು ನುಡಿದು ಕಾಲದಂಡಪ್ರಚಂಡಮಪ್ಪ ತನ್ನ ಗದಾದಂಡಮಂ ಭುಜಾದಂಡದೊಳಳವಡಿಸಿಕೊಂಡು ಪಾಂಡವರ್ಗಭಿಮುಖನಾಗಿ ನಡೆವ ಪನ್ನಗಪತಾಕನ ಮುಳಿಸಿನಂದವನಱಿದು ಸಂಜಯನಂಜದೆ ಮಾರ್ಕೊಂಡು

೪೭. ಭೀಷ್ಮ, ದ್ರೋಣ, ಕರ್ಣಾದಿಗಳು ಪ್ರಾಣಬಿಟ್ಟರೂ ಯುದ್ಧದಲ್ಲಿ ಗೆಲುವು ದೊರೆಯದಾಯಿತು ; ಏಕಾಕಿಯಾದ ದುರ್ಯೋಧನನು ಈಗ ಇನ್ನಾರಾದರೂ ಸಹಾಯಕ್ಕೆ ಬರಲೆಂದು ಕಾಯುತ್ತಿದ್ದಾನೆ ಎಂದು ಜನ ಆಡಿಕೊಳ್ಳುವರು. ನನ್ನ ಈ ತೋಳು ಹಾಗೂ ಈ ಗದೆ ಎರಡೂ ಜಯಕ್ಕೆ ಸಾಧನವಾಗಿರುವಾಗ ಬೇರೆಯವರ ನೆರವನ್ನು ನಾನು ಬಯಸುವೆನೆ ?

೪೮. ಮದದಾನೆಗಳ ನೆತ್ತಿಯನ್ನು ಸೀಳಿ ಅವುಗಳನ್ನು ಕೊಂದು ಹಾಕುವ ಸಿಂಹಕ್ಕೂ, ರಣರಂಗದಲ್ಲಿ ಕೋಪದಿಂದ ವೈರಿರಾಜರನ್ನು ಕೊಲ್ಲುವ ನನಗೂ ಸಹಾಯಕರೆಂಬವರು ಉಂಟೆ ?

೪೯. ಕರ್ಣನೇ ಮೊದಲಾದವರು ಅಳಿದು ಹೋದರು. ಇನ್ನು ನನಗೆ ಬೇರಾವ ಆಸೆಯೂ ಇಲ್ಲ. ನನಗೆ ಸಹಾಯವಾದರೂ ಏತಕ್ಕೆ ಬೇಕು ? ಘಟವಾದ್ಯಕ್ಕೆ ಕರಡೆ, ತಾಳ, ಪಟಹ, ಮದ್ದಳೆ ಮುಂತಾದ ವಾದ್ಯಗಳು ಬೇಕೆ ?

ವ॥ ಹೀಗೆ ನುಡಿದು ಯಮದಂಡದಂತೆ ಪ್ರಚಂಡವಾದ ತನ್ನ ಗದೆಯನ್ನು ಹೆಗಲ ಮೇಲಿಟ್ಟುಕೊಂಡು ಪಾಂಡವರನ್ನು ಎದುರಿಸಲು ಹೊರಟ ದುರ್ಯೋಧನನ ಕೋಪಾವೇಶವನ್ನು ಅರಿತು, ಅದಕ್ಕೆ ಅಜದೆ ಸಂಜಯನು ಆತನನ್ನು ಅಡ್ಡಗಟ್ಟಿ ಹೀಗೆಂದನು -

ನರನುಂ ನರನಂದನನುಂ ।
ಗುರುವುಂ ಗುರುಸುತನುಮಾರ್ಯಭೂರಿಶ್ರವನುಂ ॥
ಸುರಸಿಂಧುಸುತನುಮಿಂತಱು
ವರುಮತಿರಥರಲ್ತೆ ಕುರುಕುಲಾಂಬರಭಾನೂ ॥೫೦॥

ಅನಿಲಜನುಂ ಧೃಷ್ಟದ್ಯು ।
ಮ್ನನುಮಂತಕತನಯನುಂ ಮಹಾಸಾತ್ಯಕಿ ಮ ।
ತ್ಸ್ಯನ ಸೂನು ಶಿಖಂಡಿ ವ್ಯಾ ।
ಸನ ಮತದಿಂದಱುವರುಂ ಮಹಾರಥರಲ್ತೇ ॥೫೧॥

ಇನನಂದನನುಂ ದುಶ್ಶಾ ।
ಸನನುಂ ವೃಷಸೇನನುಂ ಘಟೋತ್ಕಚನುಂ ಮ ॥
ತ್ತಿನ ನಕುಳನುಮಾ ಸಹದೇ ।
ವನುಮರ್ಧರಥರ್ಕಳಿವರ್ಗಳಱಿವಾ ನೃಪತೀ ॥೫೨॥

ಕುರುರಾಜ ನೀನುಮಾ ಮ ।
ದ್ರರಾಜನುಂ [ಸೋಮದತ್ತನುಂ] ಕೃಪ ಕೃತವ ॥
ರ್ಮರುಮೊಡನೆ ಶಕುನಿಯುಂ ಕೂ ।
ಡಿರೆ ಸಮರಥರೆಂಬರಲ್ತೆ ನಿಮ್ಮಱುವರುಮಂ ॥೫೩॥

೫೦. ಅರ್ಜುನ, ಅಭಿಮನ್ಯು, ದ್ರೋಣ, ಅಶ್ವತ್ಥಾಮ, ಭೂರಿಶ್ರವ ಹಾಗೂ ಭೀಷ್ಮ - ಈ ಆರು ಜನ ಅತಿರಥರಲ್ಲವೆ ? [ಅಪರಿಮಿತ ಸಂಖ್ಯೆಯ ಶತ್ರುಗಳೊಡನೆ ಏಕಾಕಿಯಾಗಿ ಯುದ್ಧಮಾಡಬಲ್ಲ ರಥಿಕನಿಗೆ 'ಅತಿರಥ'ನೆಂಬ ಹೆಸರು. ಹತ್ತು ಸಾವಿರ ಬಿಲ್ಲಾಳುಗಳೊಡನೆ ಒಬ್ಬಂಟಿಗನಾಗಿ ಯುದ್ಧ ಮಾಡಬಲ್ಲ ಶಸ್ತ್ರಶಾಸ್ತ್ರ ಪ್ರವೀಣನು 'ಮಹಾರಥ'; ಪರಿಣತನಲ್ಲದ ಇನ್ನೊಬ್ಬನನ್ನು ಬದಿಯಲ್ಲಿರಿಸಿಕೊಂಡು ಯುದ್ಧಮಾಡಬಲ್ಲ ರಥಿಕನು 'ಅರ್ಧರಥ' ; 'ಸಮರಥ'ದ ಅರ್ಥ ಸರಿಯಾಗಿ ತಿಳಿಯದು. ಬಹುಶಃ 'ತನಗೆ ಸಮನಾದ ಒಬ್ಬ ರಥಿಕನೊಡನೆ ಮಾತ್ರ ಯುದ್ಧಮಾಡಬಲ್ಲವನು' ಎಂದು ಊಹಿಸ ಬಹುದು.]

೫೧. ಭೀಮ, ಧೃಷ್ಟದ್ಯುಮ್ನ, ಧರ್ಮರಾಜ, ಸಾತ್ಯಕಿ, ಮತ್ಸ್ಯರಾಜನ ಮಗ ಶಿಖಂಡಿ - ಈ ಆರು ಜನ ವ್ಯಾಸರ ಮೇರೆಗೆ ಮಹಾರಥರಲ್ಲವೆ ?

೫೨. ಕರ್ಣ, ದುಶ್ಶಾಸನ,ವೃಷಸೇನ, ಘಟೋತ್ಕಚ, ನಕುಲ ಮತ್ತು ಸಹದೇವ - ಇವರು ಅರ್ಧರಥರೆಂಬುದನ್ನು ನೀನು ಬಲ್ಲೆಯಷ್ಟೆ ?

೫೩. ದುರ್ಯೋಧನರಾಜನೆ, ನೀನು, ಶಲ್ಯರಾಜ, ಸೋಮದತ್ತ, ಕೃಪ, ಕೃತವರ್ಮ ಮತ್ತು ಶಕುನಿ - ಈ ಆರು ಜನರನ್ನು ಸಮರಥರೆನ್ನುವರಲ್ಲವೆ ?

ಪವನಾತ್ಮಜಂ ಮಹಾರಥ ।
ನವನಿಪ ನೀಂ ಸಮರಥನೆ ಅದರ್ಕಧಿಕನೊಳಾ ॥
ಪವನಾತ್ಮಜನೊಳ್ ಮಱಿ ಬ ।
ದ್ಧವೈರಮಂ ಸಂಧಿಮಾಳ್ಪುದುತ್ತಮಪಕ್ಷಂ ॥೫೪॥

ಎಂದು ನುಡಿದ ಸಂಜಯನ ನುಡಿಗೆ ಪಿಂಗಾಕ್ಷನತಿವಿಷಮಪರುಷವೇಷಾ ವೇಶಧರನಾಗಿ –

ಅತಿರಥನಾತಂ ಗಡ ಬಲ ।
ಯುತ ಸಮರಥನೆನ್ನೊಳಧಿಕಬಲವಂತಂ ಮಾ ॥
ರುತಿ ಗಡ ಮಹಾರಥಂ ಮಾ ।
ರುತಿಯುಂ ತದ್ರಥದ ಗಾಲಿಗಳ್ ದೊಡ್ಡಿದುವೇ ॥೫೫॥

ಪೆಱರಂ ಪೊಗಳ್ದಪೆಯೆಮ್ಮಂ ।
ಕಿಱಿಯರ್ ಮಾಡಿದಪೆಯೆಲವೊ ಸಂಜಯ ನೀನುಂ ॥
ಪೆಱನೊರ್ವಂ ಬಿಲ್ಲೊಜಂ ।
ಪೆಱನೊರ್ವಂ ಸಿಂಧುಪುತ್ರನಾಗಲ್ ಬಗೆವೋ ॥೫೬॥

ನಿನ್ನ ಮಹಾರಥನಳವುಮ ।
ನೆನ್ನಳವುಮನಱಿಯದಿಟಿಸಿ ಸಮರಥನೆಂದಯ್ ॥
ಮುನ್ನಂ ನಿನಗಾಂ ಪೊಸತೇ ।
ಪನ್ನಗಕೇತನನೊಳಾಂಪ ಗಂಡರುಮೊಳರೇ ॥೫೭॥

೫೪. ಭೀಮಸೇನನು ಮಹಾರಥ ; ನೀನಾದರೋ ಸಮರಥ. ನಿನಗಿಂತ ಮೇಲಾಳಾದ ಭೀಮನೊಡನೆ ಬದ್ಧವೈರವನ್ನು ಸಾಧಿಸಬೇಡ. ಸಂಧಿ ಮಾಡಿಕೊಳ್ಳುವುದು ಉತ್ತಮ.

ವ॥ ಸಂಜಯನ ಈ ಮಾತನ್ನು ಕೇಳಿ ದುರ್ಯೋಧನನು ಅತ್ಯಂತ ಕೋಪಾವಿಷ್ಟನಾಗಿ –

೫೫. ಅವನಾವನೋ ಅತಿರಥನಂತೆ ! ಬಲಶಾಲಿಯಾದ ನಾನು ಸಮರಥನಂತೆ! ಭೀಮನು ಬಲವಂತ ಹಾಗು ಮಹಾರಥನಂತೆ ! ಮಹಾರಥನೆಂದರೆ ಅವನ ರಥದ ಗಾಲಿಗಳು ದೊಡ್ಡವೆಂತಲೊ ?

೫೬. ಎಲವೋ ಸಂಜಯನೆ, ಹೆರವರನ್ನು ಹೊಗಳಿ ನಮ್ಮನ್ನು ಕೀಳೆಣಿಸುವ ನೀನೂ ಕೂಡ ಇನ್ನೊಬ್ಬ ದ್ರೋಣ ಹಾಗು ಇನ್ನೊಬ್ಬ ಭೀಷ್ಮನಾಗಬೇಕೆನ್ನುವಿಯಾ ?

೫೭. ಆ ನಿನ್ನ ಮಹಾರಥನ ಶಕ್ತಿಯನ್ನು ನನ್ನ ಶಕ್ತಿಯನ್ನೂ ಅರಿಯದೆ, ನನ್ನನ್ನು ಲಘುವಾಗಿ ಪರಿಗಣಿಸಿ ಸಮರಥನೆಂದು ಹೆಸರಿಸಿದೆಯಲ್ಲವೆ ? ನಿನಗೆ ನಾನೇನು ಹೊಸಬನೆ? ಸರ್ಪಧ್ವಜನಾದ ನನ್ನನ್ನು ಎದುರಿಸಬಲ್ಲ ವೀರರೂ ಉಂಟೆ ?

ಅಂತು ನರಮಾಂಸಮಂ ಮಹಾಮಾಂಸಮೆಂದು ನರತೈಲಮಂ ಮಹಾತೈಲಮೆಂದು ನರಮಾಂಸಬಲಿಯಂ ಮಹಾಮಾಂಸಬಲಿಯೆಂದು ದೀರ್ಘನಿದ್ರೆಯಂ ಮಹಾನಿದ್ರೆಯೆಂದು ದೀರ್ಘಪ್ರಾಣಮಂ ಮಹಾಪ್ರಾಣಮೆಂದು ಸ್ನುಹಿವೃಕ್ಷಮಂ ಮಹಾವೃಕ್ಷಮೆಂದು ನುಡಿವಂತೆ ಭೀಮನಂ ಮಹಾರಥನೆಂದು ನುಡಿಯಲ್ ತಕ್ಕುದೇ ವಲಂ! ಎಂದರಸನವಂಗೆ ವಿರಸಮಾಗಿ ಪರುಷಮಂ ನುಡಿಯೆ ಸಂಜಯನಂಜಿ -

ಎನಿತೆನಿತಂ ಕಲಿಸಿದೊಡಂ ।
ತನಿತನಿತುಂ ನೈಜಭಾವಮಕ್ಕುಂ ನೃಪನಂ ॥
ದನನೆಂತುಮಂತು ಕರ್ಕಶ ।
ತನುವಂತಃಶೂನ್ಯಮಕ್ಕುಮುನ್ನತವಂಶಂ ॥೫೮॥

ಎಂದಱಿದು 'ಮೌನಂ ಸರ್ವಾರ್ಥಸಾಧನಂ' ಎಂಬುದು ಈತಂಗನುಕೂಲ ವೃತ್ತಿಯುಂ ಸ್ವಚ್ಛಂದಾನುವೃತ್ತಿಯುಮಾಗಿ ನೆಗಬ್ದು ಎಂತುಂ 'ಆರಾಧ್ಯಂ ನ ಪ್ರಕೋಪಯೇತ್' ಎಂದು ಮೋನಂಗೊಂಡು ಸಂಜಯಂ ಕಿಱಿದುಬೇಗಮಿರ್ದು ಫಣಿರಾಜಕೇತನಂ ಯುದ್ಧ ಸನ್ನದ್ಧನಾಗಿ ನಡೆವುದಂ ಕಂಡು ಮತ್ತಮಾ ಸಂಜಯಂ ನಿಸರ್ಗಮೂರ್ಖನುಂ ಸ್ವಭಾವ ದೃಢನುಂ ಸ್ವಾಮಿಹಿತನುಮಪ್ಪುದಱಿಂದಿರಲಾಱದೆ -

ವ॥ ಮನುಷ್ಯಮಾಂಸವನ್ನು ಮಹಾಮಾಂಸವೆಂದು, ನರತೈಲವನ್ನು ಮಹಾತೈಲ ವೆಂದು ನರಮಾಂಸಬಲಿಯನ್ನು ಮಹಾಮಾಂಸಬಲಿಯೆಂದು, ದೀರ್ಘನಿದ್ರೆ (ಮರಣ) ಯನ್ನು ಮಹಾನಿದ್ರೆಯೆಂದು ದೀರ್ಘಪ್ರಾಣವನ್ನು ಮಹಾಪ್ರಾಣವೆಂದು, ಮುಂಡಗಳ್ಳಿಯನ್ನು ಮಹಾವೃಕ್ಷವೆಂದು ನುಡಿಯುವಂತೆ ಭೀಮನನ್ನು ಮಹಾರಥನೆಂದು ಕರೆಯುವುದು ಯೋಗ್ಯವೆ ? [ಇಲ್ಲಿ ಉಕ್ತವಾದ ಜೊತೆ ಪದಗಳು ಸಮಾನಾರ್ಥಕವಾದುವು. ದುರ್ಯೋಧನನು ಈ ಪದಗಳಲ್ಲಿಯ 'ಮಹಾ' ಎಂಬುದಕ್ಕೆ 'ಶ್ರೇಷ್ಠ' ಎಂಬರ್ಥವನ್ನು ಆರೋಪಿಸಿ ಟೀಕಿಸುತ್ತಿದ್ದಾನೆ.] ಹೀಗೆ ಅರಸನು ಕಠೋರವಾಗಿ ಮಾತಾಡಲಾಗಿ ಸಂಜಯನು ಹೆದರಿ -

೫೮. ಹೊರಗೆ ಬಿರುಸಾದ ಮೈಯಾದರೂ ಒಳಗೆ ಟೊಳ್ಳಾಗಿ ಉದ್ದಕ್ಕೆ ಬೆಳೆದ ಬಿದಿರು ಹೇಗೆ ತನ್ನ ಸ್ವಭಾವವನ್ನು ಬಿಟ್ಟು ಮಣಿಸಿದಂತೆ ಮಣಿಯಲಾರದೊ ಹಾಗೆ, ಹೊರಗೆ ದೃಢಕಾಯನಾಗಿ ಕಂಡರೂ, ಒಳಗೆ ಸತ್ತ್ವವಿಲ್ಲದ, ಉನ್ನತ ವಂಶೋದ್ಭವನಾದ ದುರ್ಯೋಧನನು ಎಷ್ಟು ತಿಳಿಹೇಳಿದರೂ ತನ್ನ ಒರಟು ಸ್ವಭಾವವನ್ನು ಬಿಡಲಾರನು.

ವ॥ ಎಂದು ಅರಿತು "ಮೌನದಿಂದ ಎಲ್ಲವನ್ನೂ ಸಾಧಿಸಬಹುದೆನ್ನುತ್ತಾರೆ. ಈತನಿಗೆ ಅನುಕೂಲವಾಗಿಯೆ ನಾನು ವರ್ತಿಸಬೇಕು. "ಮೆಚ್ಚಿಸಬೇಕಾದ ವ್ಯಕ್ತಿಯನ್ನು ರೇಗಿಸಬಾರದು" ಎಂದಕೊಂಡು, ಸಂಜಯನು ಕೆಲ ಹೊತ್ತು ಸುಮ್ಮನಿದ್ದನು. ದುರ್ಯೋಧನನು ಯುದ್ಧಕ್ಕೆ ಸಿದ್ಧನಾಗಿ ಹೊರಟುದನ್ನು ಕಂಡು, ದೃಢಸ್ವಭಾವದವನೂ, ನಿಸರ್ಗ ಮೂರ್ಖನೂ ತನ್ನ ಸ್ವಾಮಿಗೆ ಹಿತವನ್ನೆ ಬಯಸುವವನೂ ಆದ ಸಂಜಯನು, ಸುಮ್ಮನಿರಲಾರದೆ -

ಬಲದೊಳಗಶ್ವತ್ಥಾಮಂ ।
ಬಲನೊಳ[ನಿ]ರ್ವರುಮನಾಸೆಗೆಯ್ಯದೆ ವಿದ್ಯಾ ॥
ಬಲದಿಂ ಕಾದದೆ ನಿಜಭುಜ ।
ಬಲದಿಂ ಪಾಂಡವರೊಳರಸ ಕಾದಲ್ ಬಗೆದಯ್ ॥೫೯॥

ಆ ಬಲದೇವಾಶ್ವತ್ಥಾಮರುಮಿರ್ದರವರಿರ್ವರುಮಲ್ಲದೆ ಕೃಪ ಕೃತವರ್ಮರುಮಿರ್ದರಂತು ನಾಲ್ವರೊಳೊರ್ಬಂಗೆ ವೀರಪಟ್ಟಮಂ ಕಟ್ಟಿ ವೀರಪುಮುಖಂಗೆ ಸೇನಾಪತ್ಯಾಭಿಷೇಕಮಂ ಮಾಡಿ ಪಗೆಯಂ ಕಯ್ಗೆ ಮಾಟ್ಟುದೆಂಬುದುಂ ಸಂಜಯನ ನುಡಿಗೆ ದುರ್ಯೋಧನನಿಂತೆಂದಂ –

ತ್ರಿದಶನದೀಸುತನಿಂ ತೀ ।
ರದ ಕಜ್ಜಂ ಮುನ್ನೆ ಕಳಶಸಂಭವನಿಂ ತೀ ॥
ರದ ಕಜ್ಜಮಿನಜನಿಂ ತೀ ।
ರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ ॥೬೦॥

ದ್ರೋಣನೆಮಗೊಳ್ಳಿಕೆಯ್ದಂ ।
ದ್ರೋಣನ ಸುತನೊಳ್ಳಿಕೆಯ್ಯದಿರ್ಕುಮೆ ಸಮರ ॥
ಕ್ಷೋಣಿಯೊಳಿನ್ನವನಾಸೆ [ಯೆ?]
ಮಾಣೆಯಣಂ ಕಯ್ಪೆಸೊರೆಯ ಕುಡಿಯೇಂ ಮಿಡಿಯೇಂ ॥೬೧॥

೫೯. ನಿನ್ನ ಸೈನ್ಯದಲ್ಲಿ (ಬಲಿಷ್ಠನಾದ) ಅಶ್ವತ್ಥಾಮನಿನ್ನೂ ಇರುವನು. (ನಿನ್ನ ಪಕ್ಷವನ್ನು ವಹಿಸುವ) ಬಲರಾಮನೂ ಉಂಟು. ಅವರಿಬ್ಬರ ಸಹಾಯವನ್ನೂ ಬಯಸದೆ, (ಮಂತ್ರ) ವಿದ್ಯೆಯ ಬಲದಿಂದ ಯುದ್ಧ ಮಾಡುವುದನ್ನು ಬಿಟ್ಟು, ನಿನ್ನ ತೋಳ್ಬಲದಿಂದ ಮಾತ್ರ ಪಾಂಡವರೊಡನೆ ಹೋರಾಡಲು ಬಯಸಿದೆಯಾ ?

ವ॥ ಬಲರಾಮ ಅಶ್ವತ್ಥಾಮರಿಬ್ಬರೂ ಇನ್ನೂ ಇದ್ದಾರೆ. ಅವರಲ್ಲದೆ ಕೃಪ ಕೃತವರ್ಮರೂ ಉಂಟು. ಈ ನಾಲ್ವರಲ್ಲಿ ಒಬ್ಬನಿಗೆ ವೀರಪಟ್ಟವನ್ನು ಕಟ್ಟಿ, ಸೇನಾಪತ್ಯಭಿಷೇಕ ಮಾಡಿ ವೈರಿಗಳನ್ನು ಜಯಿಸು. ಹೀಗೆಂದ ಸಂಜಯನ ಮಾತಿಗೆ ದುರ್ಯೋಧನನು ಹೀಗೆ ನುಡಿದನು.

೬೦. ಭೀಷ್ಮನಿಂದ ನೀಗದ ಕಾರ್ಯ, ದ್ರೋಣನಿಂದ ಸಾಧ್ಯವಾಗದ ಕಾರ್ಯ, ಕರ್ಣನಿಂದಲೂ ನೆರವೇರಿಸಲಾಗದ ಕಾರ್ಯ ಅಶ್ವತ್ಥಾಮನಿಂದ ಸಾಧ್ಯವಾದೀತೆ ?

೬೧. ದ್ರೋಣನು ನಮಗೆ ಒಳ್ಳೆಯ ಉಪಕಾರ ಮಾಡಿದನು. ಇನ್ನು ದ್ರೋಣನ ಮಗನು ಉಪಕಾರ ಮಾಡದಿರುವನೆ ? ಅವನು ರಣರಂಗಕ್ಕೆ ಮರಳಿ ಬರುವನೆಂದು ನಿನಗೆ ಇನ್ನೂ ಆಸೆಯುಂಟೆ ? ಅದನ್ನಿನ್ನೂ ನೀನು ಬಿಡಲಾರೆ. ಕಹಿ ಸೋರೆ - ಅದರ ಕುಡಿಯೇನು, ಹೀಚೇನು ! ಎರಡೂ ಕಹಿಯೇ. [ತಂದೆ ಶಸ್ತ್ರ ಸಂನ್ಯಾಸಮಾಡಿ ವೈರಿಗಳಿಗೆ ಜಯವನ್ನು ಒಪ್ಪಿಸಿದನು. ಈ ಮಗನೂ ಆಯತಹೊತ್ತಿನಲ್ಲಿ ಶಸ್ತ್ರ ಹಿಡಿಯೆನೆಂದು ಶಪಥಮಾಡಿ ಹೊರಟು ಹೋದನು.]

ಹಲಿಯಂ ರಣಕೇಳಿಕುತೂ ।
ಹಲಿಯಂ ನಚ್ಚಿರ್ದೆನವನುಮಾಹವಕೋಲಾ ।
ಹಲದಲ್ಲಿ ತೀರ್ಥಯಾತ್ರಾ ।
ಚ್ಛಲದಿಂದಮಗಲ್ದು ಪೋದನಿನ್ನುಂ ಬಾರಂ ॥೬೨॥

ಮಡಿ [ವೊಡೆ] ಪಗೆ ರವಿಸುತನಿಂ ।
ಮಡಿಗುಂ ಮೇಣ್ ಶೌರ್ಯಶಾಳಿದುಶ್ಶಾಸನನಿಂ ॥
ಮಡಿಗುಂ ಮೇಣೆನ್ನಿಂದಂ ।
ಮಡಿಗುಂ ಪೆಱಪೆಱರಿನೆನ್ನ ಪಗೆ ಮಡಿದಪುದೇ ॥೬೩॥

ನಿಲಲುಂ ನೂಂಕಲುಮರಿಯಂ ।
ಗೆಲಲುಂ ಪೆಱರೊಳರೆ ಕರ್ಣನಲ್ಲದೆ ಕರ್ಣಂ ॥
ತಲೆನಾಯಕನಾರುಮವಂ ।
ನಿಲೆ ನಿಲ್ವರ್ ನೂಂಕೆ ನೂಂಕುವರ್ ಗೆಲೆ ಗೆಲ್ವರ್ ॥೬೪॥

ಕಡುಗೂರಿತಕ್ಕುಮುಕ್ಕಿನೊ ।
ಳೊಡಗೂಡಿದ ಪಚ್ಚೆ ಬೇಱೆ ಕೂರ್ಪಿಲ್ಲಾರುಂ ॥
ತೊಡರ್ದಿಱಿವರರ್ಕನಂದನ ।
ನೊಡನಿಲ್ಲದೆ ತಾಮೆ ಬೇಱೆ ಕೂಱಿದರೊಳರೇ ॥೬೫॥

೬೨. [ಇನ್ನು ಬಲರಾಮನ ಮಾತು.] ರಣರಂಗೋತ್ಸಾಹಿಯಾದ ಬಲರಾಮನನ್ನು ನಾನು ನೆಚ್ಚಿಕೊಂಡಿದ್ದೆನು. ನಮ್ಮ ಯುದ್ಧ ಕೋಲಾಹಲವೆದ್ದ ಕಾಲದಲ್ಲಿಯೆ ತೀರ್ಥಯಾತ್ರೆಯ ನೆವ ಮಾಡಿಕೊಂಡು ಅವನು ನಮ್ಮನ್ನು ಬಿಟ್ಟು ಹೋದನು ; ಇಂದಿಗೂ ಮರಳಿ ಬಂದಿಲ್ಲ.

೬೩. ನಮ್ಮ ಶತ್ರು ಸಾಯುವುದೆ ಆಗಿದ್ದರೆ ಕರ್ಣನ ಕೈಯಲ್ಲಿ ಇಲ್ಲವೆ ದುಶ್ಶಾಸನನ ಕೈಯಲ್ಲಿ ಅಥವಾ ನನ್ನ ಕೈಯಲ್ಲಿ ಸಾಯಬೇಕೇ ಹೊರತು ಬೇರೆ ಯಾರ ಕೈಯಲ್ಲಿಯೋ ಸಾಯುವುದುಂಟೆ ?

೬೪. ಯುದ್ಧದಲ್ಲಿ ದೃಢವಾಗಿ ನಿಲ್ಲಲೂ ವೈರಿಗಳನ್ನು ಹಿಮ್ಮೆಟ್ಟಿಸಲೂ ಗೆಲ್ಲಲೂ ಕರ್ಣನೊಬ್ಬನೆ ಅಲ್ಲದೆ ಅವನಂತಹವರು ಇನ್ನೊಬ್ಬರುಂಟೆ ? ಕರ್ಣನು ಮಿಗಿಲಾದ ನಾಯಕ. ಯಾರಾದರೇನು, ಅವನನ್ನು ನಾಯಕನನ್ನಾಗಿ ಪಡೆದವರು, ಅವನು ನಿಂತರೆ ನಿಲ್ಲುವರು, ನುಗ್ಗಿದರೆ ನುಗ್ಗುವವು, ಅವನು ಗೆದ್ದರೆ ಗೆಲ್ಲುವರು.

೬೫. ಮೆದು ಕಬ್ಬಿಣವು ಉಕ್ಕಿನೊಡನೆ ಬೆರೆತಾಗ ಅತ್ಯಂತ ಹರಿತವಾಗುವುದು. ತನ್ನಷ್ಟಕ್ಕೆ ಅದು ಹರಿತವಾಗದು. ಕರ್ಣನು ಜೊತೆಗೆ ಇದ್ದರೆ ಯಾರೇ ಆದರೂ ಮುನ್ನುಗ್ಗಿ ಹೋರಾಡುವರು. ಅವನಿಲ್ಲದೆ ತಾವೇ ಮುಂದಾಗಿ ಶೌರ್ಯವನ್ನು ತೋರಿದವರು ಉಂಟೆ ?

ಕಾನೀನಂ ದ್ರೋಣ ನದೀ ।
ಸೂನುಗಳಟೆದಿಂಬಟಿಕ್ಕೆ ಪೆಱರೆನಗಿಲ್ಲೆಂ ॥
ದಾನೆ ಗಳಿತಾಶ್ರುಜಲದಿಂ ।
ಸೇನಾಪತ್ಯಾಭಿಷೇಕಮಂ ಮಾಡಿದಪೆಂ ॥೬೬॥

ಎನಗಿರ್ವರುಮೆರಡುಂ ತೋ ।
ಳೆನಗಿರ್ವರುಮೆರಡು ಕಣ್ಗ [ಳ] ನ್ನರೆ ಯುವರಾ ॥
ಜನುಮಂಗರಾಜನುಂ ಪೋ ।
ಱಿನೆ ಸಂಜಯ ಮತ್ತಮೆನಗೆ ಮಾನಸವಾಟೇ ॥೬೭॥

ಕಟೆದಂ ದಿನಕರತನಯಂ ।
ಕಟೆದಂ ಯುವರಾಜನಪ್ಪ ದುಶ್ಶಾಸನನುಂ ॥
ತುಟಿಲಾಳ್ಗಳನಿರ್ವರುಮಂ ।
ಕಟಿಪಿ ಸುಯೋಧನನ ಬಾಳ್ವುದಂ ನಂಬಿದಿರೇ ॥೬೮॥

ಎನಗೆ ಮನಮಿಂದು ಶೂನ್ಯಂ ।
ಮನೆ ಶೂನ್ಯಂ ಬೀಡು ಶೂನ್ಯಮಾದುದು ಸಕಲಾ ॥
ವನಿ ಶೂನ್ಯಮಾಯ್ತು ದುಶ್ಶಾ ।
ಸನನಿಲ್ಲದೆ ಕರ್ಣನಿಲ್ಲದಾನೆಂತಿರ್ಪೆಂ ॥೬೯॥

ಬಾಂಧವರನಿಱಿಸಿ ಸರಸಿಜ ।
ಬಾಂಧವತನಯನುಮನೆನ್ನ ತಮ್ಮನುಮಂ ನ ॥
ಮ್ಮಂಧನರೇಂದ್ರನ ಮೊಗಮಂ ।
ಗಾಂಧಾರಿಯ ಮೊಗಮನಾವ ಮೊಗದೊಳೆ ನೋಟ್ಪೆಂ ॥೭೦॥

೬೬. ಕರ್ಣನೂ, ದ್ರೋಣನೂ, ಭೀಷ್ಮನೂ ಅಳಿದ ಬಳಿಕ ನನಗೆ ಯಾರೂ ಇಲ್ಲವಾಯಿತು. ಈಗ ನನ್ನ ಕಣ್ಣೀರಿನಿಂದ ನನಗೆ ನಾನೇ ಸೇನಾಪತ್ಯಭಿಷೇಕ ಮಾಡಿಕೊಳ್ಳುತ್ತೇನೆ.

೬೭. ಯುವರಾಜ (ದುಶ್ಶಾಸನ) ಹಾಗೂ ಕರ್ಣ - ಇವರಿಬ್ಬರೂ ನನಗೆ ಎರಡು ತೋಳು, ಎರಡು ಕಣ್ಣುಗಳಂತಿದ್ದವರು (ಕಳೆದು ಹೋದ ಮೇಲೆ) ನಾನಿನ್ನು ಮನುಷ್ಯನಾಗಿ ಬಾಳಬಹುದೆ ?

೬೮. ಸೂರ್ಯಪುತ್ರನಾದ ಕರ್ಣನು ತೀರಿದನು ; ಯುವರಾಜನಾದ ದುಶ್ಶಾಸನನೂ ತೀರಿದನು, ಈ ಇಬ್ಬರೂ ವೀರರನ್ನು ಕೊಲ್ಲಿಸಿ ಸುಯೋಧನನು ಬಾಳುವನೆಂದು ನಂಬಿದಿರಾ ?

೬೯. ನನಗೆ ಇಂದು ಮನಸ್ಸು ಶೂನ್ಯ, ಮನೆ ಶೂನ್ಯ, ಪಾಳೆಯ ಶೂನ್ಯ, ಭೂಮಿಯೆಲ್ಲವೂ ಶೂನ್ಯವಾಯಿತು. ದುಶ್ಶಾಸನನಿಲ್ಲದೆ ಕರ್ಣನೂ ಇಲ್ಲದೆ ನಾನು ಹೇಗೆ ಇರಲಿ ?

೭೦. ಕರ್ಣನನ್ನೂ ನನ್ನ ತಮ್ಮನನ್ನೂ ಬಾಂಧವರನ್ನೂ ಕೊಲ್ಲಿಸಿದ (ನಾನು) ನಮ್ಮ ಕುರುಡ ತಂದೆಗೆ ಹಾಗೂ ತಾಯಿ ಗಾಂಧಾರಿಗೆ ಹೇಗೆ ಮುಖ ತೋರಿಸಲಿ ?

ಎನೆ ಸಂಜಯನಾ ಪ್ರಸ್ತಾವದೊಳ್ ಭೀಷ್ಮದ್ರೋಣಕರ್ಣ ದುಶ್ಶಾಸನ ಶಲ್ಯಶಕುನಿ ಸೈಂಧವಭೂರಿಶ್ರವಸ್ಸೋಮದತ್ತಭಗದತ್ತಸೌಬಲ ಬೃಹದ್ಬಲಬಾಹ್ಲೀಕವಿಂದಾನುವಿಂದಾದಿಗಳ ಸಾವಿನೊಳ್ ಸರ್ವಾಂಗವಿಕಳರಾಗಿರ್ದ ಧೃತರಾಷ್ಟ್ರ ಗಾಂಧಾರಿಯರ ಚರಣಾರವಿಂದ ವಂದನಂಗೆಯ್ದು ದೇವರ ಮನಃಕ್ಷತಮನಾರಿಸಲ್ವೇಟ್ಟುದು ಬೀಡಿಂಗೆ ಬಿಜಯಂಗೆಯ್ವುದೆನೆ -

ಸವಳದೆ ಗುರುಜನದಲ್ಲಿಗೆ ।
ಯುವರಾಜನುಮಂಗರಾಜನುಂ ಬೆರಸು ರಣೋ ॥
ತ್ಸವದಿಂ ಪೋಗಲ್ ನಾಣ್ಚುವೆ ।
ನವರಿರ್ವರುಮಿಲ್ಲದೀಗಳಲ್ಲಿಗೆ ಪೋಗಲ್ ॥೬೧॥

ಮಹಿ ಭೂಭೃಚ್ಛತ್ರಶೂನ್ಯಂ ಕನಕಮಹಿಧರಂ ದ್ರೋಣವೃಕ್ಷಾದಿಶೂನ್ಯಂ ।
ಗುಹೆ ಸಿಂಹಾನೀಕಶೂನ್ಯಂ ದೆಸೆ ದಿಗಿಭಘಟಾಶೂನ್ಯಮಾದಂತೆ ವಾಯು ॥
ಸ್ವಹಭೀಮೋದ್ದಾಮಬಾಹಾಬಲದಳಿತಕುಭೃದ್ವರ್ಗಶೂನ್ಯಂ ವಿಷಾದಾ ।
ವಹಮಕ್ಕುಂ ಮುನ್ನಮೆನ್ನಿರ್ಪಜೆಕೆಯ ಸಭೆ ಮತ್ತೆಂತದಂ ಪೊಕ್ಕು ನೋಟ್ಪೆಂ ॥೬೨॥

ಪತಿಶೋಕವಿಕಳಪಾರ್ಥಿವ ।
ನಿತಂಬಿನೀಜನಮನೀಕ್ಷಿಸಲ್ ಸಂಜಯ ಲ ॥
ಜ್ಜಿತನೆನ್ನಿರ್ಪಿರವಿಂದೇ ॥
ಕೆ ತೋರ್ಪೆನಾನೆನ್ನ ಮೊಗಮನತಿದುಃಖಿತನೆಂ ॥೬೩॥

ವ॥ ಹೀಗೆನ್ನಲಾಗಿ ಸಂಜಯನು ಆಗ "ಭೀಷ್ಮ, ದ್ರೋಣ, ಕರ್ಣ, ದುಶ್ಶಾಸನ, ಶಲ್ಯ, ಶಕುನಿ, ಜಯದ್ರಥ, ಭೂರಿಶ್ರವ, ಸೋಮದತ್ತ, ಭಗದತ್ತ, ಸೌಬಲ, ಬೃಹದ್ಬಲ, ಬಾಹ್ಲೀಕ, ವಿಂದ, ಅನುವಿಂದ ಮೊದಲಾದವರ ಸಾವಿನಿಂದ ಸಂಪೂರ್ಣವಾಗಿ ವಿಹ್ವಲರಾದ ಧೃತರಾಷ್ಟ್ರ ಗಾಂಧಾರಿಯರ ಪಾದಗಳಿಗೆ ಎರಗಿ, ಅವರ ಮನಸ್ತಾಪವನ್ನು ಆರಿಸಬೇಕು ; ಆದುದರಿಂದ ಪಾಳೆಯಕ್ಕೆ ದಯಮಾಡಿಸು" ಎಂದನು. (ಆಗ ದುರ್ಯೋಧನನು ಹೀಗೆಂದು ನುಡಿದನು)-

೬೧. ಯುವರಾಜನನ್ನೂ ಕರ್ಣನನ್ನೂ ಸಂಗಡ ಕರೆದುಕೊಂಡು ರಣೋತ್ಸಾಹದಿಂದ (ಪ್ರತಿದಿನ) ತಾಯ್ತಂದೆಯರನ್ನು ಕಾಣಲು ಹೋಗುತ್ತಿದ್ದ ನಾನು ಈಗ ಅವರಿಬ್ಬರೂ ಇಲ್ಲದೆ ಒಂಟಿಯಾಗಿ ಹೋಗಿ ಕಾಣಲು ನಾಚಿಕೆಯಾಗುತ್ತದೆ.

೬೨. ಅರಸನ ಬೆಳ್ಗೊಡೆಯಿಲ್ಲದ ಭೂಮಿ, ದ್ರೋಣವೃಕ್ಷವೆ ಮೊದಲಾದ ಗಿಡಮರಗಳಿಲ್ಲದ ಕನಕಾದ್ರಿ, ಸಿಂಹಗಳಿಲ್ಲದ ಗವಿ, ದಿಗ್ಗಜಗಳಿಲ್ಲದ ದಿಕ್ಕು ಬರಿದಾಗಿ ಭಣಗುಡುವಂತೆ, ವಾಯುಪುತ್ರ ಭೀಮನ ಪ್ರಚಂಡ ಬಾಹುಗಳಿಂದ ರಾಜಸಮೂಹವೆಲ್ಲ ಸೀಳಿ ಸತ್ತು ಹೋದುದದರಿಂದ ಬರಿದಾಗಿ ರಣಗುಡುವ ನನ್ನ ಒಡ್ಡೋಲಗ ನನಗೆ ವಿಷಾದವನ್ನೆ ತಂದೀತು. ಅಂತಹ ಸಭಾಮಂದಿರವನ್ನು ನಾನು ಹೇಗೆ ಹೋಗಲಿ ? ಹೇಗೆ ನೋಡಲಿ?

೬೩. ಪತಿಶೋಕದಿಂದ ವಿಹ್ವಲರಾದ ರಾಜಪತ್ನಿಯರನ್ನು ನೋಡುವುದಕ್ಕೆ ನನಗೆ ನಾಚಿಕೆಯಾಗುತ್ತದೆ. ಈ ನನ್ನ ದುಃಸ್ಥಿತಿಯಲ್ಲಿ ಅವರಿಗೇಕೆ ನನ್ನ ಮುಖವನ್ನು ತೋರಿಸಲಿ? ಸಂಜಯಾ, ನಾನು ಅತ್ಯಂತ ದುಃಖಿ.

ಎಂಬನ್ನೆಗಂ ಸಕಲಚತುರಂಗಬಲವಿಕಳನಾಗಿ ಸಪ್ತಾಂಗರಾಜ್ಯಸಮಾಲಿಂಗಿತನಾಗಿ ಸಂಗ್ರಾಮರಂಗದೊಳಿರ್ದನೆಂಬುದನಾಪ್ತಚರರಱಿಪೆ ಕೇಳ್ದು ಗಾಂಧಾರಿಯುಂ ಧೃತರಾಷ್ಟ್ರನುಂ ಶೋಕಾಕುಲೀಕೃತಚಿತ್ತರಾಗಿ ತಮ್ಮ ಮಗನನಾರಯ್ಯಲುಂ ಮನಃಕ್ಷತಮನಾಱಿಸಲುಮೆಂದಱಸುತ್ತುಂ ಬಂದು -

ಪಡೆ ಪನ್ನೊಂದಕ್ಷೋಹಿಣಿ ।
ಗೊಡೆಯನೆ ಮೂರ್ಧಾಭಿಷಿಕ್ತನಯ್ ಮೂಱುಂ ಬೆ ॥
ಳ್ಗೊಡೆಯ ನಡುವಿರ್ಪ ನೀನಿ ।
ರ್ದೆಡೆಯುಮ[ದೆ]ಮಗಱಿಯದಂತುಟಾದುದೆ ಮಗನೇ ॥೭೪॥

ಎಂದು ಪಱಿಯಿಸುತ್ತುಂ ಬರ್ಪ ಗುರುಜನದ ಸರಮಂ ಸಂಜಯನಱಿದು ಕರಕಮಲಮುಕುಳಿತಾಂಜಲಿಯಾಗಿ ದೇವಾ ನಿನ್ನಲ್ಲಿಗೆ ನಿಜಜನನೀಜನಕರಱಸುತ್ತುಂ ಬಂದರ್ ಎಂಬುದುಂ ಉದ್ಧೃತಗೋತ್ರಾಭಿಮುಖಂ ವಜ್ರಾಘಾತಮಾದಂತೆ ಸಿಗ್ಗಾಗಿ ತಲೆಯಂ ಬಾಗಿ -

ಅರಿಭೂಪಾಲರನಿಕ್ಕಿ ಗೆಲ್ದೊಸಗೆಯಿಂ ತೂರ್ಯತ್ರಯಂ ಪೊಣ್ಮೆ ಸೋ ।
ದರರುಂ ಮಕ್ಕಳುಮಾಪ್ತರುಂ ಬೆರಸು ಬಂದಾನಂದದಿಂ ಕಾಣ್ಬೆನೆಂ ॥
ದಿರಲಿಂತಾಯ್ತು ವಿಧಾತ್ರ ಮದ್ಗುರುಗಳಂ ದುಃಖಾತ್ಮರಂ ಶೋಕತ ।
ತ್ಪರರಂ ಮೆಯ್ಯೊಳೆ ಬೀೞ್ವುದಶ್ರುಮುಖರಂ ಕಾಣ್ಬಂತುಟಂ ಮಾಡಿದಯ್ ॥೭೫॥

ವ॥ ಹೀಗೆನ್ನುವಷ್ಟರಲ್ಲಿ ಚತುರಂಗಬಲವನ್ನೆಲ್ಲ ಕಳೆದುಕೊಂಡು ರಾಜ್ಯದ ಸಪ್ತಾಂಗ ಗಳೆಲ್ಲವನ್ನೂ ತನ್ನಲ್ಲಿಯೇ ಸಮಾವೇಶಮಾಡಿಕೊಂಡು (ಸ್ವಾಮಿ, ಅಮಾತ್ಯ, ಸುಹೃತ್ತು, ಕೋಶ, ರಾಷ್ಟ್ರ, ದುರ್ಗ, ಬಲ - ಎಂಬೀ ಏಳು ಅಂಗಗಳಲ್ಲಿ ಆರನ್ನು ಕಳೆದುಕೊಂಡರೂ ಸ್ವಾಮಿಯಾದ ತನ್ನೊಬ್ಬನಲ್ಲಿಯೆ ಅವೆಲ್ಲ ಇವೆಯೆಂದುಕೊಂಡು), ರಣರಂಗದಲ್ಲಿ ದುರ್ಯೋಧನನು ಇರುವನೆಂದು ಆಪ್ತಸೇವಕರಿಂದ ತಿಳಿದು ಗಾಂಧಾರಿಯೂ, ಧೃತ ರಾಷ್ಟ್ರನೂ ಶೋಕಾಕುಲರಾಗಿ ತಮ್ಮ ಮಗನನ್ನು ಮಾತಾಡಿಸಿ ಅವನ ಮನೋವ್ಯಥೆಯನ್ನು ಆರಿಸಬೇಕೆಂದು ಅವನನ್ನು ಹುಡುಕುತ್ತ ಬಂದರು.

೭೪. ಹನ್ನೊಂದು ಅಕ್ಷೋಹಿಣಿ ಸೈನ್ಯಕ್ಕೆ ಒಡೆಯನಾಗಿ ಪಟ್ಟಾಭಿಷಿಕ್ತ ದೊರೆಯಾಗಿ, ಮೂರು ಶ್ವೇತಚ್ಛತ್ರಗಳ ನಡುವೆ ಮೆರೆಯುವ ಮಗನೇ ನೀನು ಈಗ ಇರುವ ಸ್ಥಳವು ಕೂಡ ನಮಗೆ ತಿಳಿಯದಂತಾಯಿತೆ ?

ವ॥ ಎಂದು ಪ್ರಲಾಪಿಸುತ್ತ ಬರುವ ತಾಯ್ತಂದೆಗಳ ಧ್ವನಿಯನ್ನು ಅರಿತು ಸಂಜಯನು ಕೈಮುಗಿದು "ದೇವಾ, ತಾಯಿತಂದೆಗಳು ಹುಡುಕುತ್ತ ನಿನ್ನ ಬಳಿಗೇ ಬಂದರು" ಎಂದನು. ಉನ್ನತವಾದ ಬೆಟ್ಟದಂತೆ ತಲೆಯೆತ್ತಿ ನಿಂತಿದ್ದ ದುರ್ಯೋಧನನು ಸಿಡಿಲೆರಗಿದವ ನಂತೆ ತಟ್ಟನೆ ಲಜ್ಜೆಯಿಂದ ತಲೆಯನ್ನು ತಗ್ಗಿಸಿ -

೭೫. ಶತ್ರುರಾಜರನ್ನು ಸಂಹರಿಸಿ, ಮಂಗಳವಾದ್ಯಗಳನ್ನು ಮೊಳಗಿಸುತ್ತ, ತಮ್ಮಂದಿರು, ಮಕ್ಕಳು, ಆಪ್ತರು ಎಲ್ಲರನ್ನೂ ಒಡಗೊಂಡು ಬಂದು ಆನಂದದಿಂದ ಇವರನ್ನು

ಕಂದ ನಿಜಾನುಜರೆಲ್ಲಿದ ।
ರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇ ॥
ನೆಂದು ಮಱುಮಾತುಗುಡುವೆಂ ।
ಕೊಂದರ್ ಕೌಂತೇಯರೆಂದು ಬಿನ್ನೈಸುವೆನೋ ॥೭೬॥

ಶೋಕಂ ಮಿಗೆ ಫಣಿರಾಜಪ ।
ತಾಕಂ ವಿಗಳಿತವಿವೇಕನವಿರಳಬಾಷ್ಪೋ ॥
ದ್ರೇಕಂ ಹಾ ದುಶ್ಶಾಸನ ।
ಹಾ ಕರ್ಣಾ ಎನುತಮಂತೆ ಮೂರ್ಛೆಗೆ ಸಂದಂ ॥೭೭॥

ಅಂತು ಮೂರ್ಛಾಪ್ರಸಂಗನಾದ ಪನ್ನಗಪತಾಕಂಗೆ ಶಿಶಿರೋಪಚಾರಕ್ರಿಯೆಗಳಂ ಮಾಡ್ಪ ಸಂಜಯನಿರವಂ ತತ್ಪರಿಜನಂ ಕಂಡು ಪೇೞೆ ಗಾಂಧಾರಿ ಮನದೊಳಳ್ಕಿ ಬಳ್ಕಿ ನನೆಕೊನೆವೋಗಿ -

ಮೃಗಧರಕುಲಲಕ್ಷ್ಮೀವ ।
ಲ್ಲಿಗೆ ಪೆಱರಾರ್ ನೀನೆ ಮುನ್ನಡರ್ಪೆನಲಿರ್ದಯ್ ॥
ಮಗನೆ ಲಯಕಾಲಭೀಮೋ ।
ರಗನುರಗಪತಾಕ ನಿನ್ನುಮಮಂ ನುಂಗಿದನೇ ॥೭೮॥

ಎಮಗಂಧಯಷ್ಟಿಯಾಗಿ ।
ರ್ದೆ ಮಗನೆ ನೀನುಳ್ಳೊಡೆಲ್ಲಮೊಳವೆಂದಿರೆ ನಿ ॥
ನ್ನುಮನಿರಿಸದೆ ಕುರುವಂಶಾ ।
ನಿಮಿತ್ತರಿಪು ಪಾಶಪಾಣಿ ಸವಿನೋಡಿದನೇ ॥೭೯॥

ಕಾಣುವೆನೆಂದುಕೊಂಡಿದ್ದೆ. ಈಗ ಹೀಗಾಯಿತು. ಎಲಾ ದೈವವೇ, ದುಃಖಿತರಾಗಿ ಶೋಕಪೂರ್ಣರಾಗಿ ಕಣ್ಣೀರು ಕರೆಯುತ್ತಿರುವ ಅವರ ಮುಖವನ್ನು ಕಾಣುವಂತೆ ನೀನು ಮಾಡಿದೆ.

೭೬. "ಕಂದಾ, ನಿನ್ನ ತಮ್ಮಂದಿರೆಲ್ಲಿ" ? ಎಂದು ನನ್ನ ತಾಯಿ ಬಂದು ಕೇಳಿದರೆ ನಾನೇನೆಂದು ಉತ್ತರ ಕೊಡಲಿ? ಕುಂತಿಯ ಮಕ್ಕಳು ಕೊಂದರೆಂದು ಹೇಳಲೆ ?

೭೭. ಶೋಕ ಅಧಿಕವಾಗಿ ದುರ್ಯೋಧನನು ವಿವೇಕಹೀನನಾಗಿ ಧಾರಾಕಾರವಾಗಿ ಕಂಬನಿಗರೆಯುತ್ತ ಹಾ ದುಶ್ಶಾಸನ, ಹಾ ಕರ್ಣಾ ಎನ್ನುತ್ತ ಮೂರ್ಛೆ ಹೋದನು.

ವ॥ ಹೀಗೆ ಎಚ್ಚರ ತಪ್ಪಿದ ದುರ್ಯೋಧನನಿಗೆ ಶೈತ್ಯೋಪಚಾರ ಮಾಡುತ್ತಿರುವ ಸಂಜಯನನ್ನು ಕಂಡು ಪರಿಜನರು ಹೇಳಲಾಗಿ, ಗಾಂಧಾರಿ ಮನಸ್ಸಿನಲ್ಲಿಯೆ ಅಳುಕಿ ನಡುಗುತ್ತ ಮೈಮುಳ್ಳೆದ್ದು -

೭೮. ಸೋಮವಂಶವೆಂಬ ಬಳ್ಳಿಗೆ ಈ ವರೆಗೆ ನೀನೇ ಆಧಾರವಾಗಿದ್ದೆ. ಮಗನೇ, ಪ್ರಳಯಕಾಲದ ಮಹಾಸರ್ಪನಾದ ಭೀಮನು ಉರಗಧ್ವಜನಾದ ನಿನ್ನನ್ನೂ ನುಂಗಿದನೆ ?

೭೯. ಮಗನೇ ಕುರುಡರಾದ ನಮಗೆ ನೀನೇ ಕೈಕೋಲಾಗಿದ್ದೆ. ನೀನೊಬ್ಬನಿದ್ದರೆ ಎಲ್ಲಾ ಇದ್ದಂತೆ ಎಂದುಕೊಂಡಿದ್ದೆವು. ಕುರುವಂಶಕ್ಕೆ ನಿಷ್ಕಾರಣ ಶತ್ರುವಾದ ಯಮನು ನಿನ್ನನ್ನು ಕೂಡ ಸವಿನೋಡಿದನೆ ?

ಗುರುಚರಣಂಗಳ್ಗೆಱಗದೆ ।
ಪರಕೆಯನಾದರದಿನಾಂತುಕೊಳ್ಳದೆ ಮೋನಂ ॥
ಬೆರಸಿರ್ಪುದು ನಿನಗುಚಿತಮೆ ।
ಗುರುವಿನಯಮನೇಕೆ ಮಱೆದೆ ಕುರುಕುಲತಿಲಕಾ ॥೮೦॥

ಮಡಿದೀ ದುಶ್ಶಾಸನನೇಂ ।
ನುಡಿಯಿಸುವನೊ ಕುರುನರೇಂದ್ರ ದುರ್ಮರ್ಷಣನೇಂ ॥
ನುಡಿಯಿಸುವನೊ ದುಷ್ಕರ್ಣಂ ।
ನುಡಿಯಿಸುವನೊ ನೀನುಮುಸಿರದಿರ್ಪುದೆ ಮಗನೇ ॥೮೧॥

ಎಂದು ಗಾಂಧಾರಿ ವಿಪ್ರಲಾಪಂಗೆಯ್ಯೆ ಧೃತರಾಷ್ಟ್ರಂ ಸಕಲರಾಷ್ಟ್ರ ರಾಜ ಕಿರೀಟ ಕೋಟಿತಾಡಿತಚರಣಾರವಿಂದದ್ವಂದ್ವನೆನಿಸಿದ ತನ್ನ ನಂದನನ ಕಾಲ ಮೇಲೆ ಕವಿದು ಬಿಬ್ದು -

ಹಾ ಕುರುಕುಲ ಚೂಡಾಮಣಿ ।
ಹಾ ಕುರುಕುಲಚಕ್ರವರ್ತಿ ಹಾ ಸಕಲಧರಿ ॥
ತ್ರೀಕಾಂತ ನಿನ್ನುಮಂ ಪರ ।
ಲೋಕಕ್ಕಟ್ಟಿದನೆ ಕಾಯ್ದು ಮಾಯ್ದು ವಿಧಾತ್ರಂ ॥೮೨॥

ಭವದೇಕಶೇಷಮಾದುದು ।
ಯುವರಾಜಾದಿಗಳ ಸಾಯೆ ನೀಂ ಕಾದದೆ ಕೌ ॥
ರವನಾಯಕ ನಿಶ್ಶೇಷಂ ।
ಭುವನಮಶೇಷಂ ಬಟಿಕ್ಕೆ ಶೇಷಂಗೆ ಭರಂ ॥೮೩॥

೮೦. ಕುರುಕುಲಕ್ಕೆ ಭೂಷಣನಾದ ಮಗನೆ, (ಇಕೊ ನಾವು ಬಂದಿದ್ದೇವೆ) ಹೆತ್ತ ಹಿರಿಯರ ಪಾದಗಳಿಗೆ ಬಾಗದೆ, ಆದರದಿಂದ ಹರಕೆಯನ್ನು ಸ್ವೀಕರಿಸದೆ ಮೌನವಾಗಿರುವುದು ನಿನಗೆ ಯೋಗ್ಯವೆ ? ಹಿರಿಯರಿಗೆ ವಿನಯ ತೋರಬೇಕೆಂಬುದನ್ನೇಕೆ ಮರೆತೆ ?

೮೧. ಸತ್ತುಹೋದ ದುಶ್ಶಾಸನನೇನು ನಮ್ಮನ್ನು ಮಾತಾಡಿಸುವನೆ ? ದುರ್ಮರ್ಷಣನು ಮಾತಾಡಿಸುವನೆ ? ದುಷ್ಕರ್ಣನು ಮಾತಾಡಿಸುವನೆ ? ಕುರುರಾಜಾ, ಮಗನೇ, ನೀನೂ ಮಾತಾಡದೆ ಇರಬೇಕೆ ?

ವ॥ ಎಂದು ಗಾಂಧಾರಿ ಪ್ರಲಾಪಿಸಲಾಗಿ, ಧೃತರಾಷ್ಟ್ರನು ಸಮಸ್ತರಾಜರಿಂದ ನಮಸ್ಕೃತವಾದ ತನ್ನ ಮಗನ ಕಾಲುಗಳ ಮೇಲೆ ಕುಸಿದು ಬಿದ್ದು -

೮೨. ಹಾ ಕುರುಕುಲ ಶಿರೋಮಣಿಯೆ, ಹಾ ಕುರುವಂಶ ಚಕ್ರವರ್ತಿಯೆ, ಹಾ ಸಮಸ್ತಭೂಮೀಪತಿಯೆ, ದುಷ್ಟ ವಿಧಿ ಕ್ರೋಧದಿಂದ ನಿನ್ನನ್ನು ಪರಲೋಕಕ್ಕೆ ಅಟ್ಟಿದನೆ ?

೮೩. ಯುವರಾಜ (ದುಶ್ಶಾಸನ)ನೇ ಮೊದಲಾದವರೆಲ್ಲ ಸತ್ತು, ನೀನೊಬ್ಬನು

ಎಂದು ಕರುಣಾಕ್ರಂದನಂಗೆಯ್ವ ಗುರುಜನಂಗಳ ಸರಮಂ ಸಂಜಯಂ ಮಾಣಿಸಿ ಕರ್ಣ ದುಶ್ಶಾಸನಾದಿಗಳ ಸಾವಿನೊಳ್ ಶೋಕೋದ್ರೇಕದಿಂ ಮೂರ್ಚ್ಛಾಗತನಾಗಿರ್ದಪನೀಗಳೆ ಚೇತರಿಸುಗುಮನ್ನೆಗಂ ವಿಪ್ರಲಾಪಮನುಪಸಂಹರಿಪುದೆನೆ ಸಮಾಹಿತಾಂತಃಕರಣರುಮಾಗಿ

ಕುರುಕುಲಚೂಡಾಮಣಿ ನಿಜ ।
ಗುರುಗಳ ನಯನಾಂಬು ತಳಿವ ಜಲಮಾಗಿರೆ ತ ॥
ದ್ಗುರುಜನದೀರ್ಘೋಚ್ಛ್ವಾಸಮೆ ।
ಪರಿವೀಜನಮಾಗೆ ಮೂರ್ಛೆಯಿಂದೆೞ್ಚತ್ತಂ ॥೭೪॥

ಅಂತು ಮೂರ್ಛೆಯಿಂದೆೞ್ಚತ್ತು ನಿಜಜನನೀಜನಕರಂ ಕಂಡು ಲಜ್ಜಾಭರದಿಂ ಶಿರಮನಾನತಂ ಮಾಡೆ ಸಂಜಯಂ ಧೃತರಾಷ್ಟ್ರಂಗಂ ಗಾಂಧಾರಿಗಂ ನಿಜತನೂಜನಪ್ಪ ರಾಜರಾಜಂ ಕುರುಕುಲಮಧ್ಯಮಹೀತಳಸಹಕಾರಭೂರುಹಂ ನಿಮಗೆ ವಿನಮಿತ್ತೋತ್ತಮಾಂಗನಾದನವಧರಿಸುವುದು ಎನೆ ತದೀಯವಚನಾಮೃತಸ್ಪರ್ಶನದಿಂದಾನಂದಚಿತ್ತರಾಗಿ ತಡವರಿಸಿಯುಂ ತೆಬ್ಬರಿಸಿಯುಂ ತೆಗೆದಪ್ಪಿಯುಂ ಮನಃಕ್ಷತಶರೀರನಂ ಪರಮಾಶೀರ್ವಚನಶತಸಹಸ್ರಂಗಳಿಂ ಪರಸಿ ಪುನಃಪುನರಾಲಿಂಗನಂ ಗೆಯ್ದು ಕಿೞಿದಾನುಂ ಬೇಗದಿಂ ವಿಗತಪರಿಜನಂಮಾಡಿ –

ಉಳಿದಾಗ (ನಮ್ಮ ವಂಶ) ನಿನ್ನೊಬ್ಬನಲ್ಲಿ ಉಳಿದಿತ್ತು. ಕುರುರಾಜಾ, ನಿನ್ನ ಬಳಿಕ ಸಕಲ ಲೋಕವೂ ಆದಿಶೇಷನಿಗೆ ಭಾರ.

ವ॥ ಹೀಗೆ ಕರುಣಾಜನಕವಾಗಿ ವಿಲಾಪಿಸುವ ಹಿರಿಯರ ಧ್ವನಿಯನ್ನು ತಡೆದು ಸಂಜಯನು ಕರ್ಣ ದುಶ್ಶಾಸನಾದಿಗಳ ಸಾವನ್ನು ನೆನೆದು ಶೋಕವುಕ್ಕಿ (ನಿಮ್ಮ ಮಗನು) ಮೂರ್ಛೆ ಹೋಗಿರುವನು. ಈಗಲೆ ಎಚ್ಚರವಾಗುವನು. ನೀವು ನಿಮ್ಮ ಪ್ರಳಾಪವನ್ನು ನಿಲ್ಲಿಸಿ ಎನ್ನಲಾಗಿ ಅವರಿಬ್ಬರೂ ಮನಸ್ಸಮಾಧಾನ ಹೊಂದಿದರು.

೭೪. ತಾಯ್ತಂದೆಗಳ ಕಣ್ಣೀರೇ ತಳಿವ ನೀರಾಗಿ, ಅವರ ನಿಟ್ಟುಸಿರೇ ಬೀಸಣಿಗೆಯ ಗಾಳಿಯಾಗಿ ಪರಿಣಮಿಸಿ ಅದರಿಂದ ದುರ್ಯೋಧನನು ಮೂರ್ಛೆಯಿಂದ ಎಚ್ಚತ್ತನು.

ವ॥ ಹೀಗೆ ಎಚ್ಚತ್ತು ತನ್ನ ತಾಯಿತಂದೆಗಳನ್ನು ಕಂಡು ನಾಚಿಕೆಯಿಂದ ತನ್ನ ತಲೆಯನ್ನು ತಗ್ಗಿಸಲಾಗಿ, ಸಂಜಯನು ಧೃತರಾಷ್ಟ್ರನಿಗೂ ಗಾಂಧಾರಿಗೂ "ನಿಮ್ಮ ಮಗನಾದ ಚಕ್ರವರ್ತಿ, ಕುರುಕುಲವೆಂಬ ಭೂಮಧ್ಯದಲ್ಲಿರುವ ಮಾಮರದಂತಿರುವ ದುರ್ಯೋಧನನು ನಿಮಗೆ ನಮಸ್ಕಾರ ಮಾಡುತ್ತಿದ್ದಾನೆ. ಚಿತ್ತೈಸಬೇಕು" ಎಂದನು. ಆ ಮಾತು ಮೈಗೆ ಅಮೃತವನ್ನು ಸುರಿದಂತಾಗಿ ಅವರು ತಡವರಿಸುತ್ತ ಮಗನನ್ನು ಸೆಳೆದಪ್ಪಿಕೊಂಡು, ಮನೋವ್ಯಥೆಯಿಂದ ವಿಹ್ವಲನಾದ ಅವನನ್ನು ನೂರಸಾವಿರ ಹರಕೆಗಳಿಂದ ಹರಸಿ, ಮರಮರಳಿ ತಬ್ಬಿಕೊಂಡು, ಸ್ವಲ್ಪ ಕಾಲಾನಂತರ ಪರಿಜನರನ್ನು ಆಚೆಗೆ ಕಳಿಸಿ (ಏಕಾಂತವಾಗಿ) -

ಯಮಸುತನಿಂಬುಕೆಯ್ವನೆಮಗಿನ್ನುಮೊಡಂಬಡು ಕಂದ ಸಂಧಿಯಂ ।
ಸಮಗೊಳಿಸಲ್ಕೆ ಸಂಜಯನನಟ್ಟುವೆ ಭೀಮನೊಳಾದ ಬದ್ಧವೈ ॥
ರಮನುಳಿ ನೋಡದಿರ್ ಸುತಸಹೋದರರದುಃಖಮನೀವುದರ್ಧರಾ ।
ಜ್ಯಮನವರ್ಗೆಂದು [ಕಾಲ್ವಿಡಿದು] ಬೇಡಿದನಂಧನೃ[ಪಂ ಸ್ವಪುತ್ರನಂ] ॥೮೫॥

ಅಂತು ಕುರುನರೇಂದ್ರನನಂಧನರೇಂದ್ರನಭ್ಯರ್ಥಿಸಿ –

ಅರಿಭೂಭೃದ್ಬಲಮಂ ಪಡಲ್ವಡಿಸಿ ಗೆಲ್ದೇಕಾಂಗವೀರಂ ಜಟಾ ।
ಸುರಕಿಮ್ಮೀರಹಿಡಿಂಬಕೀಚಕಜರಾಸಂಧರ್ಕಳಂ ಕೊಂದ ಭೀ ॥
ಕರಶೌರ್ಯಂ ಕಡುಕೆಯ್ದು ನಿನ್ನನುಜರಂ ಕೊಂದಿಕ್ಕಿದಂ ಕೂಡೆ ನೂ ।
ರ್ವರುಮಂ ನಿನ್ನುಮನಿನ್ನದೇಕುಳಿಪುವಂ ಚಾಳುಕ್ಯಕಂಠೀರವಂ ॥೮೬॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯ ಕುಲತಿಲಕಂ ಶ್ರೀಮದಾಹವಮಲ್ಲ ದೇವಶ್ರೀಪಾದಕಲ್ಪಪಾದಪಾಶ್ರಯಾ ಸನ್ನವರ್ತಿ ಕವಿಚಕ್ರವರ್ತಿ ಕವಿರನ್ನವಿರಚಿತಮಪ್ಪ ಶ್ರೀಸಾಹಸಭೀಮವಿಜಯ ದೊಳ್ ಧೃತರಾಷ್ಟ್ರವಚನವ್ಯಾವರ್ಣನಂ ತೃತೀಯಾಶ್ವಾಸಂ ಸಂಪೂರ್ಣಂ ॥

೮೫. ಧರ್ಮರಾಜನು ಇನ್ನೂ ನಮ್ಮ ಮಾತು ಕೇಳುತ್ತಾನೆ. ಕಂದಾ, ಸಂಧಿಗೆ ಒಪ್ಪಿಕೊ. ಸಂಧಿ ಮಾಡಲು ಸಂಜಯನನ್ನು ಕಳಿಸುವೆನು. ಭೀಮನ ಮೇಲಿನ ಬದ್ಧದ್ವೇಷವನ್ನು ಬಿಟ್ಟುಬಿಡು. ಮಕ್ಕಳ ಹಾಗು ತಮ್ಮಂದಿರ ದುಃಖವನ್ನು ನೋಡಬೇಡ. ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟುಬಿಡು ಎಂದು ಆ ಕುರುಡ ತಂದೆ ತನ್ನ ಮಗನನ್ನು ಕಾಲುಹಿಡಿದು ಬೇಡಿಕೊಂಡನು.

ವ॥ ಹೀಗೆ ಕುರುಡರಾಜನು ಕುರುರಾಜನನ್ನು ಬೇಡಿಕೊಂಡು –

೮೬. ಶತ್ರುರಾಜರ ಸೈನ್ಯವನ್ನು ಒಕ್ಕಲಿಕ್ಕಿ ಗೆದ್ದ ಅಸಹಾಯಶೂರನೂ, ಜಟಾಸುರ, ಕಿಮ್ಮೀರ, ಹಿಡಿಂಬ, ಕೀಚಕ, ಜರಾಸಂಧರನ್ನು ಕೊಂದ ಭಯಾನಕ ಶೌರ್ಯಶಾಲಿಯೂ, ಆದ ಭೀಮನು ಕಡುಕೋಪದಿಂದ ನಿನ್ನ ನೂರ್ವರು ತಮ್ಮಂದಿರನ್ನೆಲ್ಲ ಕೊಂದು ಹಾಕಿದನು. ಆತನು ಇನ್ನು ನಿನ್ನನ್ನೇಕೆ ಉಳಿಸುವನು ?

# ಚತುರ್ಥಾಶ್ವಾಸಂ

ಶ್ರೀವನಿತೆಗೆ ನಿಜವಿಜಯ ।
ಶ್ರೀವನಿತೆಯೆ ಸವತಿಯಾಗೆ ರಿಪುನೃಪರಂ ಶೌ ॥
ರ್ಯಾವಷ್ಟಂಭದೆ ಗೆಲ್ದ ಜ ।
ಯಾವಸಥನಸಾಧ್ಯನಲ್ತೆ ಸಾಹಸಭೀಮಂ ॥೧॥

ಆದಱಿನಾತನೊಳಪ್ಪ ಸಮರಾನುಬಂಧಮಂ ಮಾಣ್ಬುದೆನ್ನೆಂಬುದನಿಂಬುಕೆಯ್ವುದೆಂದ ಧೃತರಾಷ್ಟ್ರನ ನುಡಿಯಂ ಗಾಂಧಾರಿ ಸಮಭ್ಯರ್ಥಿಸಿ ತಾನುಂ ಪ್ರಾರ್ಥಿಸಿ -

ಪರಿಣತವಯಪರೆಮಿರ್ಕ ।
ಣ್ಗುರುಡರೆಮೆಮಗಿಂಬುಕೆಯ್ವುದುಚಿತಂ ನಿನ್ನೀ ॥
ಗುರು ನುಡಿದ ನುಡಿಗೊಡಂಬಡು ।
ಗುರುವಚನಮಲಂಘನೀಯಮೆಂಬುದು ಮಗನೇ ॥೨॥

ಸಮರವ್ಯಾಪಾರಂ ಮಾ ।
ಣ್ದು ಮಗನೆ ನಿಜಶಿಬಿರದತ್ತ ಬಿಜಯಂಗೆಯ್ ಸ ॥
ತ್ತ ಮಗಂದಿರ್ ಸತ್ತರ್ ನೀ ।
ನೆಮಗುಳ್ಳೊಡೆ ಸಾಲ್ವುದವರನಿಂ ತಂದಪೆವೇ ॥೩॥

ಎಂದು ಗಾಂಧಾರಿ ತನ್ನ ಮತ್ತಿನ ಮಕ್ಕಳಂ ನೆನೆದು ದುಃಖಂ ಮರುಕೊಳಿಸಿ ದುಃಖಂಗೆಯ್ಕೆ ಸಂಜಯಂ ಜಡಿದು -

೧. ಐಶ್ವರ್ಯಲಕ್ಷ್ಮಿಗೆ ವಿಜಯಲಕ್ಷ್ಮಿ ಸವತಿಯಾಗಿರಲಾಗಿ (ಐಶ್ವರ್ಯ ಹಾಗೂ ಗೆಲುವು ಎರಡಕ್ಕೂ ಒಡೆಯನಾಗಿರಲು) ಕಲಿತನದ ಬಲದಿಂದ ಶತ್ರುರಾಜರನ್ನು ಗೆದ್ದು ಜಯಕ್ಕೆ ನೆಲೆಯಾಗಿರುವ ಸಾಹಸಭೀಮನು ಅಜೇಯನಲ್ಲವೆ ?

ವ॥ ಆದುದರಿಂದ ಅವನೊಡನೆ ಯುದ್ಧ ಮಾಡುವೆನೆಂಬ ಮಾತನ್ನು ಬಿಟ್ಟುಬಿಡು. ನಾನು ಹೇಳುವ ಮಾತಿಗೆ ಒಡಂಬಡು. ಹೀಗೆ ನುಡಿದ ಧೃತರಾಷ್ಟ್ರನ ಮಾತನ್ನು ಅನುಮೋದಿಸಿ ಗಾಂಧಾರಿ ತಾನೂ ಬೇಡಿಕೊಳ್ಳುತ್ತ ಹೀಗೆಂದಳು -

೨. ನಾವಿಬ್ಬರೂ ಹಣ್ಣು ಹಣ್ಣು ಮುದುಕರು ; ಎರಡೂ ಕಣ್ಣಿಲ್ಲದ ಕುರುಡರು. ನಮ್ಮ ಮಾತು ಕೇಳುವುದು ಯೋಗ್ಯ. ನಿನ್ನ ತಂದೆ ಹೇಳಿದುದಕ್ಕೆ ಒಡಂಬಡು, ಮಗನೇ ಹಿರಿಯರ ಮಾತನ್ನು ಮೀರತಕ್ಕುದಲ್ಲ ಎಂದು ಹೇಳುತ್ತಾರೆ.

೩. ಮಗನೆ, ಯುದ್ಧದ ಯೋಚನೆಯನ್ನು ಬಿಟ್ಟು ನಿನ್ನ ಪಾಳೆಯದತ್ತ ನಡೆ. ಸತ್ತ ಮಕ್ಕಳು ಸತ್ತುಹೋದರು. ನೀನೊಬ್ಬನುಳಿದರೆ ನಮಗೆ ಸಾಕು. ಸತ್ತವರನ್ನಿನ್ನು ಮರಳಿ ತರಬಲ್ಲೆವೆ ?

ವ॥ ಹೀಗೆಂದು ಗಾಂಧಾರಿ ತನ್ನ ಇತರ ಮಕ್ಕಳನ್ನು ನೆನೆದು ದುಃಖ ಮರುಕೊಳಿಸಿ ಶೋಕಿಸಲಾಗಿ, ಸಂಜಯನು ಗದರಿ,

ಪ್ರಿಯಸುತನಂ ಬಂದುಂ ಸಂ ।
ತಯಿಸುವುದದುಗೆಟ್ಟು ನೀನೆ ಗಳ ಶೋಕಾಕ್ರಾಂ ॥
ತೆಯುಮಾಗಿ ಶೋಕಿಸಲ್ ಸಂ ।
ತಯಿಸುವರಾರಂಧನೃಪತಿಯಂ ನೃಪತಿಯುಮಂ ॥೪॥

ಎಂಬುದುಂ ವೃದ್ಧರಾಜಂ ಕುರುರಾಜಂಗಭಿಮುಖನಾಗಿ

ವೀರಶತಜನನಿಗೀ ಗಾಂ ।
ಧಾರಿಗೆ ಶತದುಃಖಜನನಿವೆಸರಾಯ್ತೀಗಳ್ ॥
ಕೌರವಪತಿ ದುಃಖಮಹಾ ।
ಭಾರಮನಾಂತಾಯಸಕ್ಕೆ ಗುಱಿಯಾದುದುಱಿಂ ॥೫॥

ಭವದನುಜಕ್ಷಯಮಂ ಧಾ ।
ತ್ರಿವಲ್ಲಭಂ ಕಂಡು ಸಂಧಿಮಾಡಲ್ ಶೋಕಾ ॥
ನಿವಹಂ ಬಗೆವಂ ಧರ್ಮಜ ।
ನವನಾಕೃತಕ ಪ್ರತಿಜ್ಞೆಯಂ ಕೇಳ್ದಱಿಯಾ ॥೬॥

ಸಮರದೊಳದೃಷ್ಟವಶದಿಂ ।
ಸಮವಾಯಂ ಸಾಯೆ ನಾಲ್ವರನುಜರೊಳೊರ್ವಂ ॥
ಯಮಭರನತೀತನಪ್ಪಂ ।
ಯಮನಂದನನದಱಿನಾ ನೃಪಂಗಂ ಜಯಮೇ ॥೭॥

ಎಂದು ನುಡಿದ ನರೇಂದ್ರನ ನುಡಿಗೆ ಸಂಜಯನೊಡಂಬಟ್ಟು -

೪. ನಿನ್ನ ಪ್ರಿಯಕುಮಾರನನ್ನು ಸಮಾಧಾನಪಡಿಸಲು ಬಂದವಳು ನೀನು. ಅದನ್ನು ಬಿಟ್ಟು ನೀನೇ ಶೋಕೋದ್ರೇಕದಿಂದ ದುಃಖಿಸುತ್ತ ನಿಂತರೆ ಅಂಧರಾಜನನ್ನೂ, ದುರ್ಯೋಧನರಾಜನನ್ನೂ ಸಮಾಧಾನಪಡಿಸುವವರು ಯಾರು ?

ವ॥ ಹೀಗೆನ್ನಲಾಗಿ ಧೃತರಾಷ್ಟ್ರನು ಕುರುರಾಜನಿಗೆ ಎದುರಾಗಿ -

೫. ಕುರುರಾಜಾ, ದುಃಖದ ಮಹಾಭಾರವನ್ನು ಹೊರುವ ಆಯಾಸಕ್ಕೆ ಗುರಿಯಾದುದರಿಂದ ನೂರು ಮಕ್ಕಳ ತಾಯಿಯಾಗಿದ್ದ ಗಾಂಧಾರಿಗೆ ಈಗ ನೂರು ದುಃಖಗಳ ತಾಯಿಯೆಂಬ ಹೆಸರಾಯಿತು.

೬. ನಿನ್ನ ತಮ್ಮಂದಿರ ಸಾವನ್ನು ಕಂಡು ಧರ್ಮರಾಜನು ಶೋಕಾಕುಲನಾಗಿ ಸಂಧಿಮಾಡಲು ಬಯಸುತ್ತಾನೆ. ಅವನು ಮಾಡಿದ ಪ್ರತಿಜ್ಞೆಯನ್ನು ನೀನು ಕೇಳಿ ತಿಳಿದಿರುವೆಯಷ್ಟೆ !

೭. ಯುದ್ಧದಲ್ಲಿ ದೈವವಶಾತ್ ತನ್ನ ನಾಲ್ವರು ತಮ್ಮಂದಿರಲ್ಲಿ ಒಬ್ಬನು ಸತ್ತರೂ ಕೂಡ ಧರ್ಮನಿರತನಾದ ಧರ್ಮರಾಜನು ಬದುಕಿ ಉಳಿಯುವವನಲ್ಲ. ಜಯದ ವಿಷಯದಲ್ಲಿ ಅವನಿಗೂ ಸಂದೇಹವಿದ್ದಂತಿದೆ.

ವ॥ ಹೀಗೆಂದ ಧೃತರಾಷ್ಟ್ರನ ಮಾತಿಗೆ ಸಂಜಯನು ಒಪ್ಪಿ -

[ಉಪಪತ್ತಿಯುಕ್ತಮಿದನಿಂ] ।
ನೃಪ ಕಯ್ಕೊಳ್ ನಿನ್ನ ತಂದೆಯೆಂದುದನೆನೆ ಭೂ ॥
ಮಿಪನೆಂದಂ ನಿಮ್ಮಯ ಪೂ ।
ರ್ವಪಕ್ಷಮೆಮಗಾದುದೇ ವಲಂ ಸಿದ್ಧಾಂತಂ ॥೮॥

ತನ್ನೊಡವುಟ್ಟಿದರ್ ಪೆಸರ ನಾಲ್ವರೊಳೊರ್ವರುಮಿಲ್ಲದಿರ್ದೊಡಂ ।
ತನ್ನಸುವಂ ನಿವೇದಿಸುವನಗ್ನಿಗೆ ಧರ್ಮತನೂಜನೆಂದೊಡಾ ॥
ನೆನ್ನೊಡವುಟ್ಟಿದರ್ ಪೆಸರ ನೂರ್ವರೊಳೊರ್ವರುಮಿಲ್ಲ ಬಾಟ್ವೆನೆಂ ।
ಬೆನ್ನಟೆಯಾಸೆಯಂ ಬಿಸು[ಟೆನಿ]ನ್ನವರಾದುದನಾಗದಿರ್ಪೆನೇ ॥೯॥

ಸಾಧಿಸುವೆಂ ಫಲ್ಗುಣನಂ ।
ಸಾಧಿಸುವೆಂ ಪವನಸುತನ ಬಸಿಱಿಂ ಹಾ ಕಾ ॥
ರ್ಣಾ ದುಶ್ಶಾಸನ ತೆಗೆವೆಂ ।
ಸಾಧಿಸಿದಿಂ ಬೞಿಕೆ ಯಮಜನೊಳ್ ಪುದುವಾೞ್ವೆಂ ॥೧೦॥

ಧರೆಯಂ ಪಚ್ಚಾಳ್ದಿರ್ ಪಾಂ ।
ಡುರಾಜನುಂ ನೀನುಮದನೆ ಕೈತವದಿಂದ
ಯ್ವರ ಕೆಯ್ಯೊಳೆೞೆದುಕೊಂಡೀ ।
ಕುರುರಾಜಂ ಮತ್ತಮವರ್ಗೆ ಪುದುವಿತ್ತಪನೇ ॥೧೧॥

೮. ಅರಸನೇ, ಇದು ಯುಕ್ತಿಯುಕ್ತವಾದ ಮಾತು. ನಿನ್ನ ತಂದೆ ಹೇಳಿದುದಕ್ಕೆ ಒಡಂಬಡು ಎಂದನು. ಆಗ ದುರ್ಯೋಧನನು ನೀವು ಈಗ ಮಂಡಿಸಿದ ಪೂರ್ವಪಕ್ಷವೇ ನಮಗೆ ಸಿದ್ಧಾಂತವಾಗುವುದು (ಸಂಧಿಗೆ ಅನುಕೂಲವೆಂದು ನೀವು ಯಾವುದನ್ನು ಹೇಳುತ್ತೀರೋ ಅದೇ ಸಂಧಿ ಕೂಡದೆಂಬ ನನ್ನ ಸಿದ್ಧಾಂತಕ್ಕೆ ಅನುಕೂಲವಾಗುತ್ತದೆ.)

೯. ತನ್ನ ತಮ್ಮಂದಿರು ನಾಲ್ವರಲ್ಲಿ ಒಬ್ಬರು ಸತ್ತರೂ ಧರ್ಮರಾಜನು ತಾನು ಬೆಂಕಿಗೆ ಬಿದ್ದು ಪ್ರಾಣ ಬಿಡುವೆನೆಂದಾದರೆ, ನನ್ನ ತಮ್ಮಂದಿರು ನೂರ್ವರಲ್ಲಿ ಒಬ್ಬನೂ ಉಳಿಯಲಿಲ್ಲ. ನಾನು ಉಳಿಯಬೇಕೆ ? ಬದುಕಿ ಉಳಿಯುವ ಆಸೆಯನ್ನು ಬಿಸಾಡಿದ್ದೇನೆ. ಇನ್ನು ಅವರು ಹೋದ ಹಾದಿಗೇ ನಾನೂ ಹೋಗುವೆನು.

೧೦. ಅರ್ಜುನನನ್ನು ಸೋಲಿಸುವೆನು ; ಭೀಮನನ್ನು ಗೆಲ್ಲುವೆನು. ಅವರಿಬ್ಬರ ಒಡಲಿಂದ ಹಾ ! ಕರ್ಣ ದುಶ್ಶಾಸನರನ್ನು ಹೊರದೆಗೆವೆನು. ಇಷ್ಟು ನೆರವೇರಿದ ಬಳಿಕ ಧರ್ಮರಾಜನೊಡನೆ ಹೊಂದಿಕೊಂಡು ಬಾಳುವೆನು.

೧೧. ಮೊದಲು ನೀನೂ, ಪಾಂಡುರಾಜನೂ ಭೂಮಿಯನ್ನು ಪಾಲುಮಾಡಿ ಕೊಂಡು ಆಳಿದಿರಿ. (ಪಿತ್ರಾರ್ಜಿತವಾಗಿ ಬಂದ) ಆ ಐವರ ರಾಜ್ಯವನ್ನೂ ಮೋಸದಿಂದ ಎಳೆದುಕೊಂಡ ಈ ಕುರುರಾಜನು ಮರಳಿ ಅವರಿಗೆ ಕೊಡುವನೆ ?

ಆಮ್ಮಗನೆನಾಗೆ ಧರ್ಮಜ ।
ನೇಮ್ಮಗನಲ್ಲನೆ ಬಟೆಕ್ಕೆ ನೀಮುಂ ತಾಮುಂ ॥
ನಿಮ್ಮೊಳ್ ನೇರ್ಪಡುಗಿಡದೆ ಸು ।
ಖಮುನ್ನಿನ ತೆಱದೆ ಬಾೞ್ವುದಾಂ ಬೆಸಕೆಯ್ವೆಂ ॥೧೨॥

ಬಡಿಮೆನ್ನನೆಂದು ಮುಂದಿ ।
ರ್ದಡಿಗೆಱಗಿದ ಮಗನನಪ್ಪಿಕೊಂಡಶ್ರುಜಲಂ ॥
ಗುಡುಗುಡನೆ ಸುರಿಯೆ ನಾಲಗೆ ।
ತಡತಡವರೆ ನುಡಿದನಂಧನೃಪನಾ ನೃಪನಂ ॥೧೩॥

ನೀನೆಂತುಮೆಮ್ಮ ಪೇೞ್ವುದಂ ಕಯ್ಕೊಳ್ಳದೆ ವೈರಮನೆ ಕಯ್ಕೊಂಡು ಪಾಂಡುನಂದನರೊಳ್ ಕಾದಿದಲ್ಲದೆ ಸಂಧಿಯನೊಡಂಬಡೆಯಪ್ಪಿನಂ ನೀನೆಮಗಿನಿತನೊಳ್ಳಿಕೆಯ್ಯಲ್ವೇೞ್ವುದು ನೆಗೞ್ವ ಕಜ್ಜಮಾವುದುಮಂ ನಿಮ್ಮಜ್ಜನೊಳಾಲೋಚಿಸಿ ನೆಗೞ್ವುದು ಅಲ್ಲಿಗೆ ಬಿಜಯಂಗೆಯ್ವುದೆನೆ ಮಹಾಪ್ರಸಾದಮೆಂದದನೊಡಂಬಟ್ಟಂತೆಗೆಯ್ವೆನೆಂದು ನಿಜಗುರುಜನಮಂ ಬೀೞ್ಕೊಂಡು ಬೀಡಿಂಗೆ ಪೋಗಲ್ವೇೞ್ದು ಕಿಱಿದು ಪೊೞ್ತು ಶೋಕಾನುಬಂಧದೊಳ್ ಕೋಪಾನುಬಂಧಮುಂ ಸಮರಾನುಬಂಧಮುಮಂತರಿಸಿರ್ದು ಸಂಜಯ ದ್ವಿತೀಯನುಂ ನಿಜಭುಜಗದಾಸಹಾಯನುಮಾಗಿ ಸಂಗ್ರಾಮಭೂಮಿಯೊಳಗನೆ ಬರ್ಪಲ್ಲಿ –

ಉಡಿದಿರ್ದ ಕಯ್ದು ನೆತ್ತರ ।
ಕಡಲೊಳಗಡಿಗಡಿಗೆ ತಳಮನುರ್ಚುತ್ತಿರೆ ಕಾ ॥
ಲಿಡಲೆಡೆವಡೆಯದೆ ಕುರುಪತಿ ।
ದಡಿಗವೆಣಂಗಳನೆ ಮೆಟ್ಟಿ ನಡೆಯುತ್ತಿರ್ದಂ ॥೧೪॥

೧೨. ನಾನು ಮಗನಾದಂತೆ ಧರ್ಮರಾಜನೇನು ನಿಮಗೆ ಮಗನಲ್ಲವೆ ? ನನ್ನ ತರುವಾಯದಲ್ಲಿ ನೀವೂ ಅವರೂ ಒಬ್ಬರಿಗೊಬ್ಬರು ಹೊಂದಿಕೊಂಡು ಮುಂಚಿನಂತೆ ಸುಖವಾಗಿ ಬಾಳಿ. (ಈಗ) ನನಗೆ ಅಪ್ಪಣೆ ಕೊಡಿ.

೧೩. ನನ್ನನ್ನು ಬಿಟ್ಟುಬಿಡಿ ಎಂದು ಮುಂದಿದ್ದವರಿಗೆ ನಮಸ್ಕರಿಸಿದ ಮಗನನ್ನು ತಬ್ಬಿಕೊಂಡು ಕಣ್ಣೀರು ಸುರಿಸುತ್ತಾ, ನಾಲಿಗೆ ತಡವರಿಸುತ್ತ ಧೃತರಾಷ್ಟ್ರನು ಹೀಗೆಂದನು -

ವ॥ ಏನೇ ಆದರೂ ನೀನು ನನ್ನ ಮಾತನ್ನು ಕೇಳದೆ, ವೈರವನ್ನೇ ಸಾಧಿಸುತ್ತ ಪಾಂಡವರೊಡನೆ ಹೋರಾಡುವೆಯಲ್ಲದೆ, ಸಂಧಿಗೆ ಒಪ್ಪುವುದಿಲ್ಲವಾದರೆ, ನೀನು ನಮಗೆ ಇಷ್ಟಾದರೂ ಉಪಕಾರ ಮಾಡು. ಇನ್ನು ನೀನು ಮಾಡಬೇಕಾದುದೇನೇ ಇರಲಿ, ಅಜ್ಜನೊಡನೆ ಆಲೋಚಿಸಿ ಮಾಡು. ಅಲ್ಲಿಗೆ ದಯಮಾಡಿಸು. ಹೀಗೆನ್ನಲಾಗಿ, 'ಹಿರಿಯರ ಅಪ್ಪಣೆಯಂತಾಗಲಿ' ಎಂದು ಒಡಂಬಟ್ಟು ಹಾಗೆಯೆ ಮಾಡುವೆನೆಂದು ತನ್ನ ತಾಯ್ತಂದೆಗಳನ್ನು ಪಾಳೆಯಕ್ಕೆ ಮರಳಲು ಹೇಳಿ, ಸ್ವಲ್ಪ ಹೊತ್ತು ಶೋಕದಲ್ಲಿ ಕೋಪವೂ, ಯುದ್ಧಾಪೇಕ್ಷೆಯೂ ಹಿಮ್ಮೆಟ್ಟಲಾಗಿ, ತನ್ನ ಗದೆಯನ್ನು ಹೆಗಲಿಗೇರಿಸಿಕೊಂಡು ಸಂಜಯನ ಜೊತೆಯಲ್ಲಿ ರಣಭೂಮಿಯೊಳಗೆ ಬರಲಾಗಿ -

೧೪. ನೆತ್ತರ ಕಡಲಲ್ಲಿ ಮುರಿದು ಬಿದ್ದಿದ್ದ ಆಯುಧಗಳು ಹೆಜ್ಜೆಹೆಜ್ಜೆಗೆ

ಆಗಳದಂ ಕಂಡು -

ಪೆಣದಿನಿಗಳ ತಂಡಂ ಬ ।
ಲ್ಪೆಣಗಳನರಸುತ್ತುಮಲ್ಲಿ ಬರೆವರೆ ಸಾರ ॥
ಲ್ಕಣಮೀಯದೆ ತಮ್ಮಾಳ್ದನ ।
ಪೆಣನಂ ಕಾದಿರ್ದರಲ್ಲಿ ಬಿಟ್ಟ ಭಟರ್ಕಳ್ ॥೧೫॥

ಅಂಧನೃಪಸುತನಯೋ ಜಾ ।
ತ್ಯಂಧನಯೋ ಮೆಟ್ಟದಗಲ್ದು ಪೋಗೆನುತುಂ ಕೋ ॥
ಪಾಂಧರ್ ಜಡಿದರ್ ಪತಿಯ ಕ ।
ಬಂಧಮನೆಡಗಲಿಸಿ ಪೋಪ ದುರ್ಯೋಧನನಂ ॥೧೬॥

ಹಲಚಕ್ರಾಂಕುಶರೇಖಾ ।
ವಿಲಸಿತಪದತಳಕೆ ಮಾಡೆ ಪುನರುಕ್ತತೆಯಂ ॥
ಹಲಚಕ್ರಾಂಕುಶಮಾ ಕುರು ।
ಕುಲಜಂ ಕುಸಿಕುಸಿದು ಮೆಲ್ಲಮೆಲ್ಲನೆ ನಡೆದಂ ॥೧೭॥

ಆಗಳದಂ ಕಂಡು ಸಂಜಯಂ ಗಳಗಳನೆ ಕಣ್ಣೀರಂ ನೆರಪಿ ಮನ್ಯೂದ್ಗತ ಕಂಠನುಮಾಗಿ -

ಅಂಗಾಲುಗಳನ್ನು ಚುಚ್ಚುತ್ತಿರಲಾಗಿ ಕಾಲಿಡುವುದಕ್ಕೂ ನೆಲೆಗಾಣದೆ ಕುರುರಾಜನು ತೋರವಾದ ಹೆಣಗಳ ಮೇಲೆಯೇ ಕಾಲಿಟ್ಟು ನಡೆಯುತ್ತಿದ್ದನು.

ವ॥ ಆಗ ಅದನ್ನು ಕಂಡು -

೧೫. ಪಿಶಾಚಿಗಳ ಹಿಂಡು ದೊಡ್ಡ ಹೆಣಗಳನ್ನು ಹುಡುಕುತ್ತಾ ಅಲ್ಲಿಗೆ ಬರಲಾಗಿ, ಅವುಗಳನ್ನು ಸನಿಯಕ್ಕೆ ಬರಗೊಡದೆ, ಅಲ್ಲಿ ಬಿದ್ದ ಸೈನಿಕರು ತಂತಮ್ಮ ಒಡೆಯನ ಹೆಣವನ್ನು ಕಾಯುತ್ತಿದ್ದರು.

೧೬. ನೀನೇನು ಕುರುಡನ ಮಗನಷ್ಟೆ ಆಗಿರುವೆಯೊ ಕುರುಡನಾಗಿಯೆ ಹುಟ್ಟಿದೆಯೋ? ಇಲ್ಲಿ ಕಾಲಿಡಬೇಡ ; ಆಚೆಗೆ ಹೋಗು ಎಂದು ಆ ಭಟರು ತಮ್ಮ ಒಡೆಯನ ಹೆಣದ ಪಕ್ಕದಲ್ಲಿ ಹೋಗುವ ದುರ್ಯೋಧನನನ್ನು ಗದರಿದರು.

೧೭. (ರಣಭೂಮಿಯಲ್ಲಿ ಬಿದ್ದಿದ್ದ) ನೇಗಿಲು, ಚಕ್ರ, ಅಂಕುಶ ಮೊದಲಾದ ಆಯುಧಗಳು ಅಂಗಾಲಿಗೆ ಚುಚ್ಚಿ ಅಲ್ಲಿ ಮೊದಲೇ ಇದ್ದ ಹಲಚಕ್ರಾದಿ ರಾಜಚಿಹ್ನೆಗಳನ್ನು ಇಮ್ಮಡಿಸಲಾಗಿ, ಕುರುರಾಜನು ನೋವಿನಿಂದ ಕುಸಿಕುಸಿದು ಮೆಲ್ಲ ಮೆಲ್ಲನೆ ನಡೆದನು.

ವ॥ ಆಗ ಅದನ್ನು ನೋಡಿ ಸಂಜಯನು ಗಳಗಳನೆ ಕಂಬನಿಗರೆದು, ದುಃಖದಿಂದ ಕಂಠ ಬಿಗಿದು ಬಂದು -

ವಿನುತವಿರೋಧಿಮಂಡಳಿಕಮೌಳಿವಿರಾಜಿತಪಾದಪೀಠಕಾಂ !
ಚನಕಮಳಾಯಮಾನಮಿವು ನಿಮ್ಮಯ ಮೆಲ್ಲಡಿ ಭಿಂಡಿವಾಳದಂ ॥
ಬಿನ ಕರವಾಳ ಕಕ್ಕಡೆಯ ಕೊಂತದ ಧಾರೆಗಳುರ್ಚೆ ಸಂಯುಗಾ ।
ವನಿತಳದೊಳ್ ವಿಧಾತ್ರವಶದಿಂ ನಿಮಗಂ ನಡೆವಂತುಟಾದುದೇ ॥೧೮॥

ಎಂದು ಗಳಗಳನೆ ಕಣ್ಣೀರಂ ನೆರಪುವ ಸಂಜಯನನಭಿಮಾನಧನಂ ಮಾಣಿಸಿ -

ತನುಜಾನುಜರ ವಿಯೋಗದ ।
ಮನಃಕ್ಷತಂ ನೋಯಿಸಲ್ಕೆ ನೆಱೆಯದೆ ಸಮರಾ ॥
ವನಿಜಾತಂ ಚರಣಕ್ಷತ ।
ಮಿನಿಸುಂ ನೋಯಿಕುಮೆ ವಜ್ರಮನನಪ್ಪೆನ್ನಂ ॥೧೯॥

ಎಂದು ಕುರುಕುಲಾವಷ್ಟಂಭಂ ಧೈರ್ಯಾವಷ್ಟಂಭನಾಗಿ ಬರುತ್ತಂ -

ಮೊನೆಯೊಳಿದಿರ್ಚಿ ಸತ್ತ ಭಟನಂ ಗಜದೃಷ್ಟಿಯೊಳಣ್ಮಿ ಸತ್ತ ಬೀ ।
ರನನದಟಿಂ ಸಹಸ್ರಭಟರಂ ರಣದೊಳ್ ಪೊಣರ್ದಿಕ್ಕಿ ಸತ್ತ ಗಂ ॥
ಡನನಱಸುತ್ತೆ ಬರ್ಪ ಸುರಸುಂದರಿಯರ್ಕಳನೀಕ್ಷಿಸುತ್ತುಮೊ ।
ಯ್ಯನೆ ನಡೆದಂ ಪರಾಕ್ರಮನಿಕೇತನನಾ ಫಣಿರಾಜಕೇತನಂ ॥೨೦॥

೧೮. ಶತ್ರುಮಾಂಡಲಿಕರ ಕಿರೀಟಗಳು ಬಾಗಿ ಬಡಿಯುತ್ತಿರುವ ಸಿಂಹಾಸನದ ಪಾದಪೀಠದ ಮೇಲೆ ಕಮಲಗಳಂತೆ ಶೋಭಿಸುವ ನಿಮ್ಮ ಮೃದು ಪಾದಗಳಿವು, ಈಗ ಭಿಂಡಿವಾಳ, ಬಾಣ, ಖಡ್ಗ, ಕಕ್ಕಡೆ ಮೊದಲಾದ ಆಯುಧಗಳ ಅಲಗುಗಳಿಂದ ಚುಚ್ಚಿಸಿ ಕೊಳ್ಳುತ್ತ ರಣಭೂಮಿಯಲ್ಲಿ ನಡೆಯುವಂತಾಯಿತೆ? ನಿಮಗೆ ಈ ಸ್ಥಿತಿ ಬಂದಿತೆ?

ವ॥ ಹೀಗೆಂದು ಗಳಗಳ ಅಳುವ ಸಂಜಯನನ್ನು ಅಭಿಮಾನಿಶಾಲಿಯಾದ ದುರ್ಯೋಧನನು (ಹಾಗೆ ಅಳಬೇಡವೆಂದು) ಬಿಡಿಸಿ -

೧೯. ಮಕ್ಕಳ ಹಾಗೂ ತಮ್ಮಂದಿರ ಮರಣದಿಂದಾದ ಮನೋವ್ಯಥೆಗೇ ನನ್ನನ್ನು ನೋಯಿಸಲಾಗಲಿಲ್ಲ. ಇಂತಹ ವಜ್ರದ ಮನಸ್ಸುಳ್ಳ ನನ್ನನ್ನು ರಣಭೂಮಿಯಲ್ಲಾದ ಈ ಕಾಲಿನ ಗಾಯಗಳು ನೋಯಿಸುವುದುಂಟೆ ?

ವ॥ ಎಂದು ಕುರುಕುಲಭೂಷಣನು ಧೈರ್ಯದಿಂದ ಬರುತ್ತ -

೨೦. ಯುದ್ಧರಂಗದಲ್ಲಿ (ಶತ್ರುಗಳನ್ನು) ಎದುರಿಸಿ ಸತ್ತ ಯೋಧನನ್ನು, ಆನೆಯ ಎದುರು ಹೋರಾಡಿ ಸತ್ತ ವೀರನನ್ನು, ಸಾವಿರ ಬಂಟರನ್ನು ಕಾಳಗದಲ್ಲಿ ಕೊಂದು ಸತ್ತ ಕಲಿಯನ್ನು ಹುಡುಕಿಕೊಂಡು ಬರುವ ದೇವಲೋಕದ ಸುಂದರಿಯರನ್ನು ನೋಡುತ್ತ ಪರಾಕ್ರಮಕ್ಕೆ ನೆಲೆಯಾದ ದುರ್ಯೋಧನನು ಮೆಲ್ಲಗೆ ನಡೆದನು.

ಇರೆ ಬೆಸುಗೆಯೊಳಗೆ ಮೂವ ।
ತ್ತೆರಡಾಯುಧವಲ್ಲಿ ಬಿಟ್ಟ ಭಟರಂ ವಿದ್ಯಾ ॥
ಧರಕರಣದಿನುಯ್ವೆಡೆಯೊಳ್ ।
ಸುರೇಂದ್ರವಧು ಪೋಲ್ತ [ಳೈ]ಂದ್ರಜಾಲಿ[ಕ] ವಧುವಂ ॥೨೧॥

ಅರುಣಜಲಾವಲಿಪ್ತ ಪೊಸಗುಂಕುವದಂತಿರೆ ಕರ್ಣಲಗ್ನತೋ ।
ಮರಮವತಂಸದಂತಿರೆ ನವಕ್ಷತರಾಜಿ ವಿಭೂಷಣಾಳಿಯಂ ॥
ತಿರೆ ಮಿದುಳುಣ್ಮೆ ಪುಷ್ಪಕೃತಶೇಖರದಂತಿರೆ ಕೊಂಡುಪೋದರ ।
ಪ್ಸರಸಿಯರಣ್ಮಿ ಸತ್ತ ಭಟರಂ ಕೊನೆಮೀಸೆಯ ಚೆನ್ನಪೊಂಗರಂ ॥೨೨॥

ಅಂತದಂ ನೋಡುತ್ತುಂ ಬರೆವರೆ -

ಶೃಂಗಾರಮೆಸೆಯೆ ತರಳಾ ।
ಪಾಂಗದೆ ನಡೆನೋಡಿ ವೀರಭಟರಂ ತಮ್ಮು ॥
ತ್ಸಂಗದೊಳಿಟ್ಟುಯ್ವು ನಿಳಿಂ
ಪಾಂಗನೆಯರನಂದು ನೋಡಿದಂ ಕುರುರಾಜಂ ॥೨೩॥

ಆಗಳ್ ಸಂಜಯನರಸನ ಚಿತ್ತವೃತ್ತಿಯನಱಿದು -

ಬಿಡದುತ್ಸಾಹಂ ಬೀರಮ ।
ನೊಡಱಿಸಿ ತಱಿಸಂದು ಚಲಕೆ ಬಿಡದಿಱಿದು ನೆಲಂ ॥
ಬಿಡದಣ್ಮಿ ತಮ್ಮ ಮುಂದಿ
ರ್ದಡಿಯಂ ಪೆಱಗಿಡದೆ ಸತ್ತರಿಲ್ಲಿ ಭಟಕರ್ಕಳ್ ॥೨೪॥

೨೧. ಮೂವತ್ತೆರಡು ಬಗೆಯ ಆಯುಧಗಳೊಡನೆ ಬೆಸುಗೆ ಹೊಂದಿದಂತ (ನಟ್ಟ ಆಯುಧ ಸಹಿತವಾಗಿ) ಬಿದ್ದ ಯೋಧರನ್ನು ಆಕಾಶಗಮನವಿದ್ಯೆಯಿಂದ ಎತ್ತಿಕೊಂಡು ಹೋಗುವ ದೇವಕನ್ಯೆಯು ಇಂದ್ರಜಾಲದ ಕನ್ಯೆಯಂತೆ ಕಂಡಳು.

೨೨. ಮೆತ್ತಿಕೊಂಡ ನೆತ್ತರು ಹೊಸ ಕುಂಕುಮದಂತೆ, ಕಿವಿಯಲ್ಲಿ ನಟ್ಟ ಬಾಣಗಳು ಕರ್ಣಭೂಷಣದಂತೆ, ಮೈಮೇಲಿನ ಗಾಯಗಳು ಹೊಳೆಯುವ ಆಭರಣಗಳಂತೆ, ಹೊರಬಿದ್ದ ಮಿದುಳು ಹೂವಿನ ಕಿರೀಟದಂತೆ ತೋರುತ್ತಿರಲಾಗಿ ಹೋರಾಡುತ್ತ ಸತ್ತು ಬಿದ್ದ ಹುರಿಮೀಸೆಯ ಚೆಲುವ ವೀರರನ್ನು ಅಪ್ಸರೆಯರು ಎತ್ತಿಕೊಂಡು ಹೋದರು.

ವ॥ ಹೀಗೆ ಅದನ್ನು ನೋಡುತ್ತ ಬರಲಾಗಿ -

೨೩. ಶೃಂಗಾರರಸವನ್ನು ಸೂಸುವ ತಮ್ಮ ಚಂಚಲವಾದ ಕುಡಿಗಣ್ಣುಗಳಿಂದ ನೋಡುತ್ತ ವೀರಯೋಧರನ್ನು ತಮ್ಮ ತೊಡೆಯೇರಿಸಿಕೊಂಡು ಕರೆದೊಯ್ಯುವ ದೇವಸ್ತ್ರೀಯರನ್ನು ಕುರುರಾಜನು ನೋಡಿದನು.

ವ॥ ಆಗ ಸಂಜಯನು ಅರಸನ ಮನೋಭಾವವನ್ನು ಅರಿತು (ಹೀಗೆ ನುಡಿದನು)-

೨೪. ತಗ್ಗದ ಉತ್ಸಾಹದಿಂದ ಶೌರ್ಯ ಹುರಿಯೇರಿ, ನಿರ್ಧಾರ ಭಾವದಿಂದ

ಪರಿದ ತಲೆ ಬಿಟ್ಟ ಬಾಯ್ ನಸು ।
ಮುರಿದ ಕೊರಲ್ ಮುಗುಳ್ದ ಕಣ್ಗಳಾರುಣಜಲದಿಂ ॥
ಪೊರೆದ ತನುವೆರಸು ಬೀಭ ।
ತ್ಸರಸಮನಭಿನಯಿಸುತಿರ್ದರಿಲ್ಲಿ ಭಟರ್ಕಳ್ ॥೨೫॥

ಕವಲಂಬು ತನ್ನ ಸಾರಿ ।
ರ್ದವನಂ ಕೊಳೆ ನೆತ್ತರುಣ್ಮೆ ತಾಂ ನೊಂದೆನೆಗೆ ॥
ತ್ತವಧರಿಸದೆ ಮೂರ್ಛೆಯೊಳಂ ।
ದವನುಂ ಕೆಡದಂತು ಪಡೆಗೆ ಪಡೆದಂ ನಗೆಯಂ ॥೨೬॥

ಅಱೆಪಿದುದು ರೌದ್ರರಸಮಂ ।
ನಿಱೆಸಿದ ಕುಡುವುರ್ವು ಕರ್ಚಿದೌಡುರ್ಚಿದ ಬಾಳ್ ॥
ಇಱೆಯಲನುಗೆಯ್ದ ಕಯ್ ಬೆ ।
ಳ್ಕುಱೆ ಬಿಚ್ಚನೆ ಬಿಟ್ಟ ಕಣ್ಗಳಾರೋಹಕರಾ ॥೨೭॥

ಬೆರಲಂ ಕರ್ಚುವ ಪುತ್ತಂ ।
ಪರಿದೇಱುವ ಕಯ್ದುವಿರಿಸಿ ಪೊಡೆಮಡುವ ಭಯ ॥
ಜ್ವರದಿಂ ನಡುಗು ವಭೀರುಗ ।
ಳರೆಬರ್ ಕನ್ನಡಿಸಿದರ್ ಭಯಾನಕರಸಮಂ ॥೨೮॥

ಛಲವನ್ನು ಮರೆಯದೆ ಹೋರಾಡಿ, ನೆಲವನ್ನು ಬಿಡದೆ, ಮುಂದಿಟ್ಟ ಅಡಿಯನ್ನು ಹಿಂದಕ್ಕೆ ತೆಗೆಯದೆ ಬಂಟರು ಇಲ್ಲಿ ಮರಣ ಹೊಂದಿದರು.

೨೫. ಕೆದರಿದ ತಲೆ, ತೆರೆದ ಬಾಯಿ, ಕೊಂಚ ಹೊರಳಿದ ಕತ್ತು, ಅರಳಿದ ಕಣ್ಣು, ನೆತ್ತರು ಮುಸುಕಿದ ದೇಹ - ಇವುಗಳಿಂದ ಇಲ್ಲಿ ಯೋಧರು ಬೀಭತ್ಸ ರಸವನ್ನು ಅಭಿನಯಿಸಿದರು.

೨೬. ವೈರಿಯು ಪ್ರಯೋಗಿಸಿದ ಅರ್ಧಚಂದ್ರಾಕೃತಿಯಲಗಿನ ಬಾಣವು ತನ್ನ ಪಕ್ಕದಲ್ಲಿರುವವನಿಗೆ ತಾಗಿ ನೆತ್ತರು ಚಿಮ್ಮಲಾಗಿ, ಅದನ್ನು ಕಂಡು ತನಗೇ ನೋವಾಯಿತೆಂದು ಭ್ರಮಿಸಿ, ನಿಜಸ್ಥಿತಿಯನ್ನು ವಿಚಾರಿಸದೆ ತಾನೂ ಅವನೊಡನೆ ಎಚ್ಚರು ತಪ್ಪಿ ಬಿದ್ದು (ಶತ್ರುವೊಬ್ಬನು) ಸೈನಿಕರಿಗೆ ನಗೆ ಹುಟ್ಟಿಸಿದನು.

೨೭. ಗಂಟಿಕ್ಕಿದ ಹುಬ್ಬು, ಕಚ್ಚಿದ ಅವುಡು, ಚುಚ್ಚಿದ ಕತ್ತಿ, ಹೊಡೆಯಲೆಂದು ಎತ್ತಿದ ಕೈ, ಬೆರಗಿನಿಂದ ಬಿಟ್ಟ ಕಣ್ಣು - ಇವುಗಳಿಂದ ಕುದುರೆ ಸವಾರರು ರೌದ್ರರಸವನ್ನು ತೋರಿದರು.

೨೮. ಬೆರಳನ್ನು ಕಚ್ಚುವ, ಓಡಿಹೋಗಿ ಹುತ್ತನ್ನೇರಿ ನಿಲ್ಲುವ, ಆಯುಧಗಳನ್ನು ಚೆಲ್ಲಿಬಿಟ್ಟು ನಮಸ್ಕರಿಸುವ, ಭಯದಿಂದ ನಡುಗುವ ಪುಕ್ಕಲು ಸೈನಿಕರು ಭಯಾನಕರಸವನ್ನು ತೋರ್ಪಡಿಸಿದರು.

ನಿರರ್ಥನಿರಹಂಕಾರಂ ।
ನಿರಾಯುಧಂ ದೀನವದನದಿಂದಳ್ಕಿದರಂ ॥
ಕರುಣಿಸಿ ಕಳಿಪಿದರಿಱಿಯದೆ ।
ಪರಾಙ್ಮುಖಸ್ಥಿತರನಿಲ್ಲಿ ಕಡುಮುಳಿದಾಳ್ಗಳ್ ॥೨೯॥

ಕುದುರೆಗಳನೊಂದೆ ಪೊಯ್ಲಿಂ ।
ಮದಕರಿಗಳನೆರಡೆ ಪೊಯ್ಲೊಳಿರ್ಕಡಿ ಮಾಡ ॥
ಲ್ಕದೆ ಖಡ್ಗಧರರ ಭುಜಬಲ ।
ಮದೇಂ ನಿಮಿರ್ಚಿದುದೊ ರಣದೊಳದ್ಭುತರಸಮಂ ॥೩೦॥

ಕರಮಿಱಿದು ನೊಂದು ಕಯ್ದುಗೆ ।
ಕರಮಂ ತರಲಾರದಿಷ್ಟದೈವದ ಚರಣ ॥
ಸ್ಮರಣಪರಿಣತನಿಜಾಂತಃ ।
ಕರಣಂ ನಿಲೆ ನಿಂದುದವರ್ಗಳೊಳ್ ಶಾಂತರಸಂ ॥೩೧॥

ಎಂದು ಸಂಜಯನರಸಂಗೆ ನವರಸಮಂ ಅಭಿನವರಸಂಮಾಡಿ ತೋಱುತ್ತುಂ ಬರೆವರೆ –

ಶರವರ್ಷಸುಭಟಗರ್ಜಿತ ।
ಕರಾಳಸಂಘಟ್ಟಜನಿತದಹನಶಿಖಾಭಾ ॥
ಸುರವಿದ್ಯುದ್ದೀಪ್ತಿಭಯಂ ।
ಕರಮಾದುದು ಕಾರ ದುರ್ದಿನಂ ರಣರಂಗಂ ॥೩೨॥

೨೯. ನಿರುಪಯುಕ್ತರೂ (?), ಅಹಂಕಾರವಿಲ್ಲದವರೂ, ಆಯುಧಹೀನರೂ, ಅಂಜಿಕೊಂಡು ದೀನರಾದವರೂ ಬೆನ್ನು ತಿರುಗಿಸಿ ನಿಂತವರೂ ಆದ ಶತ್ರುಗಳನ್ನು ಕಂಡು ಕ್ರುದ್ಧರಾದ ಬಂಟರು ನೋಯಿಸದೆ, ಕರುಣೆಯಿಂದ ಕಳಿಸಿಕೊಟ್ಟರು.

೩೦. ಕುದುರೆಗಳನ್ನು ಒಂದೇ ಏಟಿನಿಂದಲೂ, ಮದಿಸಿದ ಆನೆಗಳನ್ನು ಎರಡೇ ಏಟುಗಳಿಂದಲೂ ಎರಡು ಹೋಳಾಗಿ ಸೀಳುತ್ತಿದ್ದ ಖಡ್ಗ ವೀರರ ತೋಳ್ಬಲವು ರಣರಂಗದಲ್ಲಿ ಅದ್ಭುತರಸವನ್ನು ಬಿತ್ತರಿಸಿತು.

೩೧. ಅತ್ಯಧಿಕವಾಗಿ ಯುದ್ಧಮಾಡಿ (ಆ ಹಿಂಸೆಗೆ) ನೊಂದುಕೊಂಡು, ಇನ್ನು ಆಯುಧಕ್ಕೆ ಕೈನೀಡಲಾರದೆ ಇಷ್ಟದೈವದ ಪಾದಸ್ಮರಣೆಯಲ್ಲಿ ಮನಸ್ಸನ್ನು ತೊಡಗಿಸಿದವರಲ್ಲಿ ಶಾಂತರಸವು ನೆಲಸಿತು.

ವ॥ ಹೀಗೆ ಸಂಜಯನು ಅರಸನಿಗೆ ಒಂಬತ್ತು ರಸಗಳನ್ನು ಹೊಸ ರಸವಾಗಿ ತೋರುತ್ತಾ ಬಂದನು.

೩೨. ಬಾಣಗಳ ಮಳೆಯಿಂದಲೂ, ಯೋಧರ ಗರ್ಜನೆಯಿಂದಲೂ, (ಆಯುಧಗಳ) ಪ್ರಚಂಡವಾದ ಸಂಘಟ್ಟನೆಯಿಂದ ಹುಟ್ಟಿದ ಬೆಂಕಿಯ ನಾಲಗೆಗಳೆಂಬ ಮಿಂಚಿನಿಂದಲೂ ಯುದ್ಧರಂಗವು ಮಳೆಗಾಲದ ದಿನದಂತೆ ಭಯಾನಕವಾಗಿತ್ತು.

ಕೃತವಿದ್ಯರ ಭೀಕರಶರ ।
ತತಿ ಮೊಳೆ ತೇವಂತೆ ಸಮೆದು ಬಿಟಿ ಸಂಗರದೊಳ್ ॥
ಗತಿಗಂತುಟು ಧರ್ಮಗುಣ ।
ಚ್ಯುತದಿನಧೋಗತಿಗೆ ಬೀೞ್ದುದೊಂದಚ್ಚರಿಯೇ ॥೩೩॥

ಪರಿಕಲಿತಶಿಳೀಮುಖವಾ ।
ನರಚಿಹ್ನಂ ಪತ್ರಿಕುಲಚರಿತ್ರಂ ರಿಪುಭೀ ॥
ಕರಮೆನಿಪಂತಕಕೃತನವ ।
ತರುವಿರ್ಪಂತಿರ್ದುದಲ್ಲಿ ಗಾಂಡಿವಿಯ ರಥಂ ॥೩೪॥

ಕಮನೀಯಕೇತುನಕ್ಷ ।
ತ್ರಮಾಲಿಕಾರುಚಿರಮೆನೆ ಸುಭೂಷಣಘಂಟಾ ॥
ರಮಣೀಯಮೆನಿಸಿ ಪವಮಾ ।
ನಮಾರ್ಗನಿಭಮಿರ್ದುದಲ್ಲಿ ಭಗದತ್ತೇಭಂ ॥೩೫॥

ತುಂಗರಿಪುದಂತಿದಂತಾ ।
ಲಿಂಗನಮುಂ ದಿವಿಜಸುಂದರೀತುಂಗಕುಚಾ ॥
ಲಿಂಗನಮುಮೊಡನೆ ವೀರಭ ।
ಟಂಗಾದುದು ರಣದೊಳಣ್ಮಿದಂಗರಿದುಂಟೇ ॥೩೬॥

೩೩. ಧನುರ್ವಿದ್ಯಾನಿಪುಣರ ಭಯಾನಕವಾದ ಬಾಣಗಳು ರಾಶಿರಾಶಿಯಾಗಿ ಬಂದು, ತೇದು ಬಿಸಾಕಿದ ಮೊಳೆಗಳಂತೆ ಸಮರಭೂಮಿಯಲ್ಲಿ ಬಿದ್ದುಕೊಂಡುವು. ಧರ್ಮಗುಣದಿಂದ (೧. ಧರ್ಮದಿಂದಲೂ, ಸದ್ಗುಣದಿಂದಲೂ, ೨. ಬಿಲ್ಲಿನ ಹೆದೆಯಿಂದಲೂ) ಚ್ಯುತವಾದ ಮೇಲೆ ಅಧೋಗತಿಗೆ ಬಂದು ಬೀಳುವುದೇನು ಸೋಜಿಗವೇ?

೩೪. 'ಶಿಳೀಮುಖ' (೧. ಬಾಣ, ೨. ಭೃಂಗ)ಗಳಿಂದ ಆವೃತವಾಗಿ, 'ವಾನರ ಚಿಹ್ನ' (೧. ಆಂಜನೇಯನ ಚಿಹ್ನವುಳ್ಳುದು. ೨. ಕಪಿಗಳಿಂದಾದ ಚಿಹ್ನೆಗಳುಳ್ಳುದು) ಆಗಿ, 'ಪತ್ರಿಕುಲ ಚರಿತ್ರ' (೧. ರಥಗಳ ಸಮೂಹದಲ್ಲಿ ಸಾಗುವಂತಹುದು. ೨. ಪಕ್ಷಿಗಳ ಸಮೂಹವನ್ನು ಉಳ್ಳುದು) ಆಗಿ, ಶತ್ರುಗಳಿಗೆ ಭಯಾನಕವಾದ ಅರ್ಜುನನ ರಥವು ಯಮರಾಜನು ನಿರ್ಮಿಸಿದ ಹೊಸದೊಂದು ಮರದಂತೆ ಇದ್ದಿತು.

೩೫. ಕಂಗೊಳಿಸುವ 'ಕೇತು' (೧. ಧ್ವಜ, ೨. ಉಲ್ಕೆ) ಹಾಗು 'ನಕ್ಷತ್ರ ಮಾಲಿಕೆ' (೧. ಮುತ್ತುಗಳಿಂದ ಮಾಡಿದ ಕಂಠಹಾರ. ೨. ನಕ್ಷತ್ರಗಳ ಸಮೂಹ)ಗಳಿಂದ ಆಕಾಶದಂತೆ ತೋರುವ ಭಗದತ್ತನಾನೆಯ ಅಲಂಕಾರಗಳಿಂದಲೂ, ಘಂಟೆಗಳಿಂದಲೂ ರಮ್ಯವಾಗಿತ್ತು.

೩೬. ಶತ್ರುಗಳ ಆನೆಗಳನ್ನು ಎದುರಿಸಿ, ಅವುಗಳ ತೀಕ್ಷ್ಣವಾದ ಕೋರೆಗಳ ಆಲಿಂಗನವೂ, ದೇವಕನ್ಯೆಯರ ತೋರ ಮೊಲೆಗಳ ಆಲಿಂಗನವೂ ವೀರ ಯೋಧನಿಗೆ ಏಕಕಾಲಕ್ಕೆ ಉಂಟಾದವು. ಯುದ್ಧದಲ್ಲಿ ಪರಾಕ್ರಮಿಗಳಿಗೆ ಅಸಾಧ್ಯವೆಂಬುದುಂಟೇ?

ಕರಿಗಳ ಸಂಘಟ್ಟದಿನೊಗೆ ।
ವುರಿಗಳ ಬಕ್ಕಡಗಳರಿಯ ಬಕ್ಕಡಗಳ್ ಜೋ ॥
ದರ ಬಾಣಮಗ್ನಿಬಾಣಂ ।
ಕರಚಕ್ರತಮೋರಿಚಕ್ರಮೆನಿಸಿದುದೆನಸುಂ ॥೩೭॥

ಎಂದಿಂತು ತೋಜೆ ನುಡಿಯೆ ಸವ್ಯಾಪಸವ್ಯಸಂಮಿಶ್ರಿತನಿಶಿತನಾರಾಚಪರಂಪರಾಭಿಸಂಘಟ್ಟಿತಪ್ರಚಂಡಶುಂಡಾಲಮಂಡಲಮಸ್ತಕಪಿಂಡಮೂಲ ವಿವಿಧ ದಾರುಣಾರುಣಸಲಿಲಸಂವರ್ಧಿತ ಸಹಸ್ರಮುಖಪ್ರಸಾರಿತಸರಸ್ವತೀ ಸರಿತ್ಪ್ರವಾಹನಿವಹಭಯಾನಕಮುಂ ಸಮರಸಹಸ್ರಾರಿಮುಖಭೀಕರಗದಾಪರಿಘಸಂಘಾತಸಂಚೂರ್ಣಿತಸಕಲಮುಕುಟಬದ್ಧಮಣಿಗಣಮರೀಚಿಮಂಜರೀವಿರಚಿತ ಸುರಶರಾಸನಸಹಸ್ರ ಸಂಛಾದಿತಗಗನಮಂಡಲಮುಂ ಉಭಯ ಬಲಸುಭಟಕೋಟಿಪರಸ್ಪರಾಭಿನಿಘರ್ಷಣಸಂಘಟ್ಟನವಿಸ್ಫೂರಿತವಿಸ್ಫುಲಿಂಗನಿಚಯಚಕಚಕಿತ ನಿಖಿಳದಿಙ್ಮಂಡಲಮುಂ ಅಖಿಲಕರಿತುರಗರಥಭಟಬಲ ಕಬಂಧನರ್ತನಾವಲೋಕನಾತಿಕುತೂಹಲೋನ್ಮೀಲಿತನಿಶಾಚರಪಿಶಾಚಭೂತವೇತಾಳೋತ್ತುಂಗಕರತಳಾನನಕೋಳಾಹಳಕಳಕಳಾಟ್ಟಹಾಸಹಾಸಸಂತ್ರಾಸಿತಸಕಲಕಟಕಚಾತುರಂಗಬಲಮುಕುಟಸಂಘಟಿತಚಕ್ರಚಟುಲಗತಿನಿಯುದ್ಧಾಯುಧಪಾತರುಧಿರಕರ್ದಮಸಮ್ಮರ್ದಿತಮುಮಪ್ಪ ಸಂಗ್ರಾಮಭೂಮಿಯೊಳಗನೆ ಬರ್ಪಲ್ಲಿ -

೩೭. ಆನೆಗಳ (ಕೋರೆಗಳ) ಘಟ್ಟಣೆಯಿಂದ ಉದ್ಭವಿಸಿದ ಜ್ವಾಲೆಗಳ ಬಕ್ಕಡ (?) ಗಳು ವೈರಿಗಳ ಬಕ್ಕಡ (?) ಗಳೆನಿಸಿದುವು ; ಆನೆ ಸವಾರರು ಬಿಟ್ಟ ಬಾಣಗಳು ಅಗ್ನಿ ಬಾಣಗಳೆನಿಸಿದುವು ; ಕೈಯಿಂದ ಬೀಸಿದ ಚಕ್ರವು ಸೂರ್ಯಮಂಡಲವೆನಿಸಿತು.

ವ॥ ಹೀಗೆಂದು ತೋರಿ ನುಡಿಯಲಾಗಿ, ಎಡಗೈ ಬಲಗೈಗಳಿಂದ ಬಿಟ್ಟ ಹದನಾದ ಬಾಣಗಳು ಒಂದರ ಹಿಂದೊಂದು ಬಂದು ನಟ್ಟು ಪ್ರಚಂಡವಾದ ಆನೆಗಳ ತಲೆ ಹೊಟ್ಟೆ ಮುಂತಾದ ಪ್ರದೇಶಗಳಿಂದ ಹೊರಹೊಮ್ಮಿದ ಪ್ರಬಲ ರಕ್ತಪ್ರವಾಹ ಬೆರೆತು ಸಾವಿರ ಮುಖವಾಗಿ ಸೂಸಿ ಹರಿಯುವ ಸರಸ್ವತೀ ನದಿಯ ಮಹಾಪೂರದಿಂದ ಭೀಕರವಾದ ನೆಲ; ಸಾವಿರಾರು ಸಮರಗಳಲ್ಲಿ ಶತ್ರುಗಳಿಗೆ ಭಯಾನಕವಾಗಿ ಬಂದ ಪ್ರಚಂಡ ಗದಾಯುಧದ ಹೊಡೆತಗಳಿಂದ ಚೂರುಚೂರಾದ ಅನೇಕ ಕಿರೀಟಗಳ ರತ್ನಕಿರಣಗಳು ರಚಿಸಿದ ಸಾವಿರಾರು ಇಂದ್ರಧನುಗಳಿಂದ ತುಂಬಿದ ಆಕಾಶ ; ಎರಡೂ ಸೈನ್ಯಗಳ ಯೋಧರು ಸಮೂಹ ಸಮೂಹವಾಗಿ ಪರಸ್ಪರ ಸಂಘರ್ಷದಲ್ಲಿ ತೊಡಗಿದಾಗ ಅವರ ಆಯುಧಗಳಿಂದ ಚಿಮ್ಮಿದ ಕಿಡಿಗಳಿಂದ ಚಕಚಕಿಸುವ ಸಮಸ್ತ ದಿಙ್ಮಂಡಲ; ಸೈನ್ಯದಲ್ಲಿದ್ದ ಎಲ್ಲಾ ಆನೆ, ಕುದುರೆ, ರಥಿಕರು ರುಂಡಗಳನ್ನು ಕಳೆದುಕೊಂಡು ಬರಿ ಮುಂಡಗಳು ಕುಣಿದಾಡುವುದನ್ನು ನೋಡಲು ಕುತೂಹಲದಿಂದ ಕಣ್ಣು ಬಿಟ್ಟುಕೊಂಡಿರುವ ರಾಕ್ಷಸ ಪಿಶಾಚ ಭೂತ-ಬೇತಾಳಗಳು ಮೆಚ್ಚಿ ಇಕ್ಕುವ ಚಪ್ಪಾಳೆಗಳಿಂದಲೂ ಕೇಕೆಗಳ ಕೋಲಾಹಲದಿಂದಲೂ ಕಳಿಕಳಿಸುವ ಅಟ್ಟಹಾಸದಿಂದಲೂ ಭೀಕರವಾದ ಹಾಗೂ ಚತುರಂಗ ಸೈನ್ಯಗಳ ನಿಕರದ ಯುದ್ಧದಲ್ಲಿ ಆಯುಧದ ಹೊಡೆತಗಳಿಂದಾದ ನೆತ್ತರಿನ ಕೆಸರಿನಿಂದ ತುಂಬಿದ ರಣಭೂಮಿಯಲ್ಲಿ ಹೊಕ್ಕು ಬರುತ್ತಿರುವಾಗ -

ಇನಿಸಿನಿಸು ತಿಂಬೆಮೊರ್ಮೆಯೆ ।
ತಿನೆ ತವುಗುಮಿದೆಂದು ತಾಮುಮಾನೆಯ ಪೆಣನಂ ॥
ತಿನಲಾಱದೆ ಪೆಱರ್ಗಿಕ್ಕದೆ ।
ಮನಮಂ ಪಸುತಿರ್ದುವಲ್ಲಿ ಲೋಭಿಮರುಳ್ಗಳ್ ॥೩೮॥

ಅವಿರಳಶವಕುಲಮಿರೆ ಲೋ ।
ಭವಶದಿನತಿದೂರದಿಂದೆ ಬಂದ ಪಿಶಾಚಾ ॥
ನಿವಹಕ್ಕೆಲ್ಲಂ [ಶವಂ] ಮಾಂ ।
ಸವಿಕ್ರಯಂ ಗೆಯ್ದು [ವಲ್ಲಿ] ಪರದಮರುಳ್ಗಳ್ ॥೩೯॥

ನವರಕ್ತರಕ್ತವಸ್ತ್ರಂ ।
ನವಾಂತ್ರಯಜ್ಞೋಪವೀತಮೆಸೆಯೆ ಪಿಶಾಚಾ ॥
ನಿವಹಮನಡಗುಣಿಮೆಂದು ನ ।
ವವೇದಮಂ ಪೇಳ್ವರಲ್ಲಿ ರಕ್ಕಸಪಾರ್ವರ್ ॥೪೦॥

ಮುಂ ಬಿಟ್ಟು ಕಾದಿ ಕೊಲೆ ಹೈ ।
ಡಿಂಬಿಯನಾ ಸಮರರಂಗದೊಳ್ ಮೀನ್ ಮೀನಂ ॥
ತಿಂಬಂತಿರೆ ನಾಯ್ ನಾಯಂ ।
ತಿಂಬಂತಿರೆ ತಿಂದರಲ್ಲಿ ರಕ್ಕಸಿಯರ್ಕಳ್ ॥೪೧॥

ನವಭೂತಭಾಷೆಯಿಂ ಕುಱು ।
ಪುವೇೞ್ದು ತಾಮಡ್ಡಗವಿತೆಯಂ ಮಾಡಿ ಮಹಾ ॥
ವ್ಯವಸಾಯಂಗೆಯ್ವ ಮರು ।
ಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ ॥೪೨॥

೩೮. ಸ್ವಲ್ಪಸ್ವಲ್ಪವಾಗಿ ತಿನ್ನೋಣ ; ಒಮ್ಮೆಗೇ ತಿಂದುಬಿಟ್ಟರೆ ಮುಗಿದು ಹೋಗುವುದು ಎಂದ ಆನೆಯ ಹೆಣವನ್ನು ತಾವೂ ತಿನ್ನದೆ, ಹೆರವರಿಗೂ ಕೊಡದೆ ಲೋಭಿಗಳಾದ ಪಿಶಾಚಿಗಳು ಇಬ್ಬಗೆಯಿಂದ ಒದ್ದಾಡುತ್ತಿದ್ದವು.

೩೯. ಹೆಣಗಳ ರಾಶಿ ಹೇರಳವಾಗಿದ್ದುದರಿಂದ ದೂರದಿಂದ ಲೋಭಿಸಿ ಬಂದ ಪಿಶಾಚಿಗಳಿಗೆಲ್ಲಕ್ಕೂ ವ್ಯಾಪಾರಿ ಪಿಶಾಚಿಗಳು ಹೆಣದ ಮಾಂಸವನ್ನು ಮಾರಿದವು.

೪೦. ಹೊಸ ನೆತ್ತರಿನಿಂದ ಕೆಂಪಾದ ವಸ್ತ್ರವುಟ್ಟು ಹೊಸ ಕರುಳಿನ ಜನ್ನಿವಾರವನ್ನು ತೊಟ್ಟು ರಾಕ್ಷಸ ಬ್ರಾಹ್ಮಣರು ಪಿಶಾಚಿಗಳ ಸಮೂಹಕ್ಕೆಲ್ಲ ಮಾಂಸವನ್ನು ಸೇವಿಸಿರಿ ಎಂದು ಬೋಧೆ ಮಾಡುತ್ತಿದ್ದರು.

೪೧. ಮುಂದೆ ನುಗ್ಗಲು ಬಿಟ್ಟು ಹೋರಾಡಿ ಘಟೋತ್ಕಚನ ವಧೆ ಮಾಡಲಾಯಿತು. ಮೀನು ಮೀನನ್ನೂ ನಾಯಿ ನಾಯಿಯನ್ನೂ ತಿನ್ನುವಂತೆ ರಣರಂಗದಲ್ಲಿ ಬಿದ್ದ ಆ ರಾಕ್ಷಸನ ಹೆಣವನ್ನು ರಾಕ್ಷಸಿಯರು ತಿಂದರು.೪೨. ಹೊಸ ಪಿಶಾಚ ಭಾಷೆಯಿಂದ ಲಕ್ಷಣವನ್ನು ಹೇಳಿ, ವಕ್ರಕಾವ್ಯವನ್ನು ರಚಿಸಿ, ಮಹಾ ಸಾಹಸದ ಕಾರ್ಯ ಮಾಡಿದ್ದೇವೆಂದು ಸಡಗರಿಸುವ 'ಮರುಳುಕವಿ' (೧. ಪಿಶಾಚಿ ಕವಿ. ೨. ದಡ್ಡಕವಿ)ಗಳು 'ಗುಣಾಢ್ಯ' (೧. ಪೈಶಾಚಿಕ ಭಾಷೆಯ ಒಬ್ಬ ಮಹಾಕವಿ. ೨. ಕವಿತ್ವಗುಣವುಳ್ಳವ)ನ ಹೆಗ್ಗಳಿಕೆಯನ್ನು ಕುಗ್ಗಿಸರೆ ?

ಎನುತ್ತುಂ ಬರೆವರೆ -

ಗುರುವಿನ ನೆತ್ತರಂ ಕುಡಿವೆನಪ್ಪೊಡವಂ ದ್ವಿಜವಂಶಜಂ ನಿಜಾ ।
ವರಜನ ನೆತ್ತರಂ ಕುಡಿವೆನಪ್ಪೊಡೆ ಭೀಮನೆ ಪೀರ್ದನೆಯ್ದೆ ಭೀ ॥
ಷ್ಮರ ಬಿಸಿನೆತ್ತರಂ ಕುಡಿವೊಡಿನ್ನುಮೊಳಂ ಕುರುರಾಜ ನಿನ್ನ ನೆ ।
ತ್ತರ ಸವಿನೋಟ್ಟೊಡಾಂ ಬಯಸಿಂ ಬಂದೆಪೆನೆಂದುದದೊಂದು ಪುಲ್ಮರುಳ್ ॥೪೩॥

ಅದಂ ಕೇಳುತ್ತುಂ ಬರೆವರೆ -

ಕದನದೊಳುಣ್ಮಿದೊಳ್ಮಿದುಳ ಕರ್ದಮದೊಳ್ ಜಗುಳ್ದಂಘ್ರಿ ಜಾಱೆ ಪೋ ।
ಪುದುಮೊಡನಿರ್ದ ಸಂಜಯನಿಳೇಶ್ವರನಂ ಪಿಡಿದೂರುಭಂಗಮಾ ॥
ಗದೆ ವಲಮೆಂದೊಡಾಗದೆನೆ ಪುಲ್ಮರುಳೊಂದೆಡೆವೋಗಿ ಭೀಮಕೋ ।
ಪದೆ ನಿಸಗೂರುಭಂಗಭಯಮಾಗದೆ ಪೋಕುಮೆ ಕೌರವೇಶ್ವರಾ ॥೪೪॥

ಎಂದ ಮರುಳ ಮಾತು ತನಗೆ ಕರ್ಣಕಠೋರಮಾಗೆ ತನಗೆ ಮುನ್ನಂ ಮೈತ್ರೇಯರ್ ಕೊಟ್ಟ ಊರುಭಂಗಶಾಪಮಂ ನೆನೆನೆನೆದು ಮನದೊಳ್ ಕಟ್ಟುಕಡೆದು ತಾಂ

ವ॥ ಹೀಗೆನ್ನುತ್ತ ಬರುತ್ತಿರಲಾಗಿ -

೪೩. 'ಗುರು (ದ್ರೋಣಾಚಾರ್ಯ)ವಿನ ರಕ್ತವನ್ನು ಹೀರೇನೆಂದರೆ ಅವನು ಬ್ರಾಹ್ಮಣ ನಿನ್ನ ತಮ್ಮನ ನೆತ್ತರನ್ನು ಕುಡಿದೇನೆಂದರೆ ಅದನ್ನೆಲ್ಲ ಭೀಮನೇ ಹೀರಿ ಬಿಟ್ಟಿದ್ದಾನೆ ಭೀಷ್ಮಾಚಾರ್ಯರ ಬಿಸಿನೆತ್ತರನ್ನು ಕುಡಿಯಬೇಕೆಂದರೆ ಅವರಿನ್ನೂ ಜೀವಂತವಾಗಿದ್ದಾರೆ ಕುರುರಾಜನೆ, ನಿನ್ನ ರಕ್ತದ ಸವಿ ನೋಡಬೇಕೆಂದು ಹಂಬಲಿಸಿ ಬರುತ್ತಿದ್ದೇನೆ' ಎಂದು ಒಂದು ಕ್ಷುದ್ರ ಪಿಶಾಚಿ ನುಡಿಯಿತು.

ವ॥ ಅದನ್ನು ಕೇಳುತ್ತ ಮುಂದೆ ನಡೆಯಲಾಗಿ -

೪೪. ಕಾಳಗದಲ್ಲಿ ತಲೆಗಳಿಂದ ಹೊರಹೊಮ್ಮಿದ ಒಳಮೆದುಳಿನ ಕೆಸರಿನಲ್ಲಿ ದುರ್ಯೋಧನನು ಕಾಲು ಜಾರಿ ಬೀಳುತ್ತಿರಲು ಜೊತೆಯಲ್ಲಿದ್ದ ಸಂಜಯನು ಅವನನ್ನು ಹಿಡಿದು ನಿಲ್ಲಿಸಿ 'ತೊಡೆ ಮುರಿದು ಹೋಗಲಿಲ್ಲವಷ್ಟೆ' ಎಂದನು. 'ಇಲ್ಲ' ಎಂದ ಆತನು ಹೇಳಲಾಗಿ, ಆ ಕ್ಷುದ್ರ ಪಿಶಾಚಿ ಒಂದೆಡೆಗೆ ಹೋಗಿ 'ಕೌರವೇಶ್ವರಾ, ಭೀಮನ ಕೋಪದಿಂದ ನಿನ್ನ ತೊಡೆ ಮುರಿಯದೆ ಉಳಿವುದುಂಟೆ ?' ಎಂದಿತು.

ವ॥ ಪಿಶಾಚಿಯ ಈ ಮಾತು ಕಿವಿಗೆ ಅಸಹ್ಯವಾಯಿತು. ಪೂರ್ವದಲ್ಲಿ ಮೈತ್ರೇಯರು [illegible] ಮತ್ತೆ ಮತ್ತೆ ನೆನಪು ಮಾಡಿಕೊಂಡು ಮನಸ್ಸಿನಲ್ಲಿಯೆ

ಮಹಾಸತ್ವನಪ್ಪುದಱಿಂದಮೊಂದುಮಂ ಬಗೆಯದೆ ಮರುಳ ಮಾತಿನೊಳ್ ಪುರುಳೇನೆಂದರಸಂ ಪೋಗೆವೋಗೆ -

ಅರಗಿನ ಮಾಡದೊಳ್ ವಿಷಯ[-ದ-] ಲಡ್ಡುಗೆಯೊಳ್ ಕೊಲಲೆಂದು ಬಂಧುಮ॥
ತ್ಸರದೊಳೆ ವೈರಮಂ ಪಡೆದು ಭೀಮನಿನ್ನಿನಿತರ್ಕೆ ತಂದ ನೀಂ ।
ಮರುಳಯೊ ಭೂತಕೋಟವೆರಸಾಹವರಂಗದೊಳಾಡುತಿರ್ಪ ತಾಂ ।
ಮರುಳೆನೊ ನೋ[ಟ್ಟಮಿ] ರ್ವರ ಮರುಳ್ತನಮಂ ಫಣಿರಾಜಕೇತನಾ ॥೪೫॥

ಎನೆ ಸುಯೋಧನಂ ಕೆಳಗಿವಿಗೇಳ್ದು ಮರುಳ ಮಾತಿನೊಳ್ ಪುರುಳಿಲ್ಲೆಂದು ಕಿಱಿದೆಡೆಯಂ ಪೋಗೆವೋಗೆ -

ನುಡಿಯದೆ ಪೋಗಲೀಯೆನೆಲೆ ಪೋದೊಡೆ ಧೂರ್ಜಟಿಯಾಣೆ ಮೀಱಿ ಪೋ ।
ದೊಡೆ ಕಲಿಭೀಮನಾಣೆಯೆನೆ ಧೂರ್ಜಟಿಯಾಣೆಗೆ ನಿಂದು ಭೀಮನೆಂ ॥
ದೊಡೆ ಮುಳಿದಟ್ಟಿ ಕುಟ್ಟಲರಸಂ ಗದೆಗೊಂಡೊಡೆ ಭೂತಕೋಟಿಯುಂ ।
ಬಡಿಗೊಳೆ ಸಂಜಯಂ ನಯದೆ ಬಗ್ಗಿಸಿದಂ ಫಣಿರಾಜಕೇತುವಂ ॥೪೬॥

ಅಂತು ಬಹುಳಪ್ರತ್ಯವಾಯಪ್ರದೇಶಂಗಳನೆಂತಾನುಂ ಕಳೆದು ಪೋಗೆವೋಗೆ -

ಮರುಗಿದರೂ ದುರ್ಯೋಧನನು ಮಹಾಸತ್ವಶಾಲಿಯಾದುದರಿಂದ ಯಾವುದೊಂದನ್ನೂ ಹಚ್ಚಿಕೊಂಡು ಕೊರಗದೆ, 'ಮರುಳ (೧. ಪಿಶಾಚಿಯ. ೨. ದಡ್ಡನ) ಮಾತಿನಲ್ಲಿ ಹುರುಳುಂಟೆ?'ಎಂದು ಮುಂದೆ ಸಾಗಲಾಗಿ

೪೫. ಅರಗಿನ ಮನೆಯಲ್ಲಿಯೂ ವಿಷದ ಲಡ್ಡುಗೆಗಳಿಂದಲೂ ಕೊಲ್ಲಬೇಕೆಂದು ಯತ್ನಿಸಿ ಬಾಂಧವರಲ್ಲಿ ಹೊಟ್ಟೆಯುರಿಯನ್ನು ಶತ್ರುತ್ವವನ್ನೂ ಬೆಳಸಿ ಭೀಮನನ್ನು ಈಗಿನ ರುದ್ರಸ್ವರೂಪಕ್ಕೆ ತಂದ ನೀನು ಮರುಳನೊ, ರಣರಂಗದಲ್ಲಿ ಆಡುತ್ತಿರುವ ನಾನು ಮರುಳನೊ? ದುರ್ಯೋಧನಾ, ನಮ್ಮಿಬ್ಬರ ಮರುಳುತನವನ್ನೂ ವಿಚಾರಿಸು.

ವ॥ ಎಂದ ಪಿಶಾಚಿಯ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೆ, 'ಮರುಳ ಮಾತು, ಅದರಲ್ಲೇನೂ ಹುರುಳಿಲ್ಲ' ಎಂದ ಸ್ವಲ್ಪ ದೂರ ಆತನು ಹೋಗುತ್ತಿರಲು -

೪೬. "ಉತ್ತರಿಸದೆ ಇದ್ದರೆ ನಿನ್ನನ್ನು ಹೋಗಗೊಡೆನು. ಹೋದರೆ ಶಿವನಾಣೆ. ಅದನ್ನು ಮೀರಿಹೋದರೆ ಭೀಮನ ಆಣೆ" ಎಂದು ಪಿಶಾಚವು ನುಡಿಯಲು, ಶಿವನಾಣೆಗೆ ನಿಂತು, ಭೀಮನೆಂಬ ಹೆಸರನ್ನು ಕೇಳಿದೊಡನೆ ಕೆರಳಿ ಬೆನ್ನಟ್ಟಿ ಕುಟ್ಟಬೇಕೆಂದು ಅರಸನು ಗದೆಯನ್ನು ಎತ್ತಿಕೊಂಡನು ; ಪಿಶಾಚಗಳ ಸಮೂಹವೂ ಬಡಿಗೆಗಳನ್ನು ಎತ್ತಿ ನಿಂತುವು. ಆಗ ಸಂಜಯನು ನಯವಾಗಿ ದುರ್ಯೋಧನನ್ನು ಗದರಿಸಿ ತಡೆದನು.

ವ॥ ಹೀಗೆ ವಿಘ್ನಮಯವಾದ ಪ್ರದೇಶಗಳನ್ನೆಲ್ಲ ಹೇಗೋ ದಾಟಿ ಮುಂದೆ ಸಾಗಲಾಗಿ -

ಮುನಿದೆಯ್ತಂದಿಲ್ಲಿ ಭೀಮಂ ಭವದನುಜನನಾ ದ್ರೌಪದೀದ್ರೋಹನಂ ಕೊಂ
ದನೆನಲ್ಕಾಂ ಕೇಳಲಾಱೆಂ ಪರಿಭವಮನದಂ ಮುಂದೆಮುಂದೆಂದು ಬಾಷ್ಪಾಂ
ಬುನಿಮಗ್ನಂ ಭಗ್ನಚಿತ್ತಂ ತಲೆಯನೆಱಗಿ ಬಿಲ್ಲೊಜನೆಲ್ಲಿರ್ದನೆಲ್ಲಿ ।
ರ್ದನೊ ಭೀಷ್ಮಂ ನೋಡುವೆಂ ತೋಱೆನೆ ಕುರುಕುಲನಂ ಸಂಜಯಂ
ಕೊಂಡುಪೋದಂ ॥೪೭॥

ಅಂತು ಪೋಗೆ -

ಇಭಶೈಲಂಗಳನೇಱೆಯೇಱೆ ರುಧಿರಸ್ರೋತಂಗಳಂ ದಾಂಟಿ ದಾಂ ।
ಟಿಭದೋರ್ನೀಲಲತಾಪ್ರತಾನವಿಪಿನವ್ರಾತಂಗಳೊಳ್ ಸಿಲ್ಕಿ ಸಿ ।
ಲ್ಕಿ ಭರಂಗೆಯ್ದುಱದೆಯ್ದಿ ಸಂಜಯಶಿರಸ್ಕಂಧಾವಲಂಬಂ ಕುರು ।
ಪ್ರಭು ಕಂಡಂ ಶರಜಾಲಜರ್ಜರಿತಗಾತ್ರತ್ರಾಣನಂ ದ್ರೋಣನಂ ॥೪೮॥

ಗುರುವಂ ಲಘುಸಂಧಾನದೆ ।
ನರನಿಸೆ ಗುರುಲಘುವಿಮಿಶ್ರಿತಂ ದೊರೆಕೊಳೆ ತ ॥
ದ್ಗುರು ತಚ್ಛಂದೋವೃತ್ತಿಗೆ ।
ದೊರೆಯೆನಿಸಿರ್ದುದು ಮನಕ್ಕೆ ದುರ್ಯೋಧನನಾ ॥೪೯॥

ಅಂತೆನಿಸಿರ್ದ ನಿಸರ್ಗದುಷ್ಟಧೃಷ್ಟದ್ಯುಮ್ನ ಕಚನಿಗ್ರಹಕರವಿಲುಳಿತಮೌಳಿಯಾಗಿರ್ದ ಭಾರದ್ವಾಜನಿರವಂ ರಾಜರಾಜಂ ನೋಡಿ -

೪೭. ದ್ರೌಪದಿಗೆ ದ್ರೋಹ ಬಗೆದ ನಿನ್ನ ತಮ್ಮನನ್ನು ರೋಷದಿಂದ ಭೀಮನು ಕೊಂದ ಸ್ಥಳವಿದು ಎಂದು ಸಂಜಯನೆನ್ನಲು, ಆ ಸೋಲು ಅಪಮಾನಗಳನ್ನು ಕೇಳಲಾರೆ, ಮುಂದೆ ನಡೆ ಎಂದು ಕಂಬನಿದುಂಬಿ ಭಗ್ನಮನಸ್ಕನಾದ ದುರ್ಯೋಧನನು ತಲೆತಗ್ಗಿಸಿ, ಧನುರ್ವಿದ್ಯಾ ಗುರುಗಳೆಲ್ಲಿ, ಭೀಷ್ಮನೆಲ್ಲಿ ? ನೋಡಬೇಕು, ಅವರನ್ನು ತೋರಿಸು ಎಂದನು. ಸಂಜಯನು ಅವನನ್ನು ಮುಂದಕ್ಕೆ ಕರೆದೊಯ್ದನು.

ವ॥ ಹಾಗೆ ಹೋಗುತ್ತ -

೪೮. ಆನೆ ಹೆಣಗಳ ಬೆಟ್ಟಗಳನ್ನೇರಿಯೇರಿ, ನೆತ್ತರ ನದಿಗಳನ್ನು ದಾಟಿ ದಾಟಿ, ಆನೆ ಸೊಂಡಿಲುಗಳೆಂಬ ಕರಿ ಬಳ್ಳಿಗಳ ಕಾಡಿನಲ್ಲಿ ಸಿಲುಕಿ ಸಿಲುಕಿ, ಸಂಜಯನ ಹೆಗಲನ್ನು ಆಧರಿಸಿಕೊಂಡು ಬಂದ ದುರ್ಯೋಧನನು ಬಾಣಸಮೂಹಗಳಿಂದ ನಜ್ಜುಗುಜ್ಜಾದ ದ್ರೋಣನನ್ನು ಕಂಡನು.

೪೯. 'ಲಘುಸಂಧಾನ'ದಿಂದ (ತೀವ್ರವಾಗಿ ಬಾಣಗಳನ್ನು ಹೂಡಿ ಬಿಡುವುದರಿಂದ) ಅರ್ಜುನನು 'ಗುರು'ವಾದ ದ್ರೋಣನನ್ನು ಘಾತಿಸಲಾಗಿ ಗುರುಲಘುಗಳ ಮಿಶ್ರಣವಾಗಿ, (ಗುರು - ಲಘು ಅಕ್ಷರಗಳ ಸಮುಚಿತ ಮಿಶ್ರಣದಿಂದ ಒಪ್ಪುವ) ಛಂದೋವೃತ್ತಕ್ಕೆ ಸಮನಾಗಿ ದ್ರೋಣಾಚಾರ್ಯನ ದೇಹವು ದುರ್ಯೋಧನನ ಮನಸ್ಸಿಗೆ ತೋರಿತು.

ವ॥ ಸ್ವಭಾವತಃ ದುಷ್ಟನಾದ ಧೃಷ್ಟದ್ಯುಮ್ನನು ಚಂಡಿಕೆ ಹಿಡಿದೆಳೆದುದರಿಂದ ತಲೆ ಅಸ್ತವ್ಯಸ್ತವಾಗಿದ್ದ ದ್ರೋಣನ ಸ್ಥಿತಿಯನ್ನು ಕಂಡು ದುರ್ಯೋಧನ ಚಕ್ರವರ್ತಿಯು -

ಅಱಿಯೆಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ ।
ನೆಱಿಯನಿದಿರ್ಚಿ ನಿಮ್ಮೊಡನೆ ಕಾದಿ ಗೆಲಲ್ಕಱದು ನಿಮ್ಮುಪೇಕ್ಷೆಯೆಂ ॥
ದಱಿಯೆನಿದೆನ್ನ ಕರ್ಮವಶಮೆಂದಱಿಯೆಂ ನಿಮಗಿಂತು ಸಾವುಮೇ ।
ತೆಱದಿನಕಾರಣಂ ನೆಱಿಯೆ ಸಂಭವಿಸಿರ್ದುದೊ ಕುಂಭಸಂಭವಾ ॥೫೦॥

ಎಂದು ದುಃಖಗೆಯ್ದು ರಾಜರಾಜಂ ತದೀಯತನುಜನಂ ನೆನೆದು –

ಆದಟಿನ ಪಾರ್ಥನೆಚ್ಚುಕೊಲೆ ಜಾತಬಲಂ ದ್ರುಪದಾತ್ಮಜಾತನೋ ।
ವಡೆ ಪುಡಿಯೊಳ್ ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತವೋ ।
ದುದೊ ಶರವೆತ್ತವೋದುದೊ ಲಲಾಟದಿನಿಂಗಳಗಣ್ಣದೆತ್ತವೋ ।
ದುದೊ ಗುರುಸೂನು ತಾನುಮಣಮಮ್ಮನಲಂಪುಮದೆತ್ತವೋದುದೋ ॥೫೧॥

ಶರಸಂಧಾನಮನ್ಯಸೈನ್ಯದೊಡಲೊಳ್ ಬಿಲ್ಬಲ್ಮೆಯಂ ತನ್ನ ಶಿ ।
ಷ್ಯರ ಮೆಯ್ಯೊಳ್ ನಿಜಕೀರ್ತಿಯಂ ನಿಖಿಳದಿಕ್ಚಕ್ರಂಗಳೊಳ್ ಚಿತ್ತಮಂ ॥
ಹರಪಾದಾಂಬುಜಯುಗ್ಮದೊಳ್ ನಿಱಿಸಿದಂ ಚಾಪಾಗಮಾಚಾರ್ಯರೊಳ್ ।
ದೊರೆ ಯಾರೆಂಬಿನಮಣ್ಮಿ ಸತ್ತಳವಿದೇಂ ದ್ರೋಣಂಗೆ ಮೆಯ್ವೆತ್ತುದೋ ॥೫೨॥

ಎಂದು ಗುರುನಂದನನಂ ನಿಂದಿಸಿ ಗುರುವನಭಿವಂದಿಸಿ –

೫೦. ದ್ರೋಣಾಚಾರ್ಯ, ನಿಮ್ಮ ಧನುರ್ವಿದ್ಯಾಕೌಶಲವನ್ನು ನಾವು ಅರಿಯದವರೆ? ಅರ್ಜುನನೊತ್ತಟ್ಟಿಗಿರಲಿ, ಸ್ವತಃ ಪಿನಾಕವೆಂಬ ಧನುಸ್ಸನ್ನು ಹಿಡಿದು ಬಂದ ಶಿವನು ಕೂಡ ನಿಮ್ಮೊಡನೆ ಯುದ್ಧ ಮಾಡಿ ಗೆಲ್ಲಲಾರನು. ನಿಮ್ಮ ಉದಾಸೀನತೆಯೊ, ನನ್ನ ಕರ್ಮಫಲವೊ, ಅದೇಕೆ ನಿಷ್ಕಾರಣವಾಗಿ ನಿಮಗೆ ಇಂತಹ ಸಾವು ಬಂದೊದಗಿತೋ ನಾನರಿಯೆ.

ವ॥ ಎಂದು ದುಃಖಿಸಿ, ಆತನ ಮಗನಾದ ಅಶ್ವತ್ಥಾಮನನ್ನು ನೆನೆದು –

೫೧. ಪರಾಕ್ರಮಿಯಾದ ಅರ್ಜುನನು ಬಾಣವೆಸೆದು ಕೊಲ್ಲಲಾಗಿ, ಬಲಗೊಂಡ ಧೃಷ್ಟದ್ಯುಮ್ನನು ದ್ರೋಣರ ಬಳಿ ಬಂದು ನಿಷ್ಕರುಣನಾಗಿ ಹುಡಿಯಲ್ಲಿ ಹೊರಳಾಡಿಸಿ ತಲೆಯನ್ನು ಕತ್ತರಿಸುವಾಗ (ರುದ್ರಾವತಾರನೆಂಬ ಈ ಅಶ್ವತ್ಥಾಮನ) ಪಿನಾಕಧನು ಎತ್ತ ಹೋಗಿತ್ತು ? ಬಾಣ ಎತ್ತ ಹೋಗಿತ್ತು ? ಹಣೆಯಲ್ಲಿದ್ದ ಬೆಂಕಿ ಕಣ್ಣು ಅದೆತ್ತ ಹೋಗಿತ್ತು ? ಗುರುವಿನ ಮಗನಾದ ಅವನಿಗೆ ತಂದೆಯ ಮೇಲಿನ ಅಕ್ಕರೆ ಎಲ್ಲಿಗೆ ಹೊರಟು ಹೋಗಿತ್ತು ?

೫೨. ಹೂಡಿದ ಬಾಣಗಳೆಲ್ಲವನ್ನೂ ಶತ್ರುಸೈನ್ಯದ ದೇಹಗಳಲ್ಲಿ, ಧನುರ್ವಿದ್ಯಾ ಪ್ರಾವೀಣ್ಯವನ್ನು ತನ್ನ ಶಿಷ್ಯರಲ್ಲಿ, ತನ್ನು ಕೀರ್ತಿಯನ್ನು ಸಮಸ್ತ ದಿಕ್ಕುಗಳಲ್ಲಿ , ಚಿತ್ತವನ್ನು ಶಿವನ ಪಾದಕಮಲಗಳಲ್ಲಿ ನೆಲೆಗೊಳಿಸಿ, ಧನುರ್ವಿದ್ಯಾ ವಿಶಾರದರಲ್ಲಿ ತನಗೆ ಸಮಾನರಾರೂ ಇಲ್ಲವೆಂಬಂತೆ ಪರಾಕ್ರಮವನ್ನು ತೋರಿ ಮರಣ ಹೊಂದಿದ ದ್ರೋಣಾಚಾರ್ಯನಿಗೆ ಅದೆಂತಹ ಸಾಮರ್ಥ್ಯ ಮೈಗೂಡಿತ್ತು !

ವ॥ ಎಂದು ಗುರುಪುತ್ರನನ್ನು ನಿಂದಿಸಿ, ಗುರುವನ್ನು ಹೊಗಳಿ ನಮಸ್ಕರಿಸಿ –

೫೩. 'ನನ್ನನ್ನು ಉದಾಸೀನ ಮಾಡಿ ಮನಸ್ಸಿಲ್ಲದೆ ಯುದ್ಧಮಾಡಿದ ಈ ಗುರುವಿಗೆ

ಎನ್ನನುಪೇಕ್ಷಿಸಿ ಕಾದಿದ
ನಿನ್ನೀ ಗುರುಗೆಱಗೆನೆನ್ನದೆಱಗಿದನಡಿಯೊಳ್ ॥
ಪನ್ನಗಚಿಹ್ನಂ ಪಿರಿಯರ್ ।
ಮುನ್ನಂ ಕೂಡಿದುದನೆಡೆಯೊಳೇಂ ಕಿಡಿಸುವರೇ ॥೫೩॥

ಎಂದು ಕುಂಭಸಂಭವನಂ ತ್ರಿಃಪ್ರದಕ್ಷಿಣಂಗೆಯ್ದು ಬರುತ್ತುಮಾ ದಿಶಾಭಾಗದೊಳ್ ಶರಸಂದೋಹಾಶ್ಚರ್ಯಶರನಿಕರದಿಂ ಕ್ಷೀಣತರನಾಗಿ ಶರಾಚಾರ್ಯರ್ಗಭಿಮುಖನಾಗಿ -

ಅರೆಮುಗಿದಿರ್ದ ಕಣ್ಗಳುಮಲರ್ದ ಮೊಗಂ ಕಡಿವೋದ ಕಯ್ಯುಮಾ ।
ಸುರತರಮಾಗೆ ಕರ್ಚಿದವುಡುಂ ಬೆರಸನ್ಯಶರಪ್ರಹಾರಜ ॥
ರ್ಜರಿತಶರೀರನಾಗಿ ನವಲೋಹಿತವಾರ್ಧಿಯೊಳಟ್ಟು ಬಿಟ್ಟನಂ ।
ಕುರುಪತಿ ನೋಡಿ ಕಂಡನಭಿಮನ್ಯುಕುಮಾರನನಾಜಿವೀರನಂ ॥೫೪॥

ಅಂತಾತನನಹಿಕೇತನಂ ನೋಡಿ -

ಗುರು ಪಣ್ಣಿದ ಚಕ್ರವ್ಯೂ ।
ಹರಚನೆ ಪೆಱರ್ಗರಿದು ಪುಗಲಿದಂ ಪೊಕ್ಕು ರಣಾ ॥
ಜಿರದೊಳರಿನೃಪರನಿಕ್ಕಿದ ।
ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ ॥೫೫॥

ನಾನಿನ್ನು ತಲೆ ಬಾಗಲಾರೆ' ಎಂದೆನ್ನದೆ ದುರ್ಯೋಧನನು ಅವರ ಪಾದಗಳಿಗೆ ಎರಗಿದನು ಹಿರಿಯರಾದವರು ಮೊದಲಿನ ಸ್ನೇಹವನ್ನು ನಡುವೆ ಕೆಡಿಸಿಕೊಳ್ಳುವರೆ ?

ವ॥ ಹೀಗೆ ದ್ರೋಣನಿಗೆ ಮೂರು ಪ್ರದಕ್ಷಿಣೆ ಹಾಕಿ ಬರಲಾಗಿ ಆ ದಿಕ್ಕಿನಲ್ಲಿಯೇ ಬಾಣಸಮೂಹಗಳ ಹೊಡೆತದಿಂದ ಜರ್ಜರಿತನಾಗಿ, ದ್ರೋಣನಿಗೆ ಎದುರಾಗಿ -

೫೪. ಅರ್ಧ ಮುಚ್ಚಿದ ಕಣ್ಣು, ಉತ್ಸಾಹದಿಂದ ಅರಳಿದ ಮುಖ, ಕತ್ತರಿಸಿ ಹೋದ ಕೈಗಳು, ಭೀಕರವಾಗಿ ಕಚ್ಚಿದ ಅವುಡು ಸಹಿತವಾಗಿ ಶತ್ರುಬಾಣ ಪ್ರಹಾರದಿಂದ ಮೈಯೆಲ್ಲ ಜರ್ಜರಿತವಾಗಿ ಬಿಸಿರಕ್ತದ ಕಡಲಲ್ಲಿ ಮುಳುಗಿ ಬಿದ್ದ ರಣವೀರ ಅಭಿಮನ್ಯು ಕುಮಾರನನ್ನು ಕೌರವರಾಜನು ಕಂಡನು.

ವ॥ ಹೀಗಿರುವ ಆತನನ್ನು ನೋಡಿ -

೫೫ ನಮ್ಮ ಗುರು (ದ್ರೋಣನು) ರಚಿಸಿದ ಚಕ್ರವ್ಯೂಹವನ್ನು ಭೇದಿಸುವುದು ಬೇರೆ ಯಾರಿಗೂ ಸಾಧ್ಯವಿರಲಿಲ್ಲ. ಅದನ್ನು ಭೇದಿಸಿ ಹೊಕ್ಕು ರಣರಂಗದಲ್ಲಿ ಶತ್ರುರಾಜರನ್ನು [illegible] ಕೊಂದ ಅರ್ಜುನ ಪುತ್ರನೇ, ನಿನಗೆ ಸರಿಸಾಟಿಯಾದ ವೀರರುಂಟೆ ?

ಪಲರಿರ್ದು ಕಾದಿದರ್ ಮೆ ।
ಯ್ಗಲಿಗಳ್ ನಿನ್ನೊಂದೆ ಮೆಯ್ಯೊಳಂ ತವೆ ಕೊಂದಯ್ ॥
ಪಲರಂ ನಿನ್ನಂ ಪೆತ್ತಳ್ ।
ಮೊಲೆವೆತ್ತಳೆ ವೀರಜನನಿವೆಸರಂ ಪೆತ್ತಳ್ ॥೫೬॥

ಅಸಮಬಲ ಭವದ್ವಿಕ್ರಮ ।
ಮಸಂಭವಂ ಪೆಱರ್ಗೆ ನಿನ್ನನಾನಿನಿತಂ ಪ್ರಾ ॥
ರ್ಥಿಸುವೆನಭಿಮನ್ಯು ನಿಜಸಾ ।
ಹಸ್ಯೈಕದೇಶಾನುಮರಣಮೆಮಗಕ್ಕೆ ಗಡಾ ॥೫೭॥

ಎಂದಾತ್ಮಗತದೊಳೆ ಬಗೆದು -

ಧಾರಿಣಿಯೊಳ್ ನಿಜಸಂಯುಗ ।
ಭಾರಮನಾಂತಿರ್ದ ವೀರಪುಂಗವರಿರೆ ತ ॥
ದ್ಭಾರಮನಾಂತಭಿಮನ್ಯುಕು ।
ಮಾರಂ ಪುಗೆ ವೀರರಮಣನೆನಿಸಿದನಲ್ತೇ ॥೫೮॥

ತರುಣಯುವವೃದ್ಧವಿಕ್ರಮ ।
ಪರಿಣತರುಱದಿಕ್ಕಿ ಸಿಂಹಸಾಹಸನಿವನುಂ ॥
ತರುಣನೆ ಆನುಂ ಯುವನೆನೆ ।
ಸುರಾಪಗಾನಂದನಂ ಮಹಾಜರ್ಜರನೇ ॥೫೯॥

ಎಂದಭಿಮನ್ಯುಕುಮಾರನ ಸಾಹಸಕ್ಕೆ ಮೆಚ್ಚಿ -

೫೬. ಹಲವಾರು ಸಹಜ ಶೂರರು ಒಟ್ಟಾಗಿ ಬಂದು ಹೋರಾಡುವಾಗ ಒಬ್ಬಂಟಿಗನಾಗಿಯೆ ನೀನು ಅವರೆಲ್ಲರನ್ನೂ ಕೊಂದೆ. ನಿನ್ನನ್ನು ಹೆತ್ತವಳು ಸಾಮಾನ್ಯ ಸ್ತ್ರೀಯಲ್ಲ, ವೀರಜನನಿಯೆಂಬ ಖ್ಯಾತಿಗೆ ಪಾತ್ರಳು.

೫೭. ಅದ್ವಿತೀಯ ಬಲಶಾಲಿಯಾದ ಅಭಿಮನ್ಯು ಕುಮಾರನೆ, ನಿನ್ನ ಪರಾಕ್ರಮ ಇತರರಿಗೆ ಅಸಾಧ್ಯ. ನಾನು ನಿನ್ನಲ್ಲಿ ಇಷ್ಟನ್ನೆ ಬೇಡಿಕೊಳ್ಳುತ್ತೇನೆ - ನಿನ್ನ ಸಹವಾಸದಲ್ಲಿ ಒಂದಂಶದಷ್ಟಾದರೂ ನಮ್ಮಲ್ಲಿದ್ದರೆ ಅದಕ್ಕನುಗುಣವಾದ ವೀರಮರಣ ನಮಗೆ ಒದಗಿ ಬರಲಿ.

ವ॥ ಎಂದು ತನ್ನ ಮನದಲ್ಲಿಯೆ ಭಾವಿಸಿ -

೫೮ ಯುದ್ಧದ ಭಾರವನ್ನು ವಹಿಸಿದ ವೀರಶ್ರೇಷ್ಠರು (ಅನೇಕರು) ಇದ್ದರೂ ಆ ಭಾರವನ್ನು ತಾನು ವಹಿಸಿಕೊಂಡು ಅಭಿಮನ್ಯು ಕುಮಾರನು ಯುದ್ಧರಂಗವನ್ನು ಹೊಕ್ಕಾಗ ವೀರಾಧಿವೀರನೆನಿಸಿದನಲ್ಲವೆ ?

೫೯ ತರುಣರು, ಯುವಕರು, ವೃದ್ಧರು ಎಂಬ ಭೇದವಿಲ್ಲದೆ ಪರಾಕ್ರಮಶಾಲಿಗಳೂ ಯುದ್ಧಪರಿಣತರೂ ಆದವರನ್ನೆಲ್ಲ ಲಕ್ಷಿಸದೆ ಹೊಡೆದು ಕೊಂದ ಸಿಂಹಸಾಹಸದ ಈತನು ಚಿಕ್ಕವನೆ ? ನಾನು ಯುವಕನೆ ? ಭೀಷ್ಮಾಚಾರ್ಯನು ತೀರ ಮುದುಕನೆ ?

ವ॥ ಎಂದು ಅಭಿಮನ್ಯು ಕುಮಾರನ ಸಾಹಸಕ್ಕೆ ಮೆಚ್ಚಿ -

ಪಸವಿನ್ನೊಳನ್ನಮಂ ಪಸಿದು ಬಂದವರ್ಗಿಕ್ಕುವ ಯುದ್ಧರಂಗದೊಳ್ ।
ಕುಸಿಯದೆ ಸೂಱೆಗೊಳ್ಳದೆ ರಣಕ್ಕೆ ಶುಚಿತ್ವಮನಪ್ಪುಕೆಯ್ವ ಮಾ ॥
ನಸಿಕೆಯ ನಾಲ್ವರುಂ ನಮಗೆ ವಂದ್ಯರವಂದಿರೊಳೀತನಲ್ತೆ ಸಾ ।
ಹಸಧನನೆಂದು ಕಯ್ಮುಗಿದನಂದಭಿಮನ್ಯುಗೆ ಕೌರವೇಶ್ವರಂ ॥೬೦॥

ಅಂತಭಿಮನ್ಯುಗೆ ಕಯ್ಗಳಂ ಮುಗಿದು ಬರುತ್ತುಂ ತನ್ನ ಮಗನಪ್ಪ ಲಕ್ಷಣ ಕುಮಾರನಂ ನೆನೆದು ಮನ್ಯೂದ್ಗತಕಂಠನಾಗಿ ತದಾಸನ್ನಪ್ರದೇಶದೊಳ್, ತನ್ನ ಕುಮಾರನಂ ಕಂಡು -

ಗಳಿತಶರಮಾಯ್ತು ಹಸ್ತಂ ।
ಗಳಿತರಣೋತ್ಸಾಹಮಾಯ್ತು ಹೃದಯಂ ನಯನಂ ॥
ಗಳಿತಾಶ್ರುವಾಯ್ತು ಕೌರವ ।
ಕುಲತಿಲಕಂಗಾ ಕುಮಾರನಂ ಕಾಣಲೊಡಂ ॥೬೧॥

ಅಂತು ಪುತ್ರಸ್ನೇಹಕಾತರಹೃದಯನಾಗಿ ಗಾಂಧಾರೀನಂದನಂ ಭಾನುಮತೀನಂದನನ ವದನಾರವಿಂದಮಂ ನೋಡಿ -

ಜನಕಂಗೆ ಜಲಾಂಜಲಿಯಂ ।
ತನೂಭವಂ ಕುಡುವುದುಚಿತಮದುಗೆಟ್ಟೀಗಳ್ ॥
ನಿನಗಾಂ ಕೊಡುವಂತಾದುದೆ ।
ತನೂಜ ನೀಂ ಕ್ರಮವಿಪರ್ಯಯಂ ಮಾಡುವುದೇ ॥೬೨॥

೬೦. ಬರಗಾಲದಲ್ಲಿ ಹಸಿದು ಬಂದವರಿಗೆ ಅನ್ನದಾನ ಮಾಡುವವನು, ಯುದ್ಧರಂಗದಲ್ಲಿ ಕುಸಿಯದವನು, (ಸೋತವರನ್ನು) ಸುಲಿಗೆ ಮಾಡದವನು, ಯುದ್ಧದಲ್ಲಿ ಧರ್ಮವನ್ನು ಮೀರದೆ ಅದಕ್ಕೆ ಪಾವಿತ್ರ್ಯವನ್ನು ತಂದುಕೊಡುವವನು - ಮಹಾತ್ಮರಾದ ಈ ನಾಲ್ವರು ನಮಗೆ ಪೂಜ್ಯರು. ಅಂತಹ ನಾಲ್ವರಲ್ಲಿ ಈ ಮಹಾ ಸಾಹಸವಂತನೂ ಒಬ್ಬನೆಂದು ಕೌರವರಾಜನು ಅಭಿಮನ್ಯುವಿಗೆ ಕೈಮುಗಿದನು.

ವ॥ ಹೀಗೆ ಅಭಿಮನ್ಯುವಿಗೆ ಕೈಮುಗಿದು ಬರುತ್ತ ತನ್ನ ಮಗನಾದ ಲಕ್ಷಣ ಕುಮಾರನನ್ನು ನೆನೆದು ದುಃಖದಿಂದ ಕೊರಳು ಬಿಗಿದುಬಂದು, ಅದರ ಹತ್ತಿರದ ಪ್ರದೇಶದಲ್ಲಿಯೆ ತನ್ನ ಆ ಕುಮಾರನನ್ನು ಕಂಡನು.

೬೧. ಮಗನನ್ನು ಕಂಡೊಡನೆ ದುರ್ಯೋಧನನ ಕೈಯಲ್ಲಿಯ ಆಯುಧ ಬಿದ್ದು ಹೋಯಿತು ; ಹೃದಯದಲ್ಲಿದ್ದ ಯುದ್ಧೋತ್ಸಾಹ ಜರ್ರನೆ ಇಳಿದುಹೋಯಿತು ; ಕಣ್ಣು ಹನಿಯತೊಡಗಿದುವು.

ವ॥ ಹೀಗೆ ಪುತ್ರಪ್ರೇಮದಿಂದ ಉದ್ವಿಗ್ನನಾಗಿ ದುರ್ಯೋಧನನು ಲಕ್ಷಣ ಕುಮಾರನ ಮುಖಕಮಲವನ್ನು ನೋಡಿ -

೬೨. ಮಗನು ತಂದೆಗೆ ಎಳ್ಳು ನೀರಿನ ತರ್ಪಣ ಬಿಡುವುದು ಲೋಕರೂಢಿ. ಅದಕ್ಕೆ ವ್ಯತಿರಿಕ್ತವಾಗಿ ಈಗ ನಿನಗೆ ನಾನು ತರ್ಪಣ ಬಿಡುವಂತಾಯಿತೆ ? ಮಗನೆ, ನೀನು ಹೀಗೆ ಕ್ರಮವನ್ನು ವ್ಯತ್ಯಾಸಗೊಳಿಸಬೇಕೆ ?

ಸುರಪತಿಸುತಶರವರ್ಷಂ ।
ಸುರತರುನವಕುಸುಮವರ್ಷಮಾಗಿರೆ ನಿನಗೀ ॥
ಗುರುಜನದೃಗ್ಜಲವರ್ಷಂ ।
ದೊರೆಕೊಂಡಿತ್ತೆನ್ನ ಪಾಪಕರ್ಮನ ಕತದಿಂ ॥೬೩॥

ಎಂದಲ್ಲಿ ನಿಲಲಾಱದಾ ಪ್ರದೇಶದಿಂ ತಳರ್ದು -

ಮದವದರಿಹಸ್ತಿ ಮಸ್ತಕ ।
ಭಿದುರಂ [ಭಯ] ವಿಧುರನನ್ಯಬಾಣಚ್ಛಿದುರಂ ॥
ಮದಪತ್ಯನಿರ್ವಿಶೇಷಂ ।
[ಮದವದ್ದೋರ್ಲಲಿತನೆತ್ತಣಂ] ವೃಷಸೇನಂ ॥೬೪॥

ಎಂದಱಸುತ್ತುಂ ಬರೆವರೆ ಧರ್ಮಪುತ್ರಕೋಪಾನಲದಹ್ಯಮಾನನಾಗಿರ್ದ ಶಲ್ಯನುಮಂ ವಿಜಯಶರವಿಲುಳಿತನಾಗಿರ್ದ ಭಗದತ್ತನುಮಂ ಗಾಂಡೀವಿ ಪ್ರಚಂಡ ಕೋದಂಡಶರಶಯನನಾಗಿರ್ದ ಸಿಂಧುರಾಜನುಮಂ ಸಹದೇವ ಖಡ್ಗೋಗ್ರಹಸ್ತಧ್ವಸ್ತನಾಗಿರ್ದ ಶಕುನಿಯುಮಂ ನಕುಲಕುಂತಕಬಳಿತಶರೀರರಾಗಿರ್ದ ದಂದಶೂಕರೆನಿಸಿದ ಶತಬಿಂದುವಿನ ಸುತಪಂಚಕಮುಮಂ ನಿವಾತಕವಚತಳತಳೂಕಪೌಲೋಮಪ್ರಮುಖಮಹಾಸಮರ್ಥರೆನಿಪ ದೈತ್ಯಾವತಾರರುಮಂ ಕಾಮರೂಪದೇಶಾಧೀಶ್ವರರುಮಂ ಷಷ್ಟಿಸಹಸ್ರಕೋಟ್ಯತಿರಥರುಮನಷ್ಟಾದಶ ಕೋಟಿ ಸಮರಥರುಮಂ ಸಂಶಪ್ತಕನಾಮಧೇಯರೆನಿಸಿದ ಸುಶರ್ಮತ್ರಿಗರ್ತಾಧೀಶ್ವರರುಮಂ ಬಕಾಸುರನ ಮೊಮ್ಮನಪ್ಪ ಜಟಾಸುರನ ಮಕ್ಕಳಪ್ಪ ಹಲಾಯುಧ ಮುಸಲಾಯುಧ ಕಾಲ ನೀಲ

೬೩. ಅರ್ಜುನನ ಬಾಣದ ಮಳೆ ಕಲ್ಪವೃಕ್ಷದ ಹೂಮಳೆಯಾಗಿದ್ದ ನಿನಗೆ ಪಾಪಿಷ್ಠನಾದ ಈ ನನ್ನಿಂದಾಗಿ ತಂದೆಯ ಕಣ್ಣೀರ ಮಳೆಯನ್ನೂ ತಾಳುವಂತಾಯಿತು.

ವ॥ ಎಂದು ಅಲ್ಲಿ ನಿಲ್ಲಲಾರದೆ, ಆ ಪ್ರದೇಶದಿಂದ ಹೊರಟು -

೬೪. ಶತ್ರುಗಳ ಮದದಾನೆಗಳ ಕುಂಭಸ್ಥಳಗಳನ್ನು ಸೀಳುವವನೂ, ಭಯವಿರಹಿತನೂ, ಶತ್ರುಬಾಣಗಳನ್ನು ಕತ್ತರಿಸಿ ಒಗೆಯುವವನೂ, ನನ್ನ ಮಗನಂತೆಯೆ ಇರುವವನೂ ಬಲಿಷ್ಠವಾದ ಬಾಹುಗಳುಳ್ಳ ಚೆಲುವನೂ ಆದ ವೃಷಸೇನನು ಎಲ್ಲಿ ?

ವ॥ ಎಂದು ಹುಡುಕುತ್ತ ಬರಲಾಗಿ, ಧರ್ಮರಾಜನ ಕೋಪಾಗ್ನಿಯಿಂದ ಸುಟ್ಟು ಬಿದ್ದ ಶಲ್ಯನನ್ನು, ಅರ್ಜುನನ ಬಾಣದಿಂದ ಬಿದ್ದ ಭಗದತ್ತನನ್ನು, ಗಾಂಡೀವಿಯ (ಅರ್ಜುನನ) ಪ್ರಚಂಡವಾದ ಬಿಲ್ಲಿನಿಂದ ಹರಿದು ಬಂದ ಬಾಣಗಳ ಹಾಸುಗೆಯ ಮೇಲೆ ಮಲಗಿದ ಜಯದ್ರಥನನ್ನು, ಸಹದೇವನ ತೀವ್ರವಾದ ಖಡ್ಗ ಪ್ರಹಾರದಿಂದ ಹತನಾದ ಶಕುನಿಯನ್ನು, ನಕುಲನ (೧. ಪಾಂಡವರಲ್ಲಿ ಒಬ್ಬನಾದ ನಕುಲ. ೨. ಮುಂಗುಸಿ) ಈಟಿಗೆ ತುತ್ತಾದ ಹಾವೆನಿಸಿದ ಶತಬಿಂದುವಿನ ಐವರು ಮಕ್ಕಳನ್ನು, ನಿವಾತಕವಚ ತಳ ತಳೂಕ ಪೌಲೋಮ ಮೊದಲಾದ ಮಹಾಶಕ್ತಿವಂತರೆನಿಸಿದ್ದ ದೈತ್ಯರನ್ನು, ಕಾಮರೂಪ ದೇಶದ ರಾಜರನ್ನು, ಅರುವತ್ತು ಸಾವಿರ ಕೋಟಿ ಅತಿರಥರನ್ನು,ಹದಿನೆಂಟು ಕೋಟಿ ಸಮರಥರನ್ನು, ಸಂಶಪ್ತಕರೆಂಬ ಹೆಸರಿದ್ದ ಸುಶರ್ಮ ತ್ರಿಗರ್ತ ರಾಜರನ್ನು, ಬಕಾಸುರನ ಮೊಮ್ಮಗನಾದ,

ರೂಕ್ಷರಾಕ್ಷಸರುಮಂ ಕಾಂಭೋಜಸುದಕ್ಷಿಣದಂಡಧರರೆನಿಪ ಶಂಖಾಯುಧರುಮಂ ಸೌಬಲಬೃಹದ್ಬಲಂ ವಿಂದಾನುವಿಂದಪ್ರಭೃತಿಗಳುಮಂ ಕಂಡು ಶೋಕಾಕುಳೀಕೃತಚಿತ್ತನಾಗಿ -

ಗುಣಿಗಳ್ ತ್ರಿಲೋಕಚೂಡಾ ।
ಮಣಿಗಳ್ ಕೈಲಾಸಕಲ್ಪಸುಭಟಾಗ್ರಣಿಗಳ್ ॥
[ಪೊಣರಲ್ ನೆರೆದೆನ್ನಯ] ಕಾ ।
ರಣದಿಂದೀ ನೃಪಸುತರ್ಕಳಟ್ಟೌಡಿದರೇ ॥೬೫॥

ಎಂದು ಪಶ್ಚಾತ್ತಾಪಂಗೆಯ್ಯೆ ಸಂಜಯಂ ಸಂತೈಸಿ -

ನಯಮಂ ಪೇಟ್ಟೊಡೆ ಸಂಧಿಮಾಡಿಕೆಯದಿರ್ ಕೌಂತೇಯರೊಳ್ ಯುದ್ಧಮ ।
ಕ್ಷಯದೋಷಾವಸಥಂ ಪ್ರಧಾನಪುರುಷರ್ ಕ್ಷತ್ರಕ್ಷಯಸ್ಥಾನಮೆಂ ॥
ದು ಯಥಾರ್ಥಂ ನುಡಿದಾರ್ತರಿಲ್ಲ ಮೊದಲೊಳ್ ನಿನ್ನಂ ಹಿಡಿಂಬಾಂತಕಂ ।
ಲಯಕಾಲಾಂತಕನಂತೆ ಕೊಲ್ಲದಿರನೀ ಚಾಲುಕ್ಯಕಂಠೀರವಂ ॥೬೬॥

ಗದ್ಯ॥ ಇದು ಸಮಸ್ತಭುವನವಲ್ಲಭ ಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯ ಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪ ಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀಸಾಹಸಭೀಮ ವಿಜಯದೊಳ್ದುರ್ಯೋಧನಪ್ರಳಾಪವ್ಯಾವರ್ಣನಂ ಚತುರ್ಥಾಶ್ವಾಸಂ ಸಂಪೂರ್ಣಂ ॥

ಜಟಾಸುರನ ಮಕ್ಕಳಾದ ಹಲಾಯುಧ, ಮುಸಲಾಯುಧ, ಕಾಲ, ನೀಲ ಎಂಬ ಕ್ರೂರ ರಾಕ್ಷಸರನ್ನು, ಕಾಂಭೋಜ ಸುದಕ್ಷಿಣ 'ದಂಡಧರ' (೧. ರಾಜ. ೨. ಯಮ.) ರೆನಿಸುವ ಶಂಖಾಯುಧರನ್ನು, ಸೌಬಲ, ಬೃಹದ್ಬಲ, ವಿಂದ, ಅನುವಿಂದ ಮೊದಲಾದವರನ್ನು (ಸತ್ತು ಬಿದ್ದ) ಈ ಎಲ್ಲರನ್ನೂ ಕಂಡು ಶೋಕವಿಹ್ವಲನಾಗಿ -

೬೫. ಸದ್ಗುಣಿಗಳೂ, ಮೂರು ಲೋಕಗಳಲ್ಲಿ ಶ್ರೇಷ್ಠರೆನಿಸಿದವರೂ, ಕೈಲಾಸ ಗಿರಿಯಂತೆ ಉನ್ನತರೂ ಪೂಜ್ಯರೂ ಮೇಲ್ಮಟ್ಟದ ಯೋಧರೂ ಆದ ಈ ರಾಜಕುಮಾರರು ಯುದ್ಧಕ್ಕೆಂದು ಬಂದು ಕೂಡಿ, ನನ್ನಿಂದಾಗಿ ನಾಶವಾದರಲ್ಲವೆ ?

ವ॥ ಎಂದು ಮರುಗುತ್ತಿರಲು ಸಂಜಯನು ಅವನನ್ನು ಸಮಾಧಾನಗೊಳಿಸಿ -

೬೬. ರಾಜನೀತಿಯನ್ನು ಹೇಳುವುದಾದರೆ, ನೀನು ಈಗ ಸಂಧಿಮಾಡಿಕೊ ; ಯುದ್ಧ ಮಾಡಬೇಡ. ಪಾಂಡವರೊಡನೆ ಯುದ್ಧ ಮಾಡುವುದು ಮಹಾ ದೋಷಕ್ಕೆ ಎಡೆಯಾಗುತ್ತದೆ ; ಕ್ಷತ್ರಿಯರೆಲ್ಲ ನಾಶವಾಗುತ್ತಾರೆ ಎಂದು ಹಿರಿಯರಾದವರು ಈ ಮೊದಲು ನಿನಗೆ ಹೇಳಿದರೂ ಪ್ರಯೋಜನವಾಗಲಿಲ್ಲ. ಭೀಮನು ಪ್ರಳಯಯಮನಂತೆ ನಿನ್ನನ್ನು ಕೊಲ್ಲದೆ ಬಿಡನು.

# ಪಂಚಮಾಶ್ವಾಸಂ

ಶ್ರೀಕಾಂತಂ ಸಮರಜಯ ।
ಶ್ರೀಕಾಂತಂ ಕುರುಕುಲಾಂತಕಂ ರಿಪುದರ್ಪೋ ॥
ದ್ರೇಕಹರಂ ಮೃಗರಾಜಪ ।
ತಾಕಂ ಕೇವಳನೆ ಸಮರಸಾಹಸಭೀಮಂ ॥೧॥

ಎಂಬುದುಮದನವಕರ್ಣಿಸಿ ಭೀಮಸೇನನ ಗದಾಪರಿಘಪ್ರಹರಣದಿಂ ರುಧಿರ ಪ್ರವಾಹವಶಗತನಾಗಿರ್ದ ಯುವರಾಜನಿರ್ದೆಡೆಯಂ ಕುರುರಾಜನೆಯ್ದಿವಂದಾಗಳ್ -

ಇದು ಭೀಮಂ ದೇವ ಕಾಳಿಂಗನ ಗಜಘಟೆಯಂ ಕೊಂಡ ತಾಣಂ ಭರಂಗೆ ।
ಯ್ದಿದು ಭೀಮಂ ದೇವ ಕೌರವ್ಯರನನಿಬರುಮಂ ತಿಂದು ತಾಣಂ ಮೊಗಂಬೊ ॥
ಕ್ಕಿದು ಭೀಮಂ ದೇವ ದುಶ್ಯಾಸನರುಧಿರಮುಮಂ ಪೀರ್ದ ತಾಣಂ ಭಲಂಬ ।
ಟ್ಟಿದು ಭೀಮಂ ದೇವ ಧಾತ್ರೀಸುತನಿಭದೊಳಿಭಂ ಪೋರ್ವವೊಲ್ ಪೋರ್ದ ತಾಣಂ ॥೨॥

ಪುಡಿಯೊಳ್ ಪೊರಳ್ಚಿಯುಂ ಮೆ ।
ಯ್ಯಡಗಂ ತಿಱಿತಿಱಿದು ಕೊಱೆದು ತಿಂದುಂ ಗೊಟ್ಟಂ ॥
ಗುಡಿದುಂ ನೆತ್ತರನೆಂತುಂ ।
ಹಿಡಿಂಬರಿಪು ತಣಿದನಿಲ್ಲ ದುಶ್ಯಾಸನನಂ ॥೩॥

೧. ಐಶ್ವರ್ಯಕ್ಕೆ ಅಧಿಪತಿಯೂ, ಯುದ್ಧರಂಗ ವಿಜಯಿಯೂ, ಕುರುವಂಶಕ್ಕೆ ಯಮಸ್ವರೂಪನೂ, ಶತ್ರುಗಳ ಗರ್ವವನ್ನು ಭಂಗಿಸಿದವನೂ, ಸಿಂಹಧ್ವಜನೂ ಆದ ಸಮರ ಪರಾಕ್ರಮಿ ಭೀಮನು ಸಾಮಾನ್ಯನೆ ?

ವ॥ ಹೀಗೆಂದ (ಸಂಜಯನ) ಮಾತನ್ನು ಕೇಳಿ ಭೀಮಸೇನನ ಗದಾಪ್ರಹಾರದಿಂದ ನೆತ್ತರ ನದಿಯಲ್ಲಿ ಯುವರಾಜ (ದುಶ್ಯಾಸನ) ನು ಬಿದ್ದಿರುವ ಸ್ಥಳಕ್ಕೆ ದುರ್ಯೋಧನನು ಬಂದಾಗ -

೨. ಕಳಿಂಗರಾಜನ ಗಜಸೈನ್ಯವನ್ನು ಭೀಮನು ಕೊಂದ ಸ್ಥಳ ಇದು ; ರಭಸದಿಂದ ಕೌರವರೆಲ್ಲರನ್ನೂ ಭೀಮನು ನುಂಗಿದ ಸ್ಥಳ ಇದು ; ದೇವಾ, ದುಶ್ಯಾಸನನ ನೆತ್ತರನ್ನು ಭೀಮನು ಹೀರಿದ ಜಾಗ ಇದು ; ದೇವಾ. ಭಗದತ್ತನ ಆನೆಯೊಡನೆ ತಾನೂ ಒಂದು ಆನೆಯೆಂಬಂತೆ ಭೀಮನು ಹೋರಾಡಿದ ಸ್ಥಳ ಇದು.

೩. ಭೀಮನು ದುಶ್ಯಾಸನನನ್ನು ಹುಡಿಯಲ್ಲಿ ಹೊರಳಾಡಿಸಿದನು , ಅವನ ಮೈ ಮಾಂಸವನ್ನು ತುಂಡು ತುಂಡುಮಾಡಿ ತಿಂದನು . ರಕ್ತವನ್ನು ಗೊಟ್ಟವೆತ್ತಿ ಕುಡಿದನು. ಅಷ್ಟಾದರೂ ಅವನಿಗೆ ತೃಪ್ತಿಯಾಗಲಿಲ್ಲ.

ಎಂದು ಸಂಜಯಂ ಪೇೞೆ ಕೇಳಗಿವಿಗೇಳ್ದು ಕಿಱಿದೆಡೆಯಂ ಪೋಗೆ ತನ್ನ ತಮ್ಮನ ಕಣ್ಣಂ ಕರ್ದುಂಕುವ ಕಾಗೆಗಳುಮಮಂ ಕರುಳ ಪಿಣಿಲಂ ತೆಗೆವ ಪರ್ದುಗಳುಮಮಂ ಬರಿಯ ಬಳಸಿಂಗಂ ಬಂದು ಕಾಡುವ ಬಳ್ಳುಗಳುಮಮಂ ನರವನುಗಿವ ನರಿಗಳುಮಮಂ ಸೆರೆಯಂ ತೆಗೆವ ಸೀಳ್ನಾಯ್ಗಳುಮಮಂ ಕೊರಲಂ ಕರ್ಚಿ ನಿಲ್ವ ಕೋಕಂಗಳುಮಮಂ ಪುಡಿಯೊಳ್ ಪೊರಳ್ಚುವ ಪುಲ್ಮರುಳ್ಗಳುಮಮಂ ಬೆನ್ನ ಬೀವಂ ತೆಗೆವ ಬೇತಾಳರುಮಮಂ ಕತ್ತಿಗೆಯಂ ಕೊಂಡು ಕಪಾಲಮಂ ಕಡಿವ ಕಾಳರಕ್ಕಸಿಯುರುಮಂ ಪುಣ್ಣ ಬಾಯೊಳ್ ತಮ್ಮ ಬಾಯನಿಟ್ಟು ಭೀಮಂ ಕುಡಿದುೞಿದ ನೆತ್ತರಂ ಕುಡಿಯಲ್ ಪಡೆಯದಳವಱಿದು ಪುಯ್ಯಲಿಡುವ ಪಿಶಿತಿನಿಯರುಮಮಂ ಕಂಡು ತಾನೆ ಸೋದು ಕಳೆದು ಸೌಧರ್ಮಿಕೆಗೆ ಮಿಕ್ಕು ಬರೆವರೆ ಅೞಲಂ ಸೈರಿಸಲಾಱದೆ -

ನಡುವುಡಿವನ್ನಮೇಱೆ ಬರೆಯೆಲ್ವುಡಿವನ್ನೆಗಮೊತ್ತಿ ಮೆಟ್ಟಿ ಮೆ ।
ಯ್ಯಡಗಡಗಾಗೆ ಮುನ್ನುರಮನಿರ್ಬಗಿಯಾಗಿರೆ ಪೋೞ್ದು ನೆತ್ತರಂ ॥
ಕುಡಿ[ಕುಡಿದಾರ್ದ ವೈರಿಯುೞಿ]ದನ್ನೆಗಮೆನ್ನಱಲೆಂತು ಪೋಕುಮೆಂ ।
ದಡಿಗಡಿಗಟ್ಟು ತನ್ನಣುಗದಮ್ಮನನೀಕ್ಷಿಸಿದಂ ಸುಯೋಧನಂ ॥೪॥

ಅಂತು ನಿಂದು ನೋಡಿ ಪಲುಂಬಿ ಪಲವಾಡಿ -

ವ॥ ಹೀಗೆ ಸಂಜಯನು ನುಡಿಯಲಾಗಿ, ಅದನ್ನು ಕಿವಿಯ ಮೇಲೆ ಹಾಕಿಕೊಳ್ಳದೆ ದುರ್ಯೋಧನನು ಸ್ವಲ್ಪ ಮುಂದೆ ಹೋಗಿ ಅಲ್ಲಿ ತನ್ನ ತಮ್ಮನ ಕಣ್ಣುಗಳನ್ನು ಕುಕ್ಕುವ ಕಾಗೆಗಳನ್ನೂ,ಕರುಳ ತೊಡಕನ್ನು ಹಿಡಿದೆಳೆಯುವ ಹದ್ದುಗಳನ್ನೂ, ಪಕ್ಕೆಯ ಬಳಿ ಬಂದು ಕಾಡುವ ಗುಳ್ಳೆನರಿಗಳನ್ನೂ, ನರವನ್ನು ಕೀಳುವ ನರಿಗಳನ್ನೂ, ರಕ್ತನಾಳಗಳನ್ನು ಸೆಳೆಯುವ ಸೀಳ್ನಾಯಿಗಳನ್ನೂ, ಕೊರಳನ್ನು ಕಚ್ಚಿ ನಿಲ್ಲುವ ತೋಳಗಳನ್ನೂ, ಹೆಣವನ್ನು ಹುಡಿಯಲ್ಲಿ ಹೊರಳಾಡಿಸುವ ಕ್ಷುದ್ರ ಪಿಶಾಚಿಗಳನ್ನೂ, ಬೆನ್ನ ಹುರಿಯನ್ನು ಕೀಳುವ ಬೇತಾಳಗಳನ್ನೂ, ಕೈಗತ್ತಿಯಿಂದ ತಲೆಬುರುಡೆಯನ್ನು ಕಡಿಯುವ ಕ್ರೂರ ರಾಕ್ಷಸಿಯರನ್ನೂ, ಗಾಯಗಳ ಬಾಯಿಗೆ ತಮ್ಮ ಬಾಯನ್ನಿಟ್ಟು, ಭೀಮನು ಕುಡಿದರೂ ಉಳಿದ (ಅಲ್ಪಸ್ವಲ್ಪ) ರಕ್ತವನ್ನು ಕುಡಿಯಬೇಕೆಂದು ಪ್ರಯತ್ನಿಸಿ ಅದು ಸಾಧ್ಯವಾಗದೆ ಕಂಗೆಟ್ಟು ಗೋಳಿಡುವ ಪಿಶಾಚಿಗಳನ್ನೂ ಕಂಡು - ಅವುಗಳನ್ನೆಲ್ಲ ದುರ್ಯೋಧನನು ತಾನೆ ಗದರಿ ಓಡಿಸಿ ಸೋದರ ವಾತ್ಸಲ್ಯ ಉಕ್ಕಿಬಂದು ದುಃಖವನ್ನು ಸೈರಿಸಲಾರದೆ -

೪. ನಡು ಮುರಿಯುವಂತೆ ಆಕ್ರಮಿಸಿ, ಪಕ್ಕೆಯ ಮೂಳೆ ಮುರಿಯುವಂತೆ ಅಮುಕಿ, ಮೈಯ ಮಾಂಸ ನಜ್ಜುಗುಜ್ಜಾಗುವಂತೆ ತುಳಿದು, ಎದೆಯನ್ನು ಎರಡು ಹೋಳಾಗಿ ಸೀಳಿ ನೆತ್ತರನ್ನು ಕುಡಿಕುಡಿದು ಕೇಕೆ ಹೊಡೆದ ವೈರಿಯಿನ್ನೂ ಬದುಕಿ ಉಳಿದಿರುವಾಗ ನನ್ನ ದುಃಖ ಹೇಗೆ ಹೋದೀತು ? ಎಂದು ಹೆಜ್ಜೆ ಹೆಜ್ಜೆಗೆ ರೋದಿಸುತ್ತ ದುರ್ಯೋಧನನು ತನ್ನ ಅಕ್ಕರೆಯ ತಮ್ಮನನ್ನು ನೋಡಿದನು.

ವ॥ ಹೀಗೆ ನಿಂತು ನೋಡಿ ದುಃಖಿಸುತ್ತ, ಹಲವು ಬಗೆಯಾಗಿ ಹಾಡಿಕೊಳ್ಳುತ್ತ -

ನಿಜಜೀವಂ ಪರಲೋಕದೊಳ್ ನಿಜಮಹಾಮಾಂಸಂ ಪಿಶಾಚಾಸ್ಯದೊಳ್ ।
ನಿಜರಕ್ತಂ ರಿಪುಕುಕ್ಷಿಯೊಳ್ ನಿಜಶಿರಂ ನಕ್ತಂಚರೀಹಸ್ತದೊಳ್ ॥
ನಿಜಕಾಯಂ ಕುರುಭೂಮಿಯೊಳ್ ನೆಲಸೆ ಗಾಂಧಾರೀಜ ದುರ್ಯೋಧನಾ ।
ನುಜ ದುಶ್ಯಾಸನ ಭೀಮಭೀಮಗದೆಯಿಂ ಪಂಚತ್ವಮಂ ಪೊರ್ದಿದಯ್ ॥೫॥

ಎಂದತಿಪ್ರಳಾಪಂಗೆಯ್ದು -

ನಿನ್ನಂ ಕೊಂದಂ ಗಡಮೊಳ
ನಿನ್ನುಂ ಕೊಂದವನನಿ[ಕ್ಕಿ] ಕೊಲ್ಲದೆ ಮಾಣ್ದಾ ॥
ನಿನ್ನುಮೊಳೆಂ (ಗಡಿದಕ್ಕುಮೆ)
ನಿನ್ನಯ ಕೂರ್ಮೆಗಮದೆನ್ನ ಸೌಧರ್ಮಿಕೆಗಂ ॥೬॥

ಜನನೀಸ್ತನ್ಯಮನುಂಡೆನಾಂ ಬಟಿಕೆ ನೀಂ ಸೋಮಾಮೃತಂ ದಿವ್ಯಭೋ ।
ಜನಮೆಂಬಿಂತಿವನುಂಡೆನಾಂ ಬಟಿಕೆ ನೀಂ ಬಾಲತ್ವದಿಂದೆಲ್ಲಿಯುಂ ॥
ವಿನಯೋಲ್ಲಂಘನಮಾದುದಿಲ್ಲ ಮರಣಕ್ಕೆನ್ನಿಂದೆ ನೀಂ ಮುಂಚಿದಯ್ ॥
ಮೊನೆಯೊಳ್ ಸೂಱ್ತಡಮಾಯ್ತಿದೊಂದೆಡೆಯೊಳಂ ಹಾ ವತ್ಸ ದುಶ್ಯಾಸನಾ ॥೭॥

ಎಂದು ಕುರುಕುಲಪ್ರದೀಪಂ ವಿಪ್ರಳಾಪಂಗೆಯ್ದು -

೫. ನಿನ್ನ ಜೀವ ಪರಲೋಕದಲ್ಲಿ, ನಿನ್ನ ಮಾಂಸ ಪಿಶಾಚಿಗಳ ಬಾಯಲ್ಲಿ, ನಿನ್ನ ರಕ್ತ ವೈರಿಯ ಹೊಟ್ಟೆಯಲ್ಲಿ, ನಿನ್ನ ತಲೆ ನಿಶಾಚರಿಯ ಕೈಯಲ್ಲಿ, ನಿನ್ನ ದೇಹ ಕುರುಕ್ಷೇತ್ರದಲ್ಲಿ ನೆಲಸಲಾಗಿ ಗಾಂಧಾರೀಪುತ್ರ, ದುರ್ಯೋಧನನ ತಮ್ಮನೆ, ಭೀಮನ ಗದೆಯಿಂದ ನೀನು 'ಪಂಚತ್ವ' (೧. ಮರಣ. ೨. ಐದು ಅಂಶಗಳು ಐದು ಬೇರೆ ಬೇರೆ ಸ್ಥಾನಗಳಿಗೆ ಹೋಗುವುದು)ವನ್ನು ಹೊಂದಿದೆ.

ವ॥ ಎಂದು ಅತಿಯಾಗಿ ಶೋಕಿಸಿ -

೬. ನಿನ್ನನ್ನು ಕೊಂದವನು ಇನ್ನೂ ಬದುಕಿದ್ದಾನೆ. ಕೊಂದವನನ್ನು ಹೊಡೆದು ಕೊಲ್ಲದೆ ಬಿಟ್ಟ ನಾನು ಕೂಡ ಇನ್ನು ಜೀವಂತವಾಗಿಯೆ ಉಳಿದಿದ್ದೇನೆ. ನಿನ್ನ ಪ್ರೀತಿಗೂ ನನ್ನ ಕುಟುಂಬ ವಾತ್ಸಲ್ಯಕ್ಕೂ ಇದು ಯೋಗ್ಯವೇ ?

೭. ತಾಯ ಎದೆ ಹಾಲನ್ನು ನಾನು ಮೊದಲುಂಡ ಬಳಿಕ ನೀನುಂಡೆ ; ಸೋಮರಸವನ್ನೂ ಉತ್ತಮವಾದ ಭೋಜನವನ್ನೂ ನಾನು ಸೇವಿಸಿದ ಬಳಿಕವೇ ನೀನು ಸೇವಿಸಿದೆ ; ಚಿಕ್ಕಂದಿನಿಂದ ಇಲ್ಲಿಯವರೆಗೆ ಎಲ್ಲೆಲ್ಲಿಯೂ ನೀನು ವಿನಯವನ್ನು ಮೀರಿ ನಡೆದವನಲ್ಲ, ಮಗು ದುಶ್ಯಾಸನಾ, ಮರಣದ ವಿಷಯದಲ್ಲಿ ಮಾತ್ರ ನನಗಿಂತ ಮುಂದೆ ನೀನೆ ಹೋದೆಯಲ್ಲ ! ಇದೊಂದರಲ್ಲಿ ಕ್ರಮ ತಪ್ಪಿತು.

ವ॥ ಎಂದು ಕುರುಕುಲಮುಖ್ಯನು ಪ್ರಲಾಪಿಸಿ -

ಅನುಜನ ನೆತ್ತರನೀಂಟಿದ ।
ವನನಿಂದಾಪ್ರಾಣಸಹಿತಮೀಂಟದೆ ದುರ್ಯೋ ॥
ಧನನೆಂಬ ಪೆಸರ್ಗೆ ಮುಯ್ಯಾಂ ।
ಪೆನೆ ದುಶ್ಶಾಸನನ ಬನ್ನಮಂ ನೀಗುವೆನೇ ॥೮॥

ಎಂದು ಪಿಂಗಾಕ್ಷಂ ಕೋಪಾರುಣೀಕೃತನೇತ್ರನಾಗಿ ತನ್ನ ತಮ್ಮನ ಕಳೇಬರಮಂ ನೋಡಲಾಱದೆ ಅಲ್ಲಿಂ ತಳರ್ದು -

ಕರಿತುರಗನರಕಳೇಬರ ।
ಕರಾಳರಣರಂಗದಲ್ಲಿ ಬರೆವರೆ ಕಂಡಂ ॥
ನರಕರವಿಮುಕ್ತಶರಜ ।
ರ್ಜರಿತಾಂಗನನಂಗರಾಜನಂ ಕುರುರಾಜಂ ॥೯॥

ಆಗಳದಂ ಸಂಜಯಂ ಕಂಡು 'ಗಂಡಸ್ಯೋಪರಿ ಸ್ಫೋಟಕಮೆಂ'ಬಂತೆ ನಿಜ ಪ್ರಿಯತನೂಜಾನುಜರ ಶೋಕದಿಂ ವಿಹ್ವಳೀಕೃತನಪ್ಪ ಭೂತಳೇಶ್ವರಂಗೆ ನಿಜಪ್ರಿಯ ಸಖನಪ್ಪ ಕರ್ಣನ ದರ್ಶನದಿಂ ದುಃಖಂ ಮಱುಕೊಳಿಸುಗುಮೆಂದು ಮನದೊಳೆ ಬಗೆದಿರೆ -

ನೆಗಪಿ ವರೂಥಮಂ ವಸುಧೆ ನುಂಗಿದುದುಂ ಸಮಪಾದಶೋಭೆಯುಂ ।
ಬಗೆಗೊಳೆ ತನ್ನ ಮುಂ ತೆಗೆದ ದಕ್ಷಿಣಮುಷ್ಟಿಯೆ ಕರ್ಣಮೂಲದೊಳ್ ॥
ಸೊಗಯಿಸೆ ಪಾಟಿಯಂ ನೆಱಪದಾಳ್ದನ ಕಜ್ಜಮನೊಕ್ಕು ಸತ್ತರಂ ।
ನಗುವವೊಲಿರ್ದನಂಗಪತಿ ನೆಮ್ಮಿ ನಿಜೋನ್ನತಕೇತುದಂಡಮಂ ॥೧೦॥

೮. ತಮ್ಮನ ರಕ್ತವನ್ನು ಕುಡಿದವನ ನೆತ್ತರನ್ನು ಅವನ ಜೀವಸಹಿತವಾಗಿ ಹೀರದೆ ದುರ್ಯೋಧನನೆಂಬ ಹೆಸರಿನ ಹೆಮ್ಮೆಪಟ್ಟುಕೊಳ್ಳುವೆನೆ ? ದುಶ್ಶಾಸನನ ವಿಯೋಗ ದುಃಖವನ್ನು ನೀಗುವೆನೆ ?

ವ॥ ಎಂದು ದುರ್ಯೋಧನನು ಕೋಪದಿಂದ ಕೆಂಗಣ್ಣಾಗಿ ತನ್ನ ತಮ್ಮನ ಶವವನ್ನು ನೋಡಲಾರದೆ ಅಲ್ಲಿಂದ ಹೊರಟು -

೯. ಆನೆ, ಕುದುರೆ, ಹಾಗು ಮನುಷ್ಯರ ಶವಗಳಿಂದ ಭಯಾನಕವಾದ ರಣಭೂಮಿಯಲ್ಲಿ ಬರುತ್ತ ಅರ್ಜುನನ ಬಾಣಗಳಿಂದ ಮೈಯೆಲ್ಲ ಜರ್ಜರಿತನಾದ ಅಂಗರಾಜನನ್ನು (ಕರ್ಣನ ಕಳೇವರವನ್ನು) ಕಂಡನು.

ವ॥ ಆಗ ಅದನ್ನು ನೋಡಿ ಸಂಜಯನು 'ಕುರುವಿನ ಮೇಲೆ ಬೊಕ್ಕೆ'ಯೆಂಬಂತೆ ಪ್ರಿಯರಾದ ಮಕ್ಕಳು ಹಾಗು ತಮ್ಮಂದಿರ ಮರಣದಿಂದಾದ ಶೋಕದಿಂದ ಈಗಾಗಲೆ ದುಃಖಿತನಾದ ಅರಸನಿಗೆ ತನ್ನ ಪ್ರಿಯಸ್ನೇಹಿತನಾದ ಕರ್ಣನನ್ನು ಕಂಡು ದುಃಖ ಉಕ್ಕೇರುವುದು ಎಂದು ಮನಸ್ಸಿನಲ್ಲಿ ಎಂದುಕೊಳ್ಳುತ್ತಿರಲಾಗಿ -

೧೦. ನೆಲದಲ್ಲಿ ಹುಗಿಬಿದ್ದ ರಥದ ಗಾಲಿಯನ್ನು ಮೇಲಕ್ಕೆ ಎತ್ತಿ ಸಮಪಾದ ಸ್ಥಾನಕದಲ್ಲಿ ಮನೋಹರವಾಗಿ ನಿಂತು, (ಸಾಯುವ ಕ್ಷಣಕ್ಕೆ) ಮುಂಚೆ ಬಾಣವನ್ನು ಹಿಡಿದಳೆದ ಬಲಗೈ ಮುಷ್ಟಿ ಕಿವಿಗಡ್ಡೆಯಲ್ಲಿ ಶೋಭಿಸುತ್ತಿರಲಾಗಿ, ಸ್ವಾಮಿಕಾರ್ಯವನ್ನು

ಅಂತಿರ್ದ ದಿನಕರತನೂಜನಂ ರಾಜಾಧಿರಾಜಂ ನೋಡಿ ಬಾಷ್ಪವಾರಿ ಧಾರಾ ಪೂರಿತಲೋಚನಂ ಮನ್ಯೂದ್ಗತಕಂಠನುಮಸಹ್ಯಶೋಕಾನಲದಹ್ಯಮಾನಾಂತಃಕರುಣನುಮಾಗಿ -

ಆನುಂ ದುಶ್ಶಾಸನನುಂ ।
ನೀನುಂ ಮೂವರೆ ದಲಾತನುಂ ಕಟಿದ ಬಟಿ ॥
ಕ್ಕಾನುಂ ನೀನೆ ದಲೀಗಳ್ ।
ನೀನುಮಗಲ್ದೆತ್ತವೋದೆಯಂಗಾಧಿಪತೀ ॥೧೧॥

ನೀನಿಲ್ಲದರಸುಗೆಯ್ವೆನೆ ।
ನೀನಿಲ್ಲದೆ ಬಾಟ್ವೆ[ನೆಂದು] ಬಗೆದಪ್ಪೆನೆ [ಪೇಟ್] ॥
ನೀನಿಲ್ಲದಹಿತರೊಳ್ ಸಂ ॥
ಧಾನಂಮಾಡುವೆನೆ ಕೂಡೆನಂಗಾಧಿಪತೀ ॥೧೨॥

ನಿನ್ನ ಮಗಂ ವೃಷಸೇನಂ ।
ತನ್ನ ಮಗಂ ಸತ್ತನಣ್ಮೆ ಲಕ್ಷಣನುಂ ನೀ ॥
ನೆನ್ನಂ ಸಂತೈಸುವುದಾಂ ।
ನಿನ್ನಂ ಸಂತೈಸೆ ಬಂದೆನಂಗಾಧಿಪತೀ ॥೧೩॥

ಪಟಿಯಂ ಕೇಳ್ದೆನೊ ಮೇಣ್ನಡೆ ।
ವಟಿಯಂ ತಪ್ಪಿದೆನೊ ಕಾಣೆ [ನಣ್ಮಿಂದಂ ಕೂ ॥
ರ್ತಟಿದಿವರಂ ಪಗೆದೆನೊ] ಪ ।
ಚ್ಚಟಿದೆನೊ ಪೇಟ್ ಕೂಡಿ ನಿನ್ನೊಳಂಗಾಧಿಪತೀ ॥೧೪॥

ಕಡೆಗಣಿಸಿ, ಕರ್ತವ್ಯಭ್ರಷ್ಟರಾಗಿ ಸತ್ತವರನ್ನು ನೋಡಿ ನಗುವವನಂತೆ ಕರ್ಣನು ತನ್ನ ಎತ್ತರವಾದ ಧ್ವಜಸ್ತಂಭಕ್ಕೆ ಆತುಕೊಂಡು ಒರಗಿದ್ದನು.

ವ॥ ಹಾಗಿದ್ದ ಕರ್ಣನನ್ನು ಚಕ್ರವರ್ತಿಯು ನೋಡಿ ಕಂಬನಿದುಂಬಿ ದುಃಖದಿಂದ ಕೊರಳ ಸೆರೆ ಬಿಗಿದುಕೊಂಡು ಸೈರಿಸಲಾರದ ದುಃಖಾಗ್ನಿಯಿಂದ ಅಂತಃಕರಣ ಬೇಯುತ್ತಿರಲಾಗಿ -

೧೧. ನಾನು, ದುಶ್ಶಾಸನ ಹಾಗು ನೀನು - ಈ ಮೂವರೆ (ಒಂದು ಜೀವವಾಗಿ) ಇದ್ದವರು. ಆತನು ಹೋದ ಬಳಿಕ ನಾನು, ನೀನು ಇಬ್ಬರೆ ಆಗಿದ್ದೆವು. ಅಂಗರಾಜಾ, ಈಗ ನೀನು ಕೂಡ ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ ?

೧೨. ನೀನಿಲ್ಲದೆ ನಾನು ರಾಜ್ಯವಾಳುವೆನೆ ? ನೀನಿಲ್ಲದೆ ಬದುಕಬೇಕೆಂದು ಬಯಸುವೆನೆ ? ಹೇಳು, ನೀನಿಲ್ಲದೆ ವೈರಿಗಳೊಡನೆ ಸಂಧಿ ಮಾಡಿಕೊಳ್ಳುವೆನೆ ? ಇಲ್ಲ, ಮಾಡಿಕೊಳ್ಳಲಾರೆ.

೧೩. ನಿನ್ನ ಮಗನಾದ ವೃಷಸೇನನೂ, ನನ್ನ ಮಗನಾದ ಲಕ್ಷಣನೂ ಪರಾಕ್ರಮದಿಂದ ಹೋರಾಡಿ ಸತ್ತರು. ನೀನು ಬಂದು ನನ್ನನ್ನು ಸಮಾಧಾನ ಪಡಿಸಬೇಕು. ಈಗ ನಾನೆ ನಿನ್ನನ್ನು ಸಂತೈಸಲೆಂದು ಬಂದೆನು.

೧೪. ಅಂಗರಾಜಾ, ನಿನ್ನ ನಿಂದೆಗೆ ಕಿವಿಗೊಟ್ಟೆನೊ ? ಅಥವಾ ನಡವಳಿಕೆಯಲ್ಲಿ ತಪ್ಪಿದೆನೊ ? ನಾನು ಕಾಣೆ. ಪ್ರಿಯವಾಗಿದ್ದು ಅಳಿದು ಹೋದವರ ಮೇಲೆ ದ್ವೇಷ

ಅಱೆಯೆನಿದಂ ನಿನ್ನಿಂದಿನ ।
ತೆಱನಂ ನೀನೆನಗದೇಕೆ ಮುಳಿದಿರ್ಪೆಯೊ ಮೇಣ್ ॥
ಮಱುವಾತುಗುಡದೆ ರವಿಸುತ ।
ಮಱಸುಂದಿರ್ದಪೆಯೊ ಮೇಣ್ಬಳಲ್ದಿರ್ದಪೆಯೋ ॥೧೫॥

ನಿನ್ನೀ ಕೆಳೆಯ ಸುಯೋಧನ ।
ನನ್ನೋಡದೆ ನುಡಿಯದಪ್ಪಿಕೊಳ್ಳದೆ ಬೆಸನೇ ॥೨॥
ನೆನ್ನದೆ ಜೀಯೆನ್ನದೆ ದೇ ।
ವೆನ್ನದದೇಕುಸಿರದಿರ್ಪೆಯಂಗಾಧಿಪತೀ ॥೧೬॥

ಅನೃತಂ ಲೋಭಂ ಭಯಮೆಂ ।
ಬನಿತುಂ ನೀನಿರ್ದ ನಾಡೊಳಿರ್ಕುಮೆ ರವಿಸಂ ॥
ದನ ನನ್ನಿ ಚಾಗವಣ್ಮೆಂ ।
ಬನಿತರ್ಕಂ ನೀನೆ ಮೊತ್ತಮೊದಲಿಗನಾದಯ್ ॥೧೭॥

ಆನಱೆವೆಂ ಪೃಥೆಯಱೆವಳ್ ।
ದಾನವರಿಪುವಱೆವನರ್ಕನಱೆವಂ ದಿವ್ಯ ॥
ಜ್ಞಾನಿಸಹದೇವನಱೆವಂ ।
ನೀನಾರ್ಗೆಂದಾರುಮಱೆಯರಂಗಾಧಿಪತೀ ॥೧೮॥

ತೋರಿದೆನೊ ? ನಿನ್ನಲ್ಲಿ ಅನ್ಯೋನ್ಯವಾಗಿ ಬೆರೆತಿದ್ದ ನಾನು ಎಂದಾದರೂ ಅದಕ್ಕೆ ವ್ಯತಿರಿಕ್ತವಾಗಿ ನಡೆದೆನೊ ? ಹೇಳು. (ನಾನೇನು ತಪ್ಪು ಮಾಡಿದೆನು ?)

೧೫. ಈ ದಿನದ ನಿನ್ನ ರೀತಿ ನನಗೆ ಅರ್ಥವಾಗದು.ಅದೇಕೆ ನೀನು ಪ್ರತ್ಯುತ್ತರ ಕೊಡುತ್ತಿಲ್ಲ ? ನನ್ನ ಮೇಲೆ ಕೋಪಗೊಂಡೆಯೊ ? ಅಥವಾ ಮೈ ಮರೆತೆಯೊ ಅಥವಾ ಆಯಾಸಗೊಂಡಿರುವೆಯೊ ?

೧೬. ನಿನ್ನ ಗೆಳೆಯ ಈ ಸುಯೋಧನನನ್ನು ನೋಡದೆ, ಮಾತಾಡಿಸದೆ, ಅಪ್ಪಿಕೊಳ್ಳದೆ, ಅಪ್ಪಣೆಯೇನೆಂದು ಕೇಳದೆ, ಜೀಯಾ ಎನ್ನದೆ, ದೇವಾ ಎನ್ನದೆ, ಏಕೆ ಮಾತಾಡದಿರುವೆ, ಕರ್ಣಾ !

೧೭. ನೀನಿರುವ ದೇಶದಲ್ಲಿ ಸುಳ್ಳು, ಲೋಭ, ಭಯ ಎಂಬಿವು ಲವಲೇಶವಾದರೂ ಇರುವುದುಂಟೇ ? ಸತ್ಯ, ತ್ಯಾಗ, ಪರಾಕ್ರಮ ಎಂಬಿವಕ್ಕೆಲ್ಲ, ಕರ್ಣಾ ನೀನೇ ಅಗ್ರಗಣ್ಯನಾದೆ.

೧೮. ನೀನು ಯಾರ ಮಗನೆಂಬುದನ್ನು ನಾನು ಬಲ್ಲೆ, ಕುಂತಿ ಬಲ್ಲಳು, ಕೃಷ್ಣನು ಬಲ್ಲನು, ಸೂರ್ಯದೇವನು ಬಲ್ಲನು, ದಿವ್ಯಜ್ಞಾನಿಯಾದ ಸಹದೇವನು ಬಲ್ಲನು, ಕರ್ಣನೆ, ಇದನ್ನು ಮಿಕ್ಕವರಾರೂ ಅರಿಯರು.

ಒಡವುಟ್ಟಿದನೆಂದಱಿದೊಡೆ ।
ಕುಡುಗುಂ ರಾಜ್ಯಮನೆ ಧರ್ಮತನಯಂ ನಿನಗಾಂ ॥
ಕುಡಲಾರ್ತೆನಿಲ್ಲ ರಾಜ್ಯ ।
ಕ್ಕೊಡೆಯನನಱಿಯುತ್ತುಮಿರ್ದೆನಂಗಾಧಿಪತೀ ॥೧೯॥

ನೀನುಳ್ಳೊಡುಂಟು ರಾಜ್ಯಂ ।
ನೀನುಳ್ಳೊಡೆ ಪಟ್ಟಮಂಟು ಬೆಳ್ಗೊಡೆಯುಂಟಯ್ ॥
ನೀನುಳ್ಳೊಡುಂಟು ಪೀಟಿಗೆ
ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ ॥೨೦॥

ಇನಸುತ ಗಾಂಡಿವಿ ಸಂಮೋ ।
ಹನಾಸ್ತ್ರದಿಂದೆಚ್ಚು ನಿದ್ರೆಯಂ ಮಾಡಿದನಂ ॥
ದಿನ ಗೋಗ್ರಹಣದೊಳೀಗಳ್ ।
ನಿನಗಿಂತೀ ದೀರ್ಘನಿದ್ರೆಯಂ ಮಾಡಿದನೇ ॥೨೧॥

ಕಸವರಮಂ ದ್ವಿಜದಾನಕೆ ।
ಪೊಸಜೌವನಮಂ ಸ್ವದಾರಸಂತೋಷಕೆ ನಿ ॥
ನ್ನಸುವಂ ಪತಿಕಾರ್ಯಕೆ ವೆ ।
ಚ್ಚಸಿದಯ್ ನಿನ್ನನ್ನನಾವನಂಗಾಧಿಪತೀ ॥೨೨॥

೧೯. ಅಂಗರಾಜಾ, ನೀನು ತನ್ನ ಸೋದರನೆಂದು ತಿಳಿದಿದ್ದರೆ ಧರ್ಮರಾಜನು ರಾಜ್ಯವನ್ನೆ ನಿನಗೆ ಕೊಟ್ಟುಬಿಡುತ್ತಿದ್ದನು. ರಾಜ್ಯಕ್ಕೆ ನೀನೇ ಒಡೆಯನೆಂದು ಅರಿತಿದ್ದರೂ ನಾನು ನಿನಗೆ ಅದನ್ನು ಕೊಡಲಾರದವನಾದೆ.

೨೦. ಕರ್ಣಾ, ನೀನಿದ್ದರೆ ರಾಜ್ಯ, ನೀನಿದ್ದರೆ ರಾಜ್ಯಪಟ್ಟ, ನೀನಿದ್ದರೆ ಶ್ವೇತಛತ್ರ, ನೀನಿದ್ದರೆ ಸಿಂಹಾಸನ - ಇವೆಲ್ಲ ಉಂಟು. ನೀನೇ ಇಲ್ಲವಾದರೆ ಇವೆಲ್ಲ ಉಂಟೆ ?

೨೧. ಅಂದಿನ ಗೋಗ್ರಹಣ ಪ್ರಸಂಗದ ಯುದ್ಧದಲ್ಲಿ ಅರ್ಜುನನು ಸಂಮೋಹನಾಸ್ತ್ರದಿಂದ ನಿನಗೆ ಮಂಕುನಿದ್ದೆ ಕವಿಸಿದ್ದನು. ಈಗ ದೀರ್ಘನಿದ್ರೆಯನ್ನು (ಮರಣವನ್ನು) ಉಂಟುಮಾಡಿದನೆ ?

೨೨. ಧನವನ್ನು ಬ್ರಾಹ್ಮಣ ದಾನಕ್ಕೂ, ನವಯೌವನವನ್ನು ಸ್ವಪತ್ನಿಯ ಸಂತೋಷಕ್ಕೂ, ನಿನ್ನ ಪ್ರಾಣವನ್ನು ಸ್ವಾಮಿಕಾರ್ಯಕ್ಕೂ ಸಂಪೂರ್ಣವಾಗಿ ಅರ್ಪಿಸಿಬಿಟ್ಟೆ ನೀನು. ನಿನ್ನಂತಹವನು ಇನ್ನಾವನುಂಟು ?

ಹರಿ ಬೇಡೆ ಕವಚಮಂ ನೀ ।
ನರಿದಿತ್ತಯ್ ಕೊಂತಿ ಬೇಡೆ ಬೆಚ್ಚದೆ ಕೊಟ್ಟಯ್ ।
ಪುರಿಗಣೆಯಂ ನಿನಗೆಣೆ ಕಸ ।
ವರಗಲಿಮೆಯ್ಗಲಿಯುಮಾವನಂಗಾಧಿಪತೀ ॥೨೩॥

ನಯನದೊಳಮೆರ್ದೆಯೊಳಂ ನಿ ।
ನ್ನಯ ರೂಪಿರ್ದಪುದು ನಿನ್ನ ಮಾತಿರ್ದಪುದೆ ।
ನ್ನಯ ಕಿವಿಯೊಳಗಿನನಂದನ ।
ವಿಯೋಗಮೆಂತಾದುದಱಿಯೆನಂಗಾದಿಪತೀ ॥೨೪॥

ನಿನ್ನಂ ಕೊಂದ ಕಿರೀಟಿಯು ।
ಮೆನ್ನನುಜನನಿಕ್ಕಿ ಕೊಂದ ಭೀಮನುಮೊಳನಾ ॥
ನಿನ್ನುಮೊಳೆಂ [ಗಡಿದಕ್ಕುಮೆ] ।
ನಿನ್ನಯ ಕೂರ್ಮೆಗಮದೆನ್ನ ಸೌಧರ್ಮಿಕೆಗಂ ॥೨೫॥

ಪರಶುಧರಂ ಚಕ್ರಧರಂ ।
ಸುರಪತಿ ಭೂಕಾಂತೆ ಕೊಂತಿಯೆಂದೀ ಪೇಱ್ದ ॥
ಯ್ವರೆ ಕೂಡಿ ನಿನ್ನ ಕೊಂದರ್ ।
ನರನೊರ್ವನೆ ಕೊಂದನಲ್ಲನಂಗಾಧಿಪತೀ ॥೨೬॥

೨೩. ಅಂಗರಾಜಾ, ಇಂದ್ರನು ಬಂದು ಬೇಡಿದಾಗ ನಿನ್ನ ಸಹಜ ಕವಚವನ್ನು ಕಿತ್ತುಕೊಟ್ಟುಬಿಟ್ಟೆ ; ಕುಂತಿ ಬಂದು ಬೇಡಿದಾಗ ಅನುಮಾನಿಸದೆ ಮಂತ್ರಾಸ್ತ್ರಗಳನ್ನೆ ನೀಡಿಬಿಟ್ಟೆ. ನಿನಗೆ ಸರಿದೊರೆಯಾದ ಸಹಜಶೂರನೂ ಮಹಾವೀರನೂ ಇನ್ನಾವನು ?

೨೪. ನನ್ನ ಕಣ್ಣಲ್ಲಿಯೂ, ಹೃದಯದಲ್ಲಿಯೂ ನಿನ್ನ ರೂಪ ಇನ್ನೂ ಅಚ್ಚಳಿಯದೆ ಇದೆ. ನನ್ನ ಕಿವಿಯಲ್ಲಿನ್ನೂ ನಿನ್ನ ಧ್ವನಿ ಮೊಳಗುತ್ತಿದೆ. ಹೀಗಿದ್ದೂ ನನ್ನನ್ನು ನೀನು ಅಗಲಿದೆ ಹೇಗೆ ? ತಿಳಿಯದು.

೨೫. ನಿನ್ನನ್ನು ಕೊಂದ ಅರ್ಜುನನು ಇನ್ನೂ ಜೀವಂತವಾಗಿದ್ದಾನೆ. ನನ್ನ ತಮ್ಮನ್ನನ್ನು ಕೊಂದ ಭೀಮನೂ ಬದುಕಿ ಉಳಿದಿದ್ದಾನೆ. ನಾನು ಕೂಡ (ಅವರಿಬ್ಬರನ್ನು ಕೊಲ್ಲದೆ) ಬದುಕಿದ್ದೇನೆ ಎಂದರೆ ನನ್ನ ಸ್ನೇಹಕ್ಕೂ, ಧರ್ಮಶೀಲತೆಗೂ ಇದು ಯೋಗ್ಯವೇ ?

೨೬. ಪರಶುರಾಮ, ಕೃಷ್ಣ, ಇಂದ್ರ, ಭೂಮಿ, ಕುಂತಿ - ಈ ಐವರೂ ಕೂಡಿ ನಿನ್ನನ್ನು ಕೊಂದರಲ್ಲದೆ ಅರ್ಜುನನೊಬ್ಬನೆ ಕೊಲ್ಲಲಿಲ್ಲ.

ಇಂದಾನಾದೆಂ ಮೇಣೆನ ।
ನಂದನ ಕೇಳ್ ಪಾಂಡುತನಯರಾದರ್ ನಿನ್ನಂ ॥
ಕೊಂದುಂ ದುಶ್ಯಾಸನನಂ ।
ಕೊಂದುಂ ಬರ್ದುಕುವರೆ ಬರ್ದುಕರಂಗಾಧಿಪತೀ ॥೨೭॥

ಎಂದನೇಕಪ್ರಕಾರದಿಂ ವಿಪ್ರಳಾಪಂಗೆಯ್ದು -

ಇನಸುತನಿರವಂ ದುಶ್ಶಾ ।
ಸನನಿರವಂ ಕಂಡುಮಿನ್ನುಮೆನ್ನಸುವಿದು ನೆ ॥
ಟ್ಟನೆ ಪೋದುದಿಲ್ಲ ಕಲ್ಲೆರ್ದೆ ।
ತನದಿಂದೆನ್ನಂತು ಬರ್ದನಾವನುಮೊಳನೇ ॥೨೮॥

ಎಂದು ತನ್ನಂ ತಾನೆ ನಿಂದಿಸಿಕೊಂಡು -

ಸೂನುಗಳಟಿವಂ ಪ್ರಿಯಮಿ ।
ತ್ರಾನುಜರಟಿವಂ ವಿಧಾತ್ರ ನೀಂ ಕಾಣಿಸಿ ಮುಂ ॥
ದೇನಂ ಕಾಣಿಸಲಿರ್ದಪೆ ।
ನೀನೆನ್ನಂ ಪಾಪಕರ್ಮನಂ ನಿರ್ಗುಣನಂ ॥೨೯॥

ಎಂದು ವಿಧಾತ್ರಂಗೆ ಪಲುಂಬಿ ರಾಧಾನಂದನನ ಮೊಗಮಂ ನೋಡಿ ಸಂಜಯನನಿಂತೆಂದ -

೨೭. ಇಂದು ನಾನು ಉಳಿಯಬೇಕು, ಇಲ್ಲವೆ ಪಾಂಡವರು ಉಳಿಯಬೇಕು. ಕರ್ಣಾ, ಕೇಳು. ನಿನ್ನನ್ನು ಕೊಂದು ದುಶ್ಶಾಸನನನ್ನು ಕೊಂದು ಅವರು ಬದುಕಿ ಉಳಿಯಬಲ್ಲರೆ? ಸಾಧ್ಯವಿಲ್ಲ.

ವ॥ ಹೀಗೆ ಬಗೆ ಬಗೆಯಾಗಿ ಪ್ರಲಾಪಿಸಿ -

೨೭. ಕರ್ಣನ ಸ್ಥಿತಿಯನ್ನೂ, ದುಶ್ಯಾಸನನ ಸ್ಥಿತಿಯನ್ನೂ ಕಂಡು ಕೂಡ ನನ್ನ ಪ್ರಾಣ ಹಾರಿಹೋಗಲಿಲ್ಲ. ಹೀಗೆ ಕಲ್ಲೆದೆಯಾಗಿ ನನ್ನಂತೆ ಬದುಕಿದವನು ಇನ್ನಾವನಾದರೂ ಉಂಟೆ ?

ವ॥ ಎಂದು ತನ್ನನ್ನು ತಾನೆ ನಿಂದಿಸಿಕೊಂಡು -

೨೯. ಎಲೈ ವಿಧಿಯೆ, ನನ್ನ ಮಕ್ಕಳ ಸಾವನ್ನು, ಪ್ರಿಯ ಸ್ನೇಹಿತನ ಹಾಗು ತಮ್ಮಂದಿರ ಸಾವನ್ನು ನಾನು ಕಾಣುವಂತೆ ಮಾಡಿದೆ. ಗುಣಹೀನನೂ ಪಾಪಿಯೂ ಆದ ನನ್ನ ಕಣ್ಣಿಗೆ ಇನ್ನೂ ಏನೇನನ್ನು ಕಾಣಿಸಲಿರುವೆ ?

ವ॥ ಎಂದು ದೈವಕ್ಕೆ ಮೊರೆಯಿಟ್ಟು ಕರ್ಣನ ಮುಖವನ್ನು ನೋಡಿ ಸಂಜಯನಿಗೆ ಹೀಗೆಂದನು -

ಆರೊಡನೆ ನುಡಿವಪ್ತೆಯೊ ।
ಆರೊಡನೋಲಗದೊಳಿರ್ಪೆನಾರೊಡನೆ ಸಮಂ ॥
ತಾರೋಗಿಪೆನೇಱುವೆನಾ ।
ನಾರೊಡನೆನ್ನಣುಗರಿಲ್ಲದಿಭವಾಜಿಗಳಂ ॥೩೦॥

ಕೆಳೆಯಂಗಾಯ್ತಸುಮೋಕ್ಷಮಾಗದೆನಗಂ ಬಾಷ್ಪಾಂಬುಮೋಕ್ಷಂ ಧರಾ ॥
ತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲನ್ಯ ಮಂ ॥
ಡಳಮಂ ಸುಟ್ಟನಿವಂ ಪ್ರತಾಪಶಿಖಿಯಿಂದಾನೀತನಂ ಸತ್ಕ್ರಿಯಾ ।
ನಳನಿಂ ಸುಟ್ಟೆನುಮಿಲ್ಲ ಮತ್ಪ್ರಿಯತಮಂ ಕರ್ಣಂಗಿದೇಂ ಕೂರ್ತೆನೋ ॥೩೧॥

ಎಂಬುದುಂ ದೇವಾ ನೀಮಿಂತೇಕೆ ಪಱಯಿಸುವಿರೆಂದು ಸಂಜಯನಿಂತೆಂದಂ -

ಜಲದಾನಕ್ರಿಯೆಯಂ ದೃ ।
ಗ್ಜಲದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯಂ ॥
ಕೆಳೆಯಂಗೆ ಮಾಡಿದಯ್ ಕುರು ।
ಕುಲದರ್ಪಣ ಮಱೆವುದಿನ್ನಹರ್ಪತಿಸುತನಂ ॥೩೨॥

ಪೆಂಡಿರ್ ಪಱಯಿಸುವಂದದೆ ।
ಗಂಡರ್ ಪಱಯಿಸಿದೊಡಾಯಮಂ ಛಲಮಂ ಕಯ್ ॥
ಕೊಂಡೆಸಪರಾರೊ ಕುರುಕುಲ ।
ಮಂಡನ ನೀನೆತ್ತಿಕೊಂಡ ಛಲಮನೆ ಮೆಱೆಯಾ ॥೩೩॥

೩೦. ನನಗೆ ಪ್ರಿಯವಾದವರು ಇಲ್ಲವಾದ ಮೇಲೆ ನಾನಿನ್ನು ಯಾರೊಡನೆ ಅಕ್ಕರೆಯಿಂದ ಮಾತನಾಡಲಿ ? ಯಾರೊಡನೆ ಓಲಗದಲ್ಲಿ ಇರಲಿ ? ಯಾರ ಜೊತೆಗೆ ಊಟ ಮಾಡಲಿ ? ಯಾರೊಂದಿಗೆ ಆನೆ ಕುದುರೆಗಳ ಸವಾರಿ ಮಾಡಲಿ ?

೩೧. ಸ್ನೇಹಿತನಿಗೆ ಜೀವದ ಋಣ ತಪ್ಪಿತು, ನನಗೆ ಕಣ್ಣೀರು ತಪ್ಪಲಿಲ್ಲ. ಈತನು ನನಗೆ ಭೂಮಂಡಲವನ್ನು ಕೊಟ್ಟನು ; ಆದರೆ ನಾನು ಇವನಿಗೆ ತರ್ಪಣೋದಕವನ್ನು ಕೂಡ ಕೊಡಲಿಲ್ಲ. ಇವನು ತನ್ನ ಪರಾಕ್ರಮದ ಬೆಂಕಿಯಿಂದ ಶತ್ರುಸಮೂಹವನ್ನು ಸುಟ್ಟನು; ಆದರೆ ನಾನು ಇವನ ಶವಕ್ಕೆ ಅಗ್ನಿಸಂಸ್ಕಾರವನ್ನು ಕೂಡ ಮಾಡಲಿಲ್ಲ. ಎಂದರೆ ನನಗೆ ಅತ್ಯಂತ ಪ್ರಿಯನಾದ ಕರ್ಣನ ಮೇಲೆ ನನಗಿರುವ ಪ್ರೇಮ ಎಂತಹದು ?

ವ॥ ಈ ಮಾತನ್ನು ಕೇಳಿ ಸಂಜಯನು ಹೀಗೆಂದನು, ದೇವಾ, ನೀವು ಅದೇಕೆ ಹೀಗೆ ಪ್ರಲಾಪಿಸುವಿರಿ ?

೩೨. ಕಣ್ಣೀರಿನಿಂದ ತರ್ಪಣಕ್ರಿಯೆಯನ್ನೂ, ಕೋಪಾಗ್ನಿಯಿಂದ ದಹನ ಸಂಸ್ಕಾರವನ್ನೂ ಸ್ನೇಹಿತನಿಗೆ ನೀನಾಗಲೆ ಮಾಡಿರುವೆ, ಕುರುಕುಲಶ್ರೇಷ್ಠನೆ, ಇನ್ನು ಕರ್ಣನನ್ನು ಮರೆತುಬಿಡು.

೩೩. ಹೆಂಗಸರು ಅಳುವಂತೆ ಗಂಡುಗಳೂ ಅಳತೊಡಗಿದರೆ, ಛಲವನ್ನು

ಎಂದು ಸಂಜಯಂ ನುಡಿದ ನುಡಿಯನವಧಾರಿಸಿ -

ದರಹಾಸಪೇಶಲಂ ದಿ ।
ಕ್ಕರಿಗಮನಂ ಕನಕಪರ್ವತಪ್ರಾಂಶು ದಿನೇ ॥
ಶ್ವರಸುತನ ರೂಪು ಚಿತ್ರಂ ।
ಬರೆದಂತಿರ್ದಪುದು ಚಿತ್ತಭಿತ್ತಿಯೊಳಿನ್ನಾ ॥೩೪॥

ಗುರು ದೀಕ್ಷಾವಿಧಿಗಳ್ಗೆ ಮಂತ್ರಿ ಹಿತಕಾರ್ಯಾಳೋಚನಕ್ಕಾಳ್ದನು ।
ರ್ವರೆಯಂ ಕಾವ ಗುಣಕ್ಕೆ ನರ್ಮಸಚಿವಂ ಕ್ರೀಡಾರಸಕ್ಕಾನೆಯಾಳ್ ॥
ಗುರುಭಾರಕ್ಕಿಱಿವಾಳ್ ರಣಕ್ಕೆ ತುಟಿಲಾಳ್ ಕಟ್ಟಾಯದೊಳ್ ಮೇಳದಾಳ್ ।
ಪರಿಹಾಸಕ್ಕೆನಿಸಿರ್ದನೆಂತು ಮಱೆವಂ ದುರ್ಯೋಧನಂ ಕರ್ಣನಂ ॥೩೫॥

ದಿವಿಜತನಯಂಗೆ ಮುಖ್ಯಂ ।
ರವಿಜಂ[ಜಯಕಾ]ದನೆನಗೆ ಕಣ್ಣೊಳ್ ಕಾಣಂ ॥
ಕಿವಿಯೊಳ್ ಕೇಳಂ ಕಾಣ್ಬಂ ।
ದವೆಂತು ಕೇಳ್ವಂದಮೆಂತು ತಲೆಯಿಲ್ಲದನಂ ॥೩೬॥

ಎಂದು ಶೋಕಾಂಧಂ ಕರ್ಣವಿರಹಿತನಪ್ಪುದಱಿಂ ಸಂಕ್ರಂದನನಂದನಂಗೆ ಮುಳಿದು–

ಶೌರ್ಯದಿಂದ ಸಾಧಿಸವವರು ಯಾರು ? ಕುರುಕುಲ ಭೂಷಣನೆ, ನೀನು ಹಿಡಿದ ಛಲವನ್ನು ನೆರವೇರಿಸು.

ವ॥ ಹೀಗೆಂದ ಸಂಜಯನ ಮಾತನ್ನು ಕೇಳಿ -

೩೪. ನಸುನಕ್ಕು, ದಿಗ್ಗಜದಂತೆ (ಗಂಭೀರವಾದ) ನಡೆಯುಳ್ಳವನೂ ಮೇರುಗಿರಿಯಂತೆ ಉನ್ನತನೂ ಆದ ದುರ್ಯೋಧನನು ಹೀಗೆ ನುಡಿದನು - ನನ್ನ ಮನಸ್ಸಿನ ಗೋಡೆಯ ಮೇಲೆ ಬರೆದಿಟ್ಟ ಚಿತ್ರದಂತೆ ಕರ್ಣನ ರೂಪು ಸ್ಪಷ್ಟವಾಗಿ ನಿಂತಿದೆ.

೩೫. ಯಜ್ಞಯಾಗಾದಿಗಳಲ್ಲಿ ದೀಕ್ಷೆಗೆ ಗುರುವಾಗಿ, ಹಿತಕಾರ್ಯಗಳ ಮಂತ್ರಾಲೋಚನೆಯಲ್ಲಿ ಮಂತ್ರಿಯಾಗಿ, ರಾಜ್ಯಸಂರಕ್ಷಣೆಯಲ್ಲಿ ರಾಜನಾಗಿ, ಕ್ರೀಡಾವಿಲಾಸಕ್ಕೆ ನರ್ಮಸಚಿವನಾಗಿ, ಅತಿಶಯವಾದ (ಕಾರ್ಯ) ಭಾರಕ್ಕೆ ಆನೆಯಾಗಿ, ಯುದ್ಧಕ್ಕೆ ಹೋರಾಡುವ ಭಟನಾಗಿ ಬಿಕ್ಕಟ್ಟಿನ ಪ್ರಸಂಗದಲ್ಲಿ ಧೀರನಾಗಿ, ವಿನೋದದಲ್ಲಿ ಮೇಳದ ಗೆಳೆಯನಾಗಿ ಇದ್ದ ಕರ್ಣನನ್ನು ದುರ್ಯೋಧನನು ಮರೆಯುವುದು ಹೇಗೆ ಸಾಧ್ಯ ?

೩೬. ಇಂದ್ರನ ಮಗನಾದ ಅರ್ಜುನನಿಗೆ ಕರ್ಣನೇ ಮುಖ್ಯವಾದ ಗುರಿಯಾಗಿ ಹೋದನು. ನನಗೆ ಈಗ ಅವನು ಕಣ್ಣಿಗೆ ಕಾಣುವುದಿಲ್ಲ ; ಅವನ ಮಾತು ಕಿವಿಗೆ ಕೇಳುವುದಿಲ್ಲ. ತಲೆಯನ್ನೆ ಕಳೆದುಕೊಂಡವನನ್ನು ಕಾಣುವುದು ಹೇಗೆ ? ಅವನಿಂದ ಮಾತುಗಳನ್ನು ಕೇಳುವುದಾದರೂ ಹೇಗೆ ?

ವ॥ ಎಂದು ಶೋಕದಿಂದ ಕಂಗೆಟ್ಟು, ಕರ್ಣನ ವಿಯೋಗದಿಂದಾಗಿ ಅರ್ಜುನನ ಮೇಲೆ ಕೋಪಗೊಂಡು -

[ತರಣಿತನಯಾನನೇಂದು]
ಸ್ಮರಣದೆ ಕಯ್ಗನ್ನುಮೆನ್ನ ಶೋಕಮಹಾಸಾ ॥
ಗರಮಂ ತವೆ ಪೀರ್ದುದು ಭೀ ।
ಕರಮತ್ಕೋಪಾಗ್ನಿ ಬಾಡಬಾಗ್ನಿಯ ತೆಱದಿಂ ॥೩೭॥

ಎಂದು ಶೋಕರಸಮಂ ಕ್ರೋಧರಸದ ಮೇಲಿಕ್ಕಿ ಮಾರ್ಪಡೆಯ್ಯೆಯ್ತರ್ಪುದಂ ನೋಡಿ ನಡೆವ ದಂದಶೂಕಪತಾಕನ ಗೆಲ್ಲದ ಮುಳಿಸಿನಂದಮನಱಿದು ಸಂಜಯನೆಂದನೆಲೆ ದೇವಾ ಭೀಷ್ಮರಿತ್ತಲಿರ್ದಪರಿತ್ತ ಬಿಜಯಂಗೆಯ್ಯಿಂ ನಿಜಗುರುಜನಪ್ರಾರ್ಥನಾಭಂಗಂ ಮಾಡಲಾಗದು ಇಂ ನೀಂ ನೆಗಟ್ವ ಕಜ್ಜಮಾವುದುಮಂ ನಿಮ್ಮಜ್ಜನೊಳಾಲೋಚಿಸಿ ನೆಗಳ್ವುದೆನೆ ಪೇಳ್ವುದುಂ ನಿಜಗುರುಜನ ಪ್ರಾರ್ಥನಾಭಂಗಂ ಮಾಡದೆ ಸಂಜಯನ ಮಾತಂ ಮೀಱದೆ ಶರಶಯನಗತನಾಗಿರ್ಪ ನದೀನಂದನನ ಚರಣಾರವಿಂದವಂದನಂಗೆಯ್ಯಲೆಂದು ಗಾಂಧಾರಿಯ ನಂದನನೆಯ್ದೆವಂದು ಗಂಗಾನದೀನಂದನನಂ ಕಂಡು –

ನರಶರಕೋಟಿ ಜರ್ಜರಿಸೆ ತನ್ನ ಶರೀರಮನಸ್ತ್ರವೇದನಾ ।
ಪರವಶನಾಗಿಯುಂ ಮಱೆದನಿಲ್ಲ ಮುಕುಂದನನೇಕಚಿತ್ತದಿಂ ॥
ಸ್ಮರಿಯಿಸುತಿರ್ದುಮತ್ತಲರಿಭೂಪರಿನೆಂತುಟವಸ್ಥೆಯಾದುದೋ ।
ಕುರುಪತಿಗೆಂದನಾ ಪರಮಯೋಗಿಗಮಿಂತುಟು ಮೋಹಮಾಗದೇ ॥೩೮॥

೩೭. ಕರ್ಣನ ಮುಖಚಂದ್ರನ ನೆನಪಿನಿಂದ ಮಿಕ್ಕಿ ಉಕ್ಕುತ್ತಿರುವ ನನ್ನ ಶೋಕ ಮಹಾಸಾಗರವನ್ನೆಲ್ಲ ಕಡಲ್ಗಿಚ್ಚಿನಂತೆ ನನ್ನ ಕೋಪಾಗ್ನಿ ನುಂಗಿಬಿಟ್ಟಿತು.

ವ॥ ಎಂದು ಶೋಕವನ್ನೆಲ್ಲ ಕೋಪದ ಮೇಲಿಟ್ಟು, ಶತ್ರುಸೈನ್ಯವು ಬರುತ್ತಿರುವುದನ್ನು ನೋಡಿ ಅದಕ್ಕೆ ಎದುರಾಗಿ ನಡೆಯುವ ದುರ್ಯೋಧನನ ಗೆಲ್ಲುವ ರಭಸ ಹಾಗು ಕೋಪವನ್ನು ಅರಿತು ಸಂಜಯನು ಹೀಗೆಂದನು - ಎಲೆ ದೇವಾ, ಭೀಷ್ಮಾಚಾರ್ಯರು ಇತ್ತ ಕಡೆಗೆ ಇರುವರು, ಇತ್ತ ದಯಮಾಡು. ನಿಮ್ಮ ತಾಯ್ತಂದೆಗಳ ಬೇಡಿಕೆಯನ್ನು ಮೀರಬಾರದು. ಇನ್ನು ಮುಂದೆ ನೀನು ಮಾಡುವ ಯಾವ ಕಾರ್ಯವನ್ನಾದರೂ ನಿಮ್ಮಜ್ಜನೊಂದಿಗೆ ಆಲೋಚಿಸಿಯೆ ಮಾಡು. ಈ ಮಾತನ್ನು ಕೇಳಿ ತನ್ನ ತಂದೆತಾಯ್ಗಳ ಮಾತನ್ನು ಮೀರದೆ, ಸಂಜಯನ ಮಾತನ್ನು ಮೀರದೆ ಬಾಣಮಂಚದ ಮೇಲೆ ಮಲಗಿದ ಭೀಷ್ಮನ ಪಾದಗಳಿಗೆ ನಮಸ್ಕರಿಸಲೆಂದು ದುರ್ಯೋಧನನು ನಡೆದು ಬಂದು, ಗಂಗಾಕುಮಾರನನ್ನು ಕಂಡನು.

೩೮. ಅರ್ಜುನನ ತೀಕ್ಷ್ಣವಾದ ಬಾಣಗಳು ನಾಟಿ ಮೈಯೆಲ್ಲ ನೋಯುತ್ತಿದ್ದರೂ ಭೀಷ್ಮನು ಅದನ್ನು ಗಮನಿಸದೆ ಒಂದೇ ಮನಸ್ಸಿನಿಂದ ಮುಕುಂದನನ್ನು ಧ್ಯಾನಿಸುತ್ತಿದ್ದನು. ಆದರೆ ದುರ್ಯೋಧನನಿಗೆ ಯುದ್ಧರಂಗದಲ್ಲಿ ಶತ್ರುರಾಜರಿಂದ ಏನು ಅವಸ್ಥೆ ಯುಂಟಾಗಿದೆಯೋ ಏನೊ ಎಂದುಕೊಳ್ಳುತ್ತಿದ್ದನು. ಭೀಷ್ಮನಂತಹ ಶ್ರೇಷ್ಠಯೋಗಿಗೂ ಇಂತಹ ಮೋಹವಾಯಿತಲ್ಲವೆ ?

ಕವಲಂಬುಂ ತಲೆಗಿಂಬಿನ ।
ಕವುಳುಡೆ ಶರಮಂಚವರಸಿದರಲೆಯ ಹಾಸೆಂ ॥
ಬಿವು ಬಾಣಗಣದಿನೆಸೆದಿರೆ ।
ದಿವಿಜನದೀಸೂನು ಶಸ್ತ್ರಶಯನದೊಳಿರ್ದಂ ॥೩೯॥

ಅಂತಿರ್ದ ನದೀನಂದನನಂ ಕಂಡು ರಾಜರಾಜಂ ನೋಡಿ ಮನ್ಯೂದ್ಗತಕಂಠನಾಗಿ -

ವಿನಯಮನೊಕ್ಕು ನಿಮ್ಮ ಗುರುವೃದ್ಧರ ಪೇಟ್ದ ಹಿತೋಪದೇಶಮಂ ।
ಮನದೊಳವಜ್ಞೆಗೆಯ್ದನಿಲನಂದನವೈರದೆ ನಿಮ್ಮನಿಂದ್ರನಂ ॥
ದನನೊಡನಾನೆಕಾದಿಸಿದೆನಾನೆ ಕಡಂಗಿದೆನ್ನ ಪಾಪಕ ।
ರ್ಮನ ಕತದಿಂದಿಮೀ ನಿಮಗಮೀಯಿರವಾದುದೆ ಸಿಂಧುನಂದನಾ ॥೪೦॥

ಎಂದು ಪಶ್ಚಾತ್ತಾಪಂಗೆಯ್ಯುತುಂ ಮುಂಬರ್ಪ ತನ್ನ ಮೊಮ್ಮನ ಕಾಲ ಸೊಪ್ಪುಳಂ ಕೇಳ್ದು ವಿಕಚಧವಳಕುವಲಯವಿಲಾಸಿತೋಪವಾಸಿತಂಗಳುಂ ಕರ್ಣಾಂತವಿಶ್ರಾಂತಂಗಳುಮಪ್ಪ ತನ್ನ ಕಣ್ಗಳನರೆದೆಱೆದು ದರನಿಮೀಲಿತಲೋಚನಕಮಲಾಕರಮಿರ್ಪಂತೆಯಿರ್ದ ಶಂತನು ತನೂಜನ ಕರ್ಣಾಭ್ಯರ್ಣಮಂ ಪೊರ್ದಿ ಸಂಜಯನೆಂದಂ ಅಜ್ಜಾ ನಿಮ್ಮ ಮೊಮ್ಮನಪ್ಪ ಕುರುಕುಲಗಗನಗಭಸ್ತಿ ಮಾಲಿ ಬಾಹುಶಾಲಿ ದುರ್ಯೋಧನಂ ಬಂದನೆಂದು ಬಿನ್ನಪಂಗೆಯ್ಯೆ ಯೋಗಿ ಯೋಗಮನುಪಸಂಹರಿಸಿ ತನ್ನ ಚರಣೋಪಾಂತೊತ್ತಮಾಂಗನಾಗಿರ್ದ ಪನ್ನಗ ಪತಾಕನಂ ಕುರುಕುಲೋತ್ತಂಸನಂ ಪರಮಾನಂದದಿಂ ಭೀಷ್ಮನಾಶೀರ್ವಚನ ಸಹಸ್ರಂಗಳಿಂ ಪರಸಿ ದಿಕ್ಕರಿಕರಾನುಕಾರಿಗಳಪ್ಪ ನಿಜಭುಜಾದಂಡಂಗಳಿಂದೆ ತೆಗೆದಪ್ಪಿ ಬಾಷ್ಪಾಂಬುಪೂರಿತ ಲೋಚನನಾಗಿ -

೩೯. ಅರ್ಧಚಂದ್ರಾಕೃತಿಯ ಬಾಣವೆ ತಲೆಗೆ ಇಂಬಾದ ಲೋಡು, ಬಾಣಗಳ ಮಂಚವೆ ಅರಳೆಯ ಗಾದಿ - ಹೀಗೆ ಬಾಣಗಳಿಂದಲೆ ಎಲ್ಲವೂ ಶೋಭಿಸುತ್ತಿರಲಾಗಿ ಗಂಗಾಕುಮಾರನಾದ ಭೀಷ್ಮನು ಬಾಣಗಳ ಮಂಚದ ಮೇಲೆ ಮಲಗಿದ್ದನು.

ವ॥ ಹಾಗಿರುವ ಭೀಷ್ಮನನ್ನು ದುರ್ಯೋಧನನು ನೋಡಿ ದುಃಖದಿಂದ ಗದ್ಗದಿತನಾಗಿ -

೪೦. ವಿನಯಗುಣವನ್ನು ತೊರೆದು, ಹಿರಿಯರಾದ ನೀವು ಹೇಳಿದ ಹಿತ ವಚನವನ್ನು ಮನಸ್ಸಿನಲ್ಲಿಯೆ ತಿರಸ್ಕರಿಸಿ, ಭೀಮನ ಮೇಲಿರುವ ದ್ವೇಷದಿಂದಾಗಿ ನಿಮ್ಮನ್ನು ಅರ್ಜುನನೊಡನೆ ಹೋರಾಡುವಂತೆ ಮಾಡಿದವನು ನಾನೆ ; ಪ್ರೋತ್ಸಾಹಿಸಿದವನೂ ನಾನೇ ; ಪಾಪಿಷ್ಠನಾದ ನನ್ನ ದೆಸೆಯಿಂದ ನಿಮಗೆ ಇಂತಹ ಅವಸ್ಥೆ ಒದಗಿತೆ ?

ವ॥ ಎಂದು ಪಶ್ಚಾತ್ತಾಪದಿಂದ ಮರುಗುತ್ತ ಬಳಿಗೆ ಬರುತ್ತಿರುವ ತನ್ನ ಮೊಮ್ಮಗನ ಹೆಜ್ಜೆಯ ಸದ್ದನ್ನು ಕೇಳಿ, ಅರಳಿದ ಬೆಳ್ದಾವರೆಗಳನ್ನು ಉಪಹಾಸ ಮಾಡುವಂತಿರುವ, ಕಿವಿವರೆಗೆ ಚಾಚಿದ ತನ್ನ ಕಣ್ಣುಗಳನ್ನು ಅರ್ಧ ತೆರೆದು, ಅರೆ ಅರಳಿದ ತಾವರೆಗಳ ಕೊಳದಂತೆ ತೋರುವ ಭೀಷ್ಮನ ಕಿವಿಯ ಸಮೀಪಕ್ಕೆ ಬಂದ ಸಂಜಯನು "ಅಜ್ಜಾ, ನಿಮ್ಮ ಮೊಮ್ಮಗನಾದ ಕುರುಕುಲಸೂರ್ಯ ದುರ್ಯೋಧನನು ಬಂದಿರುವನು" ಎಂದು ಅರಿಕೆಮಾಡಿಕೊಂಡನು. ಯೋಗಿ (ಭೀಷ್ಮನು) ತನ್ನ ಧ್ಯಾನಯೋಗವನ್ನು ನಿಲ್ಲಿಸಿ, ತನ್ನ ಕಾಲಿಗೆ ತಲೆಬಾಗಿದ್ದ ಕುರುವಂಶಭೂಷಣ ದುರ್ಯೋಧನನನ್ನು ಅತ್ಯಂತ ಆನಂದದಿಂದ ಅನೇಕ ಬಗೆಯಾಗಿ

ಧವಳಗಜೇಂದ್ರಮುಂ ಧವಳಚಾಮರಮುಂ ಧವಳಾತಪತ್ರಮುಂ ।
ಧವಳವಿಲೋಚನೋತ್ಪಲವಧೂಜನಮುಂ ಬೆರಸಷ್ಟದಿಕ್ತಟಂ ॥
ಧವಳಿಸೆ ಕೀರ್ತಿಯಿಂ ಧವಳಮಂಗಳಗೇಯದಿನೊಪ್ಪಿ ಬರ್ಪ ಕೌ ।
ರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ ॥೪೧॥

ಎಂದು ಏಕಾಕಿಯಾಗಿ ಬಂದ ಧೃತರಾಷ್ಟ್ರನಂದನನ ಬರವಿನೊಳ್ ಸರಿತ್ಸುತಂ ಸಮರವೃತ್ತಾಂತಮನಱಿದು ವಿಸ್ಮಯಾಕ್ರಾಂತಸ್ವಾಂತನುಮಾಗಿ -

ಎಲ್ಲಿದುವೊ ಧವಳಚಾಮರ ।
ಮೆಲ್ಲಿತ್ತೊ ಸಿತಾತಪತ್ರಮಹಿಕೇತನ ಮ ॥
ತ್ತೆಲ್ಲಿತ್ತೊ ಮೃಗೇಂದ್ರಾಸನ ।
ಮೆಲ್ಲಿದುವೋ ಲೋಲಪಾಳಿಕೇತನತತಿಗಳ್ ॥೪೨॥

ಎಲ್ಲಿದಳೊ ಭಾನುಮತಿ ತಾ ।
ನೆಲ್ಲಿತ್ತೋಲಗದ ಸೂಳೆಯರ್ಕಳ ತಂಡಂ ॥
ಎಲ್ಲಿತ್ತೊ ಗೀತವಾದ್ಯಂ ॥
ಸಲ್ಲಲಿತವಧೂಜನಪ್ರವೃತ್ತಂ ನೃತ್ತಂ ॥೪೩॥

ಸುತಶತಕಮುಂ ಸಹೋದರ ।
ಶತಕಮುಮೆಲ್ಲಿತ್ತೊ ಮಗನೆ ಪೇೞೆಲ್ಲಿತ್ತೋ ॥
ಚತುರಂಗಸೈನ್ಯಮೆಲ್ಲಿದ ।
ರತಿರಥಸಮರಥಮಹಾರಥಾರ್ಧರಥರ್ಕಳ್ ॥೪೪॥

ಆಶೀರ್ವದಿಸಿ, ದಿಗ್ಗಜದ ಸೊಂಡಿಲಂತಿರುವ ತನ್ನ ತೋಳುಗಳಿಂದ ಅವನನ್ನು ಬಾಚಿ ತಬ್ಬಿಕೊಂಡು ಕಂಬನಿದುಂಬಿ -

೪೧. ಬಿಳಿಯ ಆನೆ, ಬಿಳಿಯ ಚಾಮರ, ಬಿಳಿಯ ಕೊಡೆ, ಬಿಳಿಯ ಕಾಂತಿಯನ್ನು ಬೀರುವ ತಾವರೆಗಣ್ಣಿನ ವಧುಗಳು - ಇವೆಲ್ಲ ಕೂಡಿಕೊಂಡು ಎಂಟೂ ದಿಕ್ಕುಗಳನ್ನು ಕೀರ್ತಿಪ್ರಭೆಯಿಂದ ಬೆಳಗುತ್ತ, ಜಯವನ್ನು ಉಗ್ಗಡಿಸುವ ಧವಳಗೀತೆಗಳೊಡನೆ ಶೋಭೆಯಿಂದ ಬರುವ ಕೌರವಶ್ರೇಷ್ಠನಿಗೆ ಪರದೇಶಿಯಂತೆ ಏಕಾಕಿಯಾಗಿ ಬರುವ ಗತಿಯೊದಗಿತೆ ?

ವ॥ ಎಂದು ಒಬ್ಬಂಟಿಗನಾಗಿ ಬಂದ ದುರ್ಯೋಧನನ ಆಗಮನವನ್ನು ನೋಡಿ (ಅಷ್ಟರಿಂದಲೆ) ಯುದ್ಧದ ವೃತ್ತಾಂತವನ್ನು ಅರಿತುಕೊಂಡು ಮನದಲ್ಲಿಯೆ ಬೆರಗಾಗಿ -

೪೨. ದುರ್ಯೋಧನಾ, ಬಿಳಿಯಚಾಮರಗಳೆತ್ತ ಹೋದವು ? ಶ್ವೇತಚ್ಛತ್ರವೆಲ್ಲಿ? ನಿನ್ನ ಸಿಂಹಾಸನವೆಲ್ಲಿ ? ತೊನೆದಾಡುವ ಪಾಳಿಧ್ವಜಗಳೆಲ್ಲಿ ?

೪೩. ಭಾನುಮತಿಯೆಲ್ಲಿ ? ಓಲಗದ ನರ್ತಕಿಯರ ಮಂಡಳಿಯೆಲ್ಲಿ ? ಗೀತವೆಲ್ಲಿ? ವಾದ್ಯಗಳೆಲ್ಲಿ ? ಚೆಲುವೆಯರಾದ ವಧುಗಳ ನೃತ್ತವೆಲ್ಲಿ ?

೪೪. ನಿನ್ನ ನೂರ್ವರು ಮಕ್ಕಳೆಲ್ಲೊ ? ತಮ್ಮಂದಿರೆಲ್ಲೊ ? ಹೇಳು, ಮಗನೇ, ಚತುರಂಗ ಸೇನೆಯೇನಾಯಿತು ? ಅತಿರಥ, ಸಮರಥ, ಮಹಾರಥ, ಅರ್ಧರಥರೆಲ್ಲ ಎಲ್ಲಿ ಹೋದರು ?

ಎಂದು ಶೋಕಂಗೆಯ್ಮೆ ರಾಜರಾಜಂ ನದೀತನೂಜನಂ ಮಾಣಿಸಿ ನೀವಪ್ಪೊಡೆ ವಿದಿತ ವೇದಿತಜ್ಞರುಂ ಭಾವಿತಾತ್ಮರುಮಾಗಿರ್ದ ಜ್ಞಾನಿಗಳ್ ಅಂತೆ ನೆಗಬಲಾಗದೆಂದು ನಿಜಾಗಮನ ವೃತ್ತಾಂತಮಂ ಸಮರಪರಿಚ್ಛೇದಮುಮನಱಿಪಿದೊಡೆ ಕಿಱಿದಾನುಂ ಬೇಗಂ ಚಿಂತಾ ಕ್ರಾಂತ ನಾಗಿರ್ದು ಮಗನೆ ಕಮಲನಾಭನ ನಾಭೀ ನಳಿನಸಂಭವಹಿರಣ್ಯಗರ್ಭನ ಮನಸ್ಸಂಭವರಪ್ಪ ಸಪ್ತರ್ಷಿಯರೊಳಗೆ ಜಗತ್ಪವಿತ್ರನಪ್ಪತ್ರಿನೇತ್ರಸಂಜಾತಸೋಮನಿಂ ಸೋಮವಂಶಮಾದುದು ಆ ಸೋಮವಂಶದೊಳನೇಕರರಸುಮಕ್ಕಳುಮತಿಕ್ರಾಂತರಾದರ್ ಅವರೊಳ್ ಸತ್ಯನೆಂಬವಂಗೆ ಭರತನೆಂಬವನಾದಂ ಆತನಿಂ ಬೞಿಕ್ಕೆ ಭರತಾನ್ವಯಮೆಂಬುದಾದುದು ಆ ಭರತಕುಲ ದೊಳಪ್ರತಿಮಪ್ರಬಲಪ್ರತಾಪಂ ಪ್ರತೀಪನೆಂಬನಾತಂಗೆ ಪುಟ್ಟಿರ್ದ ಶಂತನುವುಂ ಬಾಹ್ಲಿಕನುಂ ವಿನುತನುಂ ದೇವಾಪಿಯುಮೆಂಬೀ ನಾಲ್ವರ್ ತನೂಜರಾದರ್ ಅಲ್ಲಿ ಶಂತನುಗಂ ಗಂಗಾದೇವಿಗಮಾಂ ಪುಟ್ಟಿದೆಂ ಬಾಲ್ಯಕಾಲದೊಳ್ ತೊಡಂಗಿ ಪರಿಗೃಹೀತ ಬ್ರಹ್ಮಚರ್ಯವ್ರತಪರಿಣತನಾದೆಂ ಎಮ್ಮಮ್ಮನಪ್ಪ ಶಂತುನುಗಂ ಯೋಜನಗಂಧಿಯೆನಿಸಿದ ಸತ್ಯವತಿಗಂ ಚಿತ್ರಾಂಗದನುಂ ವಿಚಿತ್ರವೀರ್ಯನುಮೆಂಬಿರ್ವರ್ ತನೂಜರಾದರ್ ಅವರ ಪರೋಕ್ಷದೊಳ್ ನಷ್ಟಸಂತತಿಯಾಗೆ ಕೃಷ್ಣದ್ವೈಪಾಯನರ ವರಪ್ರಸಾದದಿಂದಂಬಿಕೆಗೆ ಧೃತರಾಷ್ಟ್ರನುಂ ಅಂಬಾಲಿಕೆಗೆ ಪಾಂಡುರಾಜನುಂ ಅವರ ಸೂಳೆಯಪ್ಪಾಕೆಗೆ ವಿದುರನುಮೆಂಬ ಮೂವರ್ ತನೂಜರಾದರ್ ಇಂತು ಸೋಮವಂಶದಿಂದಮವಿಚ್ಛಿನ್ನಮಾಗಿ ಬಂದ ಭರತಾನ್ವಯದೊಳಿನ್ನೆವರಂ ಗೋತ್ರಕಲಹಮೆಂಬುದಾದುದಿಲ್ಲ ನಿಮ್ಮೊಳಾದುದು ಇನ್ನಾನೆಂಬುದನಿಂಬುಕೆಯ್ವೊಡೆಪ್ಪೊಡೆ ಪಾಂಡವರನೊಡಂಬಡಿಸಿ ಸಂಧಿಯಂ ಮಾಡಿ ಪೂರ್ವಕ್ರಮದೊಳ್ ನಡೆವಂತು ಮಾೞ್ಪೆಂ ಇನ್ನಮವರೆಮ್ಮೊಂದುದಂ ಇಂಬುಕೆಯ್ಯದವರ್ ಮೀಱುವರಲ್ಲ ನೀನುಮೆಮ್ಮ ಪೇೞ್ದುದಂ ಮೀಱದೆ ನೆಗೞಲ್ವೇೞ್ಕುಮೆನೆ ಸುಯೋಧನಂ ಮುಗುಳ್ನಗೆ ನಕ್ಕು –

ವ।। ಎಂದು ಶೋಕಿಸಲಾಗಿ, ದುರ್ಯೋಧನನು,ಅವನನ್ನು ತಡೆದು, "ನೀವು ಎಲ್ಲವನ್ನೂ ತಿಳಿದವರು, ಆತ್ಮಜ್ಞಾನಿಗಳು. ಹೀಗೆಲ್ಲ ದುಃಖವಶರಾಗಬಾರದು" ಎಂದು ನುಡಿದು ತಾನು ಬಂದ ಉದ್ದೇಶವನ್ನೂ, ಯುದ್ಧನಿರ್ಧಾರವನ್ನೂ ಅರಿಕೆ ಮಾಡಿಕೊಂಡನು. ಭೀಷ್ಮನು ಸ್ವಲ್ಪ ಸಮಯದವರೆಗೆ ಚಿಂತಿಸಿ ಹೀಗೆಂದನು – "ಮಗನೆ, ವಿಷ್ಣುವಿನ ಹೊಕ್ಕುಳ ಕಮಲದಿಂದ ಹುಟ್ಟಿದವನು ಬ್ರಹ್ಮ. ಆತನ ಮಾನಸಪುತ್ರರು ಸಪ್ತರ್ಷಿಗಳು. ಅವರಲ್ಲಿ ಜಗತ್ಪೂಜ್ಯನಾದ ಅತ್ರಿಯ ಕಣ್ಣಿಂದ ಚಂದ್ರನು ಉದ್ಭವಿಸಿ, ಅವನಿಂದ ಸೋಮವಂಶ ವುಂಟಾಯಿತು. ಆ ವಂಶದಲ್ಲಿ ಅನೇಕ ರಾಜರು ಆಗಿಹೋದರು. ಅವರಲ್ಲಿ ಸತ್ಯನೆಂಬುವನಿಗೆ ಭರತನೆಂಬ ಮಗನಾದನು. ಅವನಿಂದ ಮುಂದೆ ಆ ವಂಶ ಭರತವಂಶವೆಂದಾಯಿತು. ಭರತಕುಲದಲ್ಲಿ ಅಸಾಮಾನ್ಯ ಪ್ರತಾಪಿಯಾದವನು ಪ್ರದೀಪ ; ಆತನಿಗೆ ಶಂತನು, ಬಾಹ್ಲಿಕ, ವಿನುತ ಮತ್ತು ದೇವಾಪಿ ಎಂಬ ನಾಲ್ವರು ಮಕ್ಕಳಾದರು. ಶಂತನುವಿಗೆ ಗಂಗಾದೇವಿಯಲ್ಲಿ ನಾನು ಹುಟ್ಟಿದೆನು. ಚಿಕ್ಕಂದಿನಿಂದ ಬ್ರಹ್ಮಚರ್ಯವನ್ನು ಸ್ವೀಕರಿಸಿ, ಅದರಲ್ಲಿ ಪರಿಣತನಾದೆನು. ನಮ್ಮ ತಂದೆ ಶಂತನುವಿಗೂ ಯೋಜನಗಂಧಿಯೆನಿಸಿದ ಸತ್ಯವತಿಗೂ ಚಿತ್ರಾಂಗದ ಹಾಗೂ ವಿಚಿತ್ರವೀರ್ಯ ಎಂಬಿಬ್ಬರು ಮಕ್ಕಳಾದರು. ಅವರು ತೀರಿದ ಬಳಿಕ ವಂಶಕ್ಕೆ ಸಂತತಿಯಿಲ್ಲದಂತಾಗಲು ವ್ಯಾಸಮುನಿಗಳು ಪ್ರಸಾದದಿಂದ ಅಂಬಿಕೆಗೆ ಧೃತರಾಷ್ಟ್ರನೂ

ನಿಮಗೆ ಪೊಡೆಮಟ್ಟು ಪೋಪೀ ।
ಸಮಕಟ್ಟಂ ಬಂದೆನಹಿತರೊಳ್ ಸಂಧಿಯನೇಂ
ಸಮಕೊಳಿಸಲೆಂದು ಬಂದೆನೆ ।
ಸಮರದೊಳೆನಗಜ್ಜ ಪೇೞಿಮಾವುದು ಕಜ್ಜಂ ॥೪೫॥

ಕಲಿಗಂ ಶಂಕೆಯೆ ಚಾಗಿಗಂ ಬೆರಗೆ ಮೇಣ್ ಕಟ್ಟಾಳ್ ನೆರಂಬಾರ್ವನೇ ।
ಕುಲಜಂಗಂ ಮಱೆವಾೞೆ ಸಜ್ಜನಿಕೆಗಂ ಕಲ್ಪೊ [ಳ್ಪೊ] ಜೆಯೇ ಧರ್ಮಿಗಂ ॥
ಕೊಲೆಯೇ ಮಂತ್ರಿಗಮಿಚ್ಚೆಕಾಱತನಮೇ ತಕ್ಕಂ ಪಿಸುಣ್ಬೇೞ್ವನೇ ।
ಚಲಮಂ ಗಂಡುಮನಪ್ಪುಕೆಯ್ವನಗಮಾ ಕೌಂತೇಯರೊಳ್ ಸಂಧಿಯೇ ॥೪೬॥

ನೆಲಕಿಱಿವೆನೆಂದು ಬಗೆದಿರೆ ।
ಚಲಕಿಱಿವೆಂ ಪಾಂಡುಸುತರೊಳೀನೆಲನಿದು ಪಾ ॥
ೞ್ನೆಲನೆನಗೆ ದಿನಪಸುತನಂ ।
ಕೊಲಿಸಿದ ನೆಲನೊಡನೆ ಮತ್ತೆ ಪುದುವಾೞ್ವೆನೇ ॥೪೭॥

ಅಂಬಾಲಿಕೆಗೆ ಪಾಂಡುರಾಜನೂ ಅವರ ಸೂಳೆಯಾಗಿದ್ದವಳಿಗೆ ವಿದುರನೂ ಮಕ್ಕಳಾಗಿ ಹುಟ್ಟಿದರು. ಹೀಗೆ ಸೋಮವಂಶದಿಂದ ಹರಿಗಿಡಿಯದೆ ಬಂದ ಭರತವಂಶದಲ್ಲಿ ಇಲ್ಲಿಯವರೆಗೆ ದಾಯಾದ ಕಲಹವೆಂಬುದು ನಡೆದಿರಲಿಲ್ಲ ; ನಿಮ್ಮಲ್ಲಿ ನಡೆಯಿತು. ಇನ್ನು ನಾನು ಹೇಳುವ ಮಾತನ್ನು ಒಪ್ಪಿಕೊ. ಒಪ್ಪುವೆಯಾದರೆ ಪಾಂಡವರನ್ನು ಒಡಂಬಡಿಸಿ ಒಪ್ಪಂದ ಮಾಡಿ ಮೊದಲಿನಂತೆ (ಕೂಡಿ) ನಡೆಯುವ ಹಾಗೆ ಮಾಡುವೆನು. ಈಗಲಾದರೂ ಅವರು ನಮ್ಮ ಮಾತನ್ನು ಕೇಳುತ್ತಾರೆ ; ಮೀರುವವರಲ್ಲ. ನೀನು ಕೂಡ ನಮ್ಮ ಮಾತನ್ನು ಮೀರದೆ ನಡೆದುಕೊ " ಹೀಗೆ ನುಡಿಯಲಾಗಿ ದುರ್ಯೋಧನನು ಮುಗುಳ್ನಕ್ಕು -

೪೫. ನಿಮಗೆ ನಮಸ್ಕಾರ ಮಾಡಿ ಹೋಗಬೇಕೆಂದು ಬಂದೆನಲ್ಲದೆ ಶತ್ರುಗಳೊಡನೆ ಒಪ್ಪಂದವನ್ನು ಏರ್ಪಡಿಸಲೆಂದೇನು ನಾನು ಬಂದೆನೆ ? ಅಜ್ಜಾ, ಯುದ್ಧದಲ್ಲಿ ಇನ್ನು ನನ್ನ ಕಾರ್ಯವೇನೆಂಬುದನ್ನು ಹೇಳಿ.

೪೬. ವೀರನಿಗೂ ಸಂಶಯವೆ ? ತ್ಯಾಗಿಯಾದವನಿಗೂ ಬೆರಗೆ ? ಕಡುಗಲಿಯಾದವನು ಸಹಾಯವನ್ನು ಬಯಸುವನೆ ? ಕುಲೀನನಿಗೆ ಹಾದರವೆ ? ಸಜ್ಜನನಿಗೆ ಕಳವೆ ? ಧರ್ಮಶೀಲನಿಗೆ ಕೊಲೆಯೆ ? ಮಂತ್ರಿಗೆ ದಾಕ್ಷಿಣ್ಯದ ಮಾತುಗಳೆ ? ಯೋಗ್ಯನಾದವನು ಚಾಡಿ ಹೇಳುವನೆ ? ಛಲವನ್ನೂ ಶೌರ್ಯವನ್ನೂ ಅಳವಡಿಸಿಕೊಂಡ ನನಗೆ ಕುಂತೀಕುಮಾರರೊಡನೆ ಒಪ್ಪಂದವೆ ?

೪೭. ನಾನೇನು ಭೂಮಿಗಾಗಿ ಹೋರಾಡುವೆನೆಂದು ಭಾವಿಸಿದಿರಾ ? ನನ್ನ ಛಲಕ್ಕಾಗಿ ಪಾಂಡವರೊಡನೆ ಹೋರಾಡುವೆನು. ಈ ಭೂಮಿ ನನಗೆ ಹಾಳು ಭೂಮಿ. ಕರ್ಣನನ್ನು ಕೊಲಿಸಿದ ಭೂಮಿಯೊಡನೆ ಮತ್ತೆ ನಾನು ಬಾಳುವುದುಂಟೆ ?

ಅನುಜಸಮೇತನೊಳಂತಕ ।
ತನಯುನೊಳನುಜವ್ಯಪೇತನೀಗಳ್ ದುರ್ಯೋ ॥
ಧನನಳಿಪಿ ಸಂಧಿಗೆಯ್ದೊಡೆ ।
ಮುನಿವರ ಮೆಚ್ಚುವರ ನುಡಿಗೆ ಪಕ್ಕಾಗಿರೆನೇ ॥೪೮॥

ಕೂಡೆ ವಿರೋಧಿಯಂ ತಱಿದು ತದ್ವಶಮಾಂಸದೆ ಭೂತಭೋಜನಂ ।
ಮಾಡದೆ ವೈರಿವಾರವನಿತಾವದನಾಂಬುರುಹಂಗಳಂ ಬೆಳ ॥
ರ್ಮಾಡದೆ ಬಂಧುಶೋಕದೊಳೆ ಪೊರ್ದಿದ ಬಂಧುಜನಕ್ಕೆ ಸಂತಸಂ ।
ಮಾಡದೆ ಸಂಧಿಮಾಡುವನೆ ಪಾಂಡವರೊಳ್ ಫಣಿರಾಜಕೇತನಂ ॥೪೯॥

ಬಾಡಮನಯ್ದನವರ್ ಮುಂ ॥
ಬೇಡಿದೊಡಾನಿತ್ತೆನಿಲ್ಲ ರಾಜ್ಯಾರ್ಧಮನಾಂ ॥
ಬೇಡಿಯವರಲ್ಲಿಗಟ್ಟಿದೊ ।
ಡೇಡಿಸಿ ಱೋಡಿಸನೆ ಪವನನಂದನನೆನ್ನಂ ॥೫೦॥

ಎನ್ನಣುಗಾಳನೆನ್ನಣುಗದಮ್ಮನನಿಕ್ಕಿದ ಪಾರ್ಥಭೀಮರು ।
ಳ್ಳನೆಗಮೊಲ್ಲೆನೆನ್ನೊಡಲೊಳೆನ್ನಸುವುಳ್ಳಿನಮಜ್ಜ ಸಂಧಿಯಂ ॥
ಮುನ್ನಮವಂದಿರಿರ್ಬರುಮನಿಕ್ಕುವೆನಿಕ್ಕಿ ಬೞಿಕ್ಕೆ ಸಂಧಿಗೆ ।
ಯ್ವೆನ್ನೆಗಟ್ದಿಂತಕಾತ್ಮಜನೊಳೆನ್ನಟಲಾಱಿದೊಡಾಗದೆಂಬೆನೇ ॥೫೧॥

೪೮. ತಮ್ಮಂದಿರೆಲ್ಲರನ್ನೂ ಸುರಕ್ಷಿತವಾಗಿ ಉಳಿಸಿಕೊಂಡ ಧರ್ಮರಾಜನೊಡನೆ ತಮ್ಮಂದಿರನ್ನೆಲ್ಲ ಕಳೆದುಕೊಂಡ ದುರ್ಯೋಧನನು ದುರಾಸೆಯಿಂದ ಸಂಧಿಮಾಡಿಕೊಂಡರೆ, ಶತ್ರು-ಮಿತ್ರರಿಬ್ಬರೂ ನನ್ನನ್ನು ಆಡಿಕೊಳ್ಳರೆ ?

೪೯. ಶತ್ರುವನ್ನು ಕೊಂದು ಅವನ ಮಾಂಸಮಜ್ಜೆಗಳನ್ನು ಪಿಶಾಚಿಗಳಿಗೆ ಉಣಿಸದೆ, ವೈರಿಗಳ ವೇಶ್ಯಾಜನದ ಮುಖಕಮಲಗಳು ಬಾಡಿ ಬಿಳುಪೇರುವಂತೆ ಮಾಡದೆ, ಬಂಧು ಶೋಕದಲ್ಲಿರುವ ಬಾಂಧವರಿಗೆಲ್ಲ ಸಂತೋಷವುಂಟು ಮಾಡದೆ ದುರ್ಯೋಧನನು ಪಾಂಡವರೊಡನೆ ಸಂಧಿ ಮಾಡಿಕೊಳ್ಳುವನೆ ?

೫೦. ಈ ಮೊದಲು ಅವರು ಐದು ಊರುಗಳನ್ನು ಬೇಡಿದಾಗ ನಾನು ಕೊಡಲಿಲ್ಲ. ಈಗ ಅರ್ಧರಾಜ್ಯವನ್ನು ನನಗೆ ಕೊಡಿಯೆಂದು ಬೇಡಿ ಅವರಲ್ಲಿಗೆ ನಾನು ಹೇಳಿಕಳಿಸಿದರೆ ಭೀಮನು ನನ್ನನ್ನು ಹೀಯಾಳಿಸಿ, ಹಂಗಿಸಿ ನಗಲಿಕ್ಕಿಲ್ಲವೆ ?

೫೧. ನನ್ನ ಪ್ರೀತಿಯ ಬಂಟ (ಕರ್ಣ) ನನ್ನೂ ನನ್ನ ಪ್ರೇಮದ ತಮ್ಮ(ದುಶ್ಶಾಸನ) ನನ್ನೂ ಕೊಂದ ಅರ್ಜುನ-ಭೀಮರು ಜೀವಂತವಾಗಿರುವವರೆಗೆ ನನ್ನ ದೇಹದಲ್ಲಿ ಪ್ರಾಣವಿರುವವರೆಗೂ, ಅಜ್ಜಾ, ನಾನು ಸಂಧಿಗೆ ಒಪ್ಪಲಾರೆನು. ಮೊದಲು ಆ ಇಬ್ಬರನ್ನು ಕೊಲ್ಲುವೆನು. ಹಾಗೆ ಕೊಂದ ಬಳಿಕ ಧರ್ಮರಾಜನೊಡನೆ ಸಂಧಿ ಮಾಡಿಕೊಳ್ಳೋಣ. ನನ್ನ ದುಃಖ ಆರಿದ ಮೇಲೆ ಅದು ಬೇಡವೆನ್ನುವೆನೆ ?

ಎಂದು ಮತ್ತಮಿಂತೆಂದಂ -

ಪುದುವಾಳಲ್ಕಣಮಾಗದೆಂತುಮವರೊಳ್ ಸಂಧಾನಮಂ ಮಾಡಲಾ ।
ಗದು ನೀಮಿಲ್ಲದೆಯಜ್ಜ ಬಿಲ್ಲಗುರುಗಳ್ ತಾಮಿಲ್ಲದಾ ಕರ್ಣನಿ ॥
ಲ್ಲದೆ ದುಶ್ಶಾಸನನಿಲ್ಲದಾರೊಡನೆ ರಾಜ್ಯಂಗೆಯ್ವೆನಾರ್ಗೆನ್ನ ಸಂ ।
ಪದಮಂ ತೋಱುವೆನಾರ್ಗೆ ತೋಱೆ ಮೆಱೆವೆಂ ನಾನಾವಿನೋದಂಗಳಂ ॥೫೨॥

ಖಂಡಿತಮೆನಿಪ್ಪ ಪರಮಹಿ ।
ಮಂಡಲಧವಳಾತಪತ್ರಸಂಪದಮೆನಗೇ ॥
ಭಂಡಮದನೊಲ್ಲೆನೊಲ್ಲೆನ ।
ಖಂಡಿತಮಭಿಮಾನಮದನೆ ಬಲ್ವಿಡಿವಿಡಿವೆಂ ॥೫೩॥

ಪುಟ್ಟಿದ ನೂರ್ವರುಮೆನ್ನೊಡ ।
ವುಟ್ಟಿದ ನೂರ್ವರುಮಿದಿರ್ಚೆ ಸತ್ತೊಡೆ ಕೋಪಂ ॥
ಪುಟ್ಟಿ ಪೊದಟ್ದುದು ಸತ್ತರ್ ।
ಪುಟ್ಟರೆ ಪಾಂಡವರೊಳಿಱಿದು ಛಲಮನೆ ಮೆಱೆವೆಂ ॥೫೪॥

ಕಾದದಿರೆನಜ್ಜ ಪಾಂಡವ ।
ರಾದರ್ ಮೇಣಿಂದಿನೊಂದೆ ಸಮರದೊಳಾಂ ಮೇ ॥
ಣಾದೆನದಱಿಂದೆ ಪಾಂಡವ ।
ರ್ಗಾದುದು ಮೇಣಾಯ್ತು ಕೌರವಂಗವನಿತಳಂ ॥೫೫॥

ವ॥ ಹೀಗೆಂದು ಮತ್ತೆ ಮಾತನ್ನು ಮುಂದುವರಿಸಿದನು -

೫೨. ಅವರೊಡನೆ ಕೂಡಿ ಬಾಳಲಾಗದು ; ಸಂಧಿ ಮಾಡಿಕೊಳ್ಳಲೂ ಆಗದು. ಅಜ್ಜಾ ನೀವಿಲ್ಲದೆ, ಗುರುಗಳಾದ ದ್ರೋಣರಿಲ್ಲದೆ, ಕರ್ಣನಿಲ್ಲದೆ, ದುಶ್ಶಾಸನನಿಲ್ಲದೆ ನಾನು ಯಾರೊಡನೆ ರಾಜ್ಯವಾಳಲಿ ? ಯಾರಿಗೆ ನನ್ನ ಸಂಪತ್ತನ್ನು ತೋರಲಿ ? ಬಗೆ ಬಗೆಯ ವಿನೋದಗಳನ್ನು ಯಾರಿಗೆ ತೋರಿ ಸಂತೋಷಪಡಲಿ ?

೫೩. ವೈರಿಗಳಿಗೆ ವಿಭಾಗ ಮಾಡಿಕೊಟ್ಟು ಉಳಿವ ಈ ಮುಕ್ಕುಭೂಮಿ ಹಾಗೂ ಶ್ವೇತಛತ್ರ ನನಗೆ ಏತಕ್ಕೆ ಬೇಕು ? ಒಲ್ಲೆ, ನನಗದು ಬೇಡ. ಮುಕ್ಕಾಗದಿರುವ ನನ್ನ ಅಭಿಮಾನವೊಂದೆ ಸಾಕು. ಅದನ್ನೆ ದೃಢವಾಗಿ ಉಳಿಸಿಕೊಳ್ಳುವೆನು.

೫೪. ನನ್ನ ನೂರ್ವರು ಮಕ್ಕಳೂ, ನೂರ್ವರು ಸೋದರರೂ ಶತ್ರುಗಳನ್ನು ಎದುರಿಸಿ ಸತ್ತರು. ಅದರಿಂದ ನನ್ನಲ್ಲಿ ಕೋಪ ಕೆರಳಿ ದಾರುಣವಾಯಿತು. ಸತ್ತವರೇನು ಮರಳಿ ಹುಟ್ಟುವುದಿಲ್ಲವೆ ? ಪಾಂಡವರೊಡನೆ ಕಾದಾಡಿ ನನ್ನ ಛಲವನ್ನೆ ಸಾಧಿಸುವೆನು.

೫೫. ಅಜ್ಜಾ, ನಾನು ಕಾದಾಡದೆ ಬಿಡಲಾರೆ. ಇಂದಿನ ಒಂದು ಕಾಳಗದಲ್ಲಿ ಪಾಡಂವರು ಉಳಿಯಬೇಕು, ಇಲ್ಲವೆ ನಾನು ಉಳಿಯಬೇಕು. ಅದರಿಂದ ಭೂಮಿಯ ಒಡೆತನ ಪಾಂಡವರಿಗೆ ಹೋಗಬೇಕು ಇಲ್ಲವೆ ಕೌರವನಿಗೆ ಉಳಿಯಬೇಕು.

ಎಂದು ರಾಜಾಧಿರಾಜಂ ನಿರ್ವ್ಯಾಜಶೌರ್ಯಾವಳಂಬಿಯಾಗಿ ನುಡಿಯೆ ಗಾಂಗೇಯ ನಱಿದತಿವಿಸ್ಮಯಾಕುಲೀಕೃತಚಿತ್ತನುಂ ಮುಹರ್ಮುಹುರಾಂದೋಳಿತೋತ್ತಮಾಂಗನುಮಾಗಿ-

ಜಲಧಿಗಳೇೞುಂ ಭೂಭೃ ।
ತ್ಕುಲಂಗಳುಂ ರಿಪುಗೆ ಸಿರಿಯನೀವಂತೆತ್ತಂ ॥
ತಳಮಳವಿಗಟಿಯೆ ಕುರುಕುಲ ।
ತಿಳಕಂ ರಿಪುಗೆಂತುಮೀವನಲ್ಲಂ ಶ್ರೀಯಂ ॥೫೬॥

ಜತುಗೇಹಾನಲಬೀಜಮುಗ್ರವಿಷಸಂಜಾತಾಂಕುರಂ ಕ್ರೀಡನೋ ।
ದ್ಧತಿಕೃದ್ದ್ಯೂತವಿನೋದಪಲ್ಲವಚಯಂ ಪಾಂಚಾಲರಾಜಾತ್ಮಜಾ ॥
ಯತಕೇಶಗ್ರಹಪುಷ್ಪಮಾಗೆ ಬೆಳೆದಾ ವೈರದ್ರುಮಂ ಕೌರವ ।
ಕ್ಷಿತಿಪಾಲೋರುಕಿರೀಟಭಂಗಫಲಮಂ ಪೇೞ್ ಮಾಡದೇಂ ಪೋಕುಮೇ ॥೫೭॥

ಎಂದು ನಿಶ್ಚಯಿಸಿ -

ಕುರುರಾಜಾನುಜರಂ ಪ್ರಭಂಜನಸುತಂ ಕೊಂದಿಕ್ಕುಗುಂ ಕೌರವೇ ।
ಶ್ವರನೂರುದ್ವಯಮಂ ಗದಾಪರಿಘದಿಂ ನುರ್ಗೊತ್ತುಗುಂ ಸಪ್ತಸಾ ॥
ಗರಪರ್ಯಂತವಸುಂಧರಾತಳಮನೇಕಚ್ಛತ್ರದಿಂದಾಳ್ಗುಮೆಂ ।
ಬರ ಮಾತಂ ಪುಸಿಯಾಗಲೀಯನದಟಂ ಚಾಳುಕ್ಯಕಂಠೀರವಂ ॥೫೮॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವ ಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿ ಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀಸಾಹಸಭೀಮ ವಿಜಯದೊಳ್ ಭೀಷ್ಮವಚನವ್ಯಾವರ್ಣನಂ ಪಂಚಮಾಶ್ವಾಸಂ ಸಂಪೂರ್ಣಂ

ವ॥ ಹೀಗೆಂದು ಚಕ್ರವರ್ತಿ (ದುರ್ಯೋಧನನು) ಅಕೃತ ಶೌರ್ಯವನ್ನು ಅವಲಂಬಿಸಿ ನುಡಿಯಲು, ಭೀಷ್ಮನು ಅದನ್ನರಿತು ಮನದಲ್ಲಿ ವಿಸ್ಮಯಗೊಂಡು ಮತ್ತೆ ಮತ್ತೆ ತಲೆದೂಗಿ-

೫೬. ಏಳು ಸಮುದ್ರಗಳೂ, ಪರ್ವತಗಳೂ ಶತ್ರುವಿಗೂ ಸಂಪತ್ತನ್ನು ನೀಡುವಂತೆ ತಳ ಬಿಟ್ಟು ಸರಿಯಬಹುದು. ಆದರೆ ಕುರುರಾಜನು ಮಾತ್ರ ಶತ್ರುವಿಗೆ ಸಂಪತ್ತನ್ನು ಎಂದೂ ಬಿಟ್ಟುಕೊಡುವವನಲ್ಲ.

೫೭. ಅರಗಿನ ಮನೆಗಿಟ್ಟ ಬೆಂಕಿ ಬೀಜವಾಯಿತು ; (ಭೀಮನಿಗೆ ಉಣಿಸಿದ) ಘೋರ ವಿಷ ಅಂಕುರವಾಯಿತು ; ವಿನೋದದ ಸೋಗಿನಲ್ಲಿ ನಡೆದ ಜೂಜಿನಲ್ಲಿ ಚಿಗುರೊಡೆಯಿತು ; ದ್ರೌಪದಿಯ ಕೇಶಾಕರ್ಷಣದಲ್ಲಿ ಹೂತು, ಬೆಳೆದ ಆ ದ್ವೇಷ ವೃಕ್ಷವು, ಕೌರವರಾಜನ ಊರುಭಂಗ ಹಾಗೂ ಕಿರೀಟಭಂಗಗಳೆಂಬ ಫಲವನ್ನೂ ಕೊಡದೆ ಹೋಗುವುದೆ ?

ವ॥ ಎಂದು ನಿರ್ಧರವಾಗಿ ಅರಿತು -

೫೮. ಕೌರವರಾಜನ ತಮ್ಮಂದಿರನ್ನೆಲ್ಲ ಭೀಮನು ಕೊಂದು ಹಾಕುವನು, ದುರ್ಯೋಧನನ ತೊಡೆಗಳೆರಡನ್ನೂ ತನ್ನ ಗದೆಯಿಂದ ನುಚ್ಚುನೂರು ಮಾಡುವನು, ಏಳು ಸಮುದ್ರದವರೆಗೆ ಚಾಚಿಕೊಂಡಿರುವ ಈ ಭೂಮಿಯನ್ನೆಲ್ಲ ತನ್ನ ಏಕಛತ್ರಾಧಿಪತ್ಯಕ್ಕೆ ಒಳಪಡಿಸಿ ಆಳುವನು - ಎಂಬವರ ಮಾತನ್ನು ಚಾಲುಕ್ಯ ಕಂಠೀರವ (ಭೀಮ)ನು ಹುಸಿಯಾಗಗೊಡುವನೆ ?

# ಷಷ್ಠಾಶ್ವಾಸಂ

ಶ್ರೀವಧುವಂ ನಿಜಭುಜಶೌ ।
ರ್ಯಾವಷ್ಟಂಭದೊಳೆ ಕಯ್ಗೆಮಾಡಲ್ ಜಯಲ ॥
ಕ್ಷ್ಮೀವಲ್ಲಭನಿರ್ದಂ ಪೃ ।
ಥ್ವೀವಲ್ಲಭನುದಿತಕೀರ್ತಿ ಸಾಹಸಭೀಮಂ ॥೧॥

ಅಂತು ಗಾಂಗೇಯಂ ಮನದಳ್ ಪೊಗಟ್ಟು

ಶರಮೊಂದಂ ತೆಗೆದು ನಿಜೋ ।
ದರದಿಂ ಲೆಕ್ಕಣಿಕೆಮಾಡಿ ಗಜಮದಮಸಿಯಂ ॥
ತರಿಸಿ ಪತಾಕಾಪಟದೊಳ್ ।
ಬರೆದಟ್ಟದನಂಧನೃಪತಿಗಂ ಸಿಂಧುಸುತಂ ॥೨॥

ಅಂತು ನಿಜನಾಮಾಂಕಿತ ಲೇಖಮಂ ಬರೆದು ಮೊಮ್ಮ(ನೆಮ್ಮ) ನುಡಿದ ನುಡಿಯನೆಂತುಮೊಡಂಬಡುವನಲ್ಲಂ ನೀನುಂ ಗಾಂಧಾರಿಯುಮಿರ್ದು ಕುರುಕುಲ ಪ್ರದೀಪ ದುರ್ಯೋಧನನಂ ಕೌಂತೇಯರೊಳೆತ್ತಾನುಂ ಸಂಧಿಯಂ ಮಾಡಿ ಪೂರ್ವಕ್ರಮದೊಳೆ ನಡೆವಂತು ಮಾಳ್ಪುದೆಂದು ಸಂಜಯನ ಕಯ್ಯೊಳ್ ಕೊಟ್ಟು ಧೃತರಾಷ್ಟ್ರನಲ್ಲಿಗಟ್ಟುವುದುಂ ಕುರುರಾಜಂ ಸಿಂಧುಸುತನ ಮೊಗಮಂ ನೋಡಿ -

೧. ಭೂಮಂಡಲಕ್ಕೆ ಒಡೆಯನೂ, ಖ್ಯಾತಿವಂತನೂ ಆದ ಸಾಹಸಭೀಮನು ತನ್ನ ತೋಳ್ಬಲದ ಶೌರ್ಯದಿಂದ ಐಶ್ವರ್ಯಲಕ್ಷ್ಮಿಯನ್ನು ವಶಮಾಡಿಕೊಳ್ಳಲು ಅನುವಾಗಿರುವನು.

ವ॥ ಹೀಗೆ ಭೀಷ್ಮನು ಮನಸ್ಸಿನಲ್ಲಿಯೆ ಆತನನ್ನು ಹೊಗಳಿ -

೨. ತನ್ನ ಮೈಯಲ್ಲಿ ನಾಟಿದ್ದ ಬಾಣವೊಂದನ್ನು ಹಿರಿದುಕೊಂಡು, ಆನೆಯ ಮದೋದಕವನ್ನೆ ಮಸಿಯಾಗಿ ಬಳಸಿ, ಧ್ವಜಪಟದಲ್ಲೊಂದು ಪತ್ರವನ್ನು ಬರೆದು ಧೃತರಾಷ್ಟ್ರನಿಗೆ ಕಳಿಸಿದನು.

ವ॥ ಅದರಲ್ಲಿ ತನ್ನ ಹೆಸರನ್ನು ಕಾಣಿಸಿ, "ಮೊಮ್ಮಗನು ನಮ್ಮ ಮಾತಿಗೆ ಏನಾದರೂ ಒಡಂಬಡುವವನಲ್ಲ. ನೀನೂ ಗಾಂಧಾರಿಯೂ ಸೇರಿ ಕುರುಕುಲದೀಪನಾದ ದುರ್ಯೋಧನನಿಗೂ ಪಾಂಡವರಿಗೂ ಹೇಗಾದರೂ ಸಂಧಿಮಾಡಿ ಮೊದಲಿನಂತೆ ಅವರು ಕೂಡಿ ನಡೆಯುವ ಹಾಗೆ ಮಾಡಬೇಕು" ಎಂದು ತಿಳಿಸಿ ಸಂಜಯನ ಕೈಯಲ್ಲಿ ಅದನ್ನು ಕೊಟ್ಟು ಕಳುಹಿಸಲಾಗಿ, ದುರ್ಯೋಧನನು ಭೀಷ್ಮನ ಮುಖವನ್ನು ನೋಡಿ -

ತುಂಗಕುರುವಂಶಮಯಶೋ ।
ಭಂಗಂ ಛಿದ್ರಿತಮದೆನ್ನ ದೂಸಜೆನಾಯ್ತಾ ॥
ನುಂ ಗಡ ಕುರುರಾಜನೆ ನೀ ।
ಮುಂ ಗಡ ಸಂಧಾನವೇಟ್ಟಿರೆನಗರಸು ಗಡಾ ॥೩॥

ಈಯೆರಡುಮೆನ್ನ ನಿಡುದೋ ।
ಳಾಯತ್ತಂ ವೀರವೃತ್ತಿ ಜಯಮೆಂಬುದು ದೈ ॥
ವಾಯತ್ತಮಜ್ಜ ಭರತಾ ।
ನ್ವಾಯಕ್ಕೆ ಕಲಂಕಮಾಗದಂತಿರೆ ನೆಗಟ್ವೆಂ ॥೪॥

ಬೆಸಕೆಯ್ವೆಂ ಬಿಡಿಮಜ್ಜ ಮಂಗಳಮಹಾಶ್ರೀಸಂಧಿಕಾರ್ಯಕ್ಕೆ ಲಂ ।
ಘಿಸಿದೆಂ ನಿಮ್ಮಯ ಮಾತನೊರ್ಮೆಗೆ ಮದಜ್ಞಾಲಂಘನಂ ದೋಷಮೊಂ ॥
ದಿಸದಿನ್ನಾಗ್ರಹಮಂ ಬಿಸಟ್ಟುದೆನೆ ಸತ್ತ್ವಕ್ಕಂ ತದೇಕಾಂಗಸಾ ।
ಹಸಕಂ ವಿಸ್ಮಯಮುತ್ತು ಮೆಚ್ಚಿ ಪೊಗಟ್ದಂ ಮಂದಾಕಿನೀನಂದನಂ ॥೫॥

ಗುರುಭೀಷ್ಮಾರ್ಕಸುತಾದ್ಯಶೇಷಸುಭಟಾನೀಕಂ ವಿನಿಶ್ಶೇಷಮಾ ।
ಗಿರೆ ಕೌರವ್ಯವಿಶೇಷಕಂ ಚಲಿತನಲ್ಲೇಕಾಕಿ ಕುಂತೀತನೂ ॥
ಜರೊಳೆಂತುಂ ಪುದುವಾಟಲೊಲ್ಲನಿಱಿಯಲ್ಕೆಂದಿರ್ದಪಂ ಗಂಡನೀ ।
ಪರಿಯೊಳ್ ಮೆಯ್ಗಲಿಯಾವನೆಂದು ಪೊಗಟ್ದಂ ಮಂದಾಕಿನೀನಂದನಂ ॥೬॥

೩. "ಉನ್ನತವಾದ ಕುರುವಂಶವು ನನ್ನಿಂದಾಗಿ ದುಷ್ಕೀರ್ತಿಗೊಳಗಾಗಿ ಛಿದ್ರಿತವಾಯಿತು. ಇಂತಹ ನಾನು ರಾಜನಂತೆ ! ನೀವು ಸಂಧಾನಮಾಡಲು ಹೇಳುವವರಂತೆ! ನನಗೆ ರಾಜ್ಯವಂತೆ !

೪. ಈ ಎರಡು ತೋಳುಗಳಿಂದ ಶೂರನಾಗಿ ಹೋರಾಡುವುದು ನನ್ನ ಕೈಯಲ್ಲಿದೆ; ಗೆಲವೆಂಬುದು ದೈವದ ಕೈಯಲ್ಲಿ. ಅಜ್ಜಾ, ಭರತವಂಶಕ್ಕೆ ಕಲಂಕ ಬಾರದಂತೆ ನಡೆಯುವೆನು.

೫. ಅಜ್ಜಾ, ನನಗಿನ್ನು ಅಪ್ಪಣೆ ಕೊಡಿ. ನಿಮ್ಮ ಮಹಾಪೂಜ್ಯವಾದ ಸಂಧಿಕಾರ್ಯದ ಮಂಗಳವನ್ನು ಬಿಟ್ಟುಬಿಡಿ. ಇದೊಂದು ಸಲ ನಿಮ್ಮ ಮಾತನ್ನು ಮೀರಿದೆನು. ಈ ಆಜ್ಞಾಲಂಘನವೇನು ದೋಷವಾಗದು. ಇನ್ನು ನೀವು ಒತ್ತಾಯ ಮಾಡಬೇಡಿ." ಈ ಮಾತನ್ನು ಕೇಳಿ ಭೀಷ್ಮನು ಅವನ ಕೆಚ್ಚಿಗೂ ಅಸಹಾಯ ಸಾಹಸಕ್ಕೂ ಬೆರಗಾಗಿ, ಮೆಚ್ಚಿ ಹೊಗಳಿದನು.

೬. "ದ್ರೋಣ, ಭೀಷ್ಮ, ಕರ್ಣನೇ ಮೊದಲಾದ ಮಹಾವೀರರೆಲ್ಲ ನಾಶವಾಗಿ ಹೋದರೂ, ತಾನೊಬ್ಬನೇ ಉಳಿದ ಕೌರವನು ತನ್ನ ಛಲವನ್ನು ದೃಢವಾಗಿ ಹಿಡಿದುಕೊಂಡೆ ಇರುವನು. ಪಾಂಡವರೊಡನೆ ಎಂದಿಗೂ ಕೂಡಿಬಾಳಲು ಒಲ್ಲನು ; ಅವರೊಡನೆ ಹೋರಾಡಲು ಸಿದ್ಧನಾಗಿರುವನು. ಇಂತಹ ಏಕಾಂಗವೀರನೂ, ಧೀರನೂ ಇನ್ನಾವನುಂಟು ?" ಎಂದು ಭೀಷ್ಮನು ಹೊಗಳಿದನು.

ಅಂತು ಗಾಂಗೇಯಂ ಮನದೊಳ್ ಪೊಗಟ್ದು "ಅಶುಭಸ್ಯ ಕಾಲ ಹರಣ" ಮೆಂಬೀ ಕಾರ್ಯಾರ್ಥಮನವಧಾರಿಸಿ - ಮಗನೆ ನೀನೆಂತುಮೆಮ್ಮ ಪೇಳ್ದುದಂ ಕಯ್ಕೊಳ್ಳದೆ ಛಲಮೆನೆ ಕಯ್ಕೊಂಡು ಕೌಂತೇಯರೊಳ್ ಕಾದಿದಲ್ಲದಿರೆನೆಂಬೆಯಪ್ಪೊಡೆ ತೀರ್ಥಯಾತ್ರೆಗೆ ಪೋದ ಬಲ ದೇವಂ ಬರ್ಪನ್ನೆಗಂ ನೀನಿರ್ದೆಡೆಯನಱಿಯದಂತು ಮೆಯ್ಗರೆದು ಅಶ್ವತ್ಥಾಮಕೃಪ ಕೃತವರ್ಮರ್ ಮೇಳಾಪಕ್ಕೆ ಬರ್ಪನ್ನೆಗಂ ಕಾಲವಂಚನೆಗೆಯ್ವುದು ಮೇಣ್ ಜಲಮಂತ್ರ ವಿದ್ಯಾಭ್ಯಾಸಮಂ ಕಯ್ಕೊಂಡು ಕುರುಕ್ಷೇತ್ರದುತ್ತರ ದಿಶಾಭಾಗದ ವೈಶಂಪಾಯನಸರೋವರಮಂ ಪೊಕ್ಕಿರ್ದು ಇಂದಿನಿರುಳಂ ಕಟಿದು ನೀಂ ನಾಳೆ ನೆಗಟ್ವುದಂ ನೆಗಟ್ವುದೆನೆ-ಮಹಾಪ್ರಸಾದ ಮಿದನೊಡಂಬಟ್ಟೆನಂತೆಗೆಯ್ವೆನೆಂದು ಹಿತೋಪದೇಶಂಬೆರಸು ಜಲಮಂತ್ರೋಪದೇಶಮಂ ಕಯ್ಕೊಂಡು ಕುರುಕುಲಪಿತಾಮಹನಂ ಬೀಟ್ಕೊಂಡು ನಿಜಭುಜಗದಾಸಹಾಯನುಮಾಗಿ ಸಂಗ್ರಾಮಭೂಮಿಯೊಳ್ ಬರ್ಪಲ್ಲಿ ತನ್ನಂತರ್ಗತದೊಳ್ -

ದಿನಕರತನಯನ ದುಶ್ಶಾ ।
ಸನನ ವಿಯೋಗದೊಳಮಿಂದುವರೆಗಂ ನೋವಿ ॥
ಲ್ಲೆನಗಹಿತರೊಡನೆ ಸಂಧಿಗು ।
ಡೆನೆ ನೊಂದೆಂ ಸ್ವಜನಗುರುಜನಾಭ್ಯರ್ಥನೆಯಿಂ ॥೭॥

ವ॥ ಹೀಗೆ ಮನಸ್ಸಿನಲ್ಲಿಯೆ ಅವನನ್ನು ಹೊಗಳಿ "ಕೆಡುಕನ್ನು ಸಾಧ್ಯವಾದಷ್ಟು ಮುಂದೂಡಬೇಕು" ಎಂಬ ಉಕ್ತಿಗನುಸಾರವಾಗಿ ಕಾರ್ಯವೇನೆಂದು ಯೋಚಿಸಿ ಹೀಗೆ ನುಡಿದನು, - "ಮಗನೆ, ನೀನು ಏನಾದರೂ ನಮ್ಮ ಮಾತನ್ನು ಕೇಳದೆ ಹಠಹಿಡಿದು ಪಾಂಡವರೊಡನೆ ಹೋರಾಡುವುದನ್ನೇ ನಿರ್ಧಾರ ಮಾಡಿದೆಯಾದರೆ ತೀರ್ಥಯಾತ್ರೆಯಿಂದ ಬಲರಾಮನು ಮರಳಿ ಬರುವವರೆಗೆ ನೀನು ಗುಪ್ತಸ್ಥಾನದಲ್ಲಿ ಅಡಗಿಕೊಂಡು ಅಶ್ವತ್ಥಾಮ, ಕೃಪ, ಕೃತವರ್ಮರು ನಿನ್ನನ್ನು ಕೂಡಿಕೊಳ್ಳುವವರೆಗೆ ಸಮಯ ಕಳೆಯುತ್ತಿರು ; ಅಥವಾ ಜಲಮಂತ್ರ ವಿದ್ಯೆಯನ್ನು ಸ್ವೀಕರಿಸಿ ಕುರುಕ್ಷೇತ್ರದ ಉತ್ತರ ಭಾಗದಲ್ಲಿರುವ ವೈಶಂಪಾಯನ ಸರೋವರದಲ್ಲಿ ಅಡಗಿಕೊಂಡು ಇಂದಿನ ರಾತ್ರಿಯನ್ನು ಕಳೆದು ಬಿಡು. ನಾಳೆ ನೀನು ಏನು ಮಾಡುವುದೋ ಅದನ್ನು ಮಾಡು." ದುರ್ಯೋಧನನು "ತಮ್ಮ ಅಪ್ಪಣೆಯಂತೆ ಆಗಲಿ. ಇದಕ್ಕೆ ಒಪ್ಪಿದೆನು. ಹೀಗೆಯೆ ಮಾಡುವೆನು" ಎಂದು ಹೇಳಿ, ಹಿತೋಪದೇಶ ದೊಡನೆ ಜಲಮಂತ್ರದ ಉಪದೇಶವನ್ನೂ ಸ್ವೀಕರಿಸಿ, ಅಜ್ಜನಿಂದ ನಿರೋಪ ಹೊಂದಿ, ತನ್ನ ಹೆಗಲ ಮೇಲೆ ಗದೆಯೇರಿಸಿಕೊಂಡು ರಣಭೂಮಿಯಲ್ಲಿ ಬರುತ್ತ ತನ್ನ ಮನಸ್ಸಿನಲ್ಲಿಯೇ (ಹೀಗೆಂದುಕೊಂಡನು) -

೭. "ಕರ್ಣನ ಹಾಗು ದುಶ್ಶಾಸನನ ಅಗಲಿಕೆಯಿಂದ ಇಂದಿನವರೆಗೆ ನನಗೆ (ಅಷ್ಟು) ನೋವಿಲ್ಲ : ಆದರೆ ವೈರಿಗಳೊಡನೆ ಸಂಧಿ ಮಾಡಿಕೊ ಎಂದು ನನ್ನವರೂ ಹಿರಿಯರೂ ಬೇಡಿಕೊಂಡುದರಿಂದ ನೋವಾಯಿತು.

ಅರಿಗಳ್ ಪಾಂಡವರೊಳ್ ನಾಂ ।
ವಿರೋಧಮಂ ಬಿಸಿಟು ಸಂಧಿಯಂ ಮಾಡುವುದೆಂ ॥
ಬರ ಮಾತಂ ಕೇಳಿಸಲೆ ।
ನ್ನೆರಡುಂ ಕಿವಿಗಳನದೇಕೆ ಬದಿ ಮಾಡಿದನೋ ॥೮॥

ಎಂದು ಕುರುಕುಲಪ್ರದೀಪಂ ತತ್ಸರೋವರಮನೆಯ್ದಿವಂದಾಗಳ್

ಒಂದೆರಡು ಮತ್ತರಂತರ ।
ದಿಂದಂ ಪೊಱಮಟ್ಟ ಪಜ್ಜೆಯಿಂ ಸಲೆ ಕೊಳನಂ ॥
ಪಿಂದುಪೆಱಗಾಗಿ ಪುಗೆ ಛಃ ।
ಎಂದವನಂ ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟಳ್ ॥೯॥

ತುಱುವಂ ಕಳಿಸುವ ಕೃಷ್ಣೆಯ ।
ನಿಱೆಯಂ ಪಿಡದುರ್ಚವೇಳ್ವ ಕೊಳನಂ ಪಿಂದುಂ ॥
ಪೆಱಗಾಗಿ ಪುಗುವ ದುರ್ಣಯ ।
ಮಱೆಪವೆ ಕೌರವನ ರಾಜ್ಯಾದಾಯದ [ಕುಂ] ದಂ ॥೧೦॥

ಅಂತು ಸರೋವರಮನೆಯ್ದಿವಂದಾಗಳ್ -

ಗಗನಂ ಬಿಬ್ದುದೊ ಮೇಣ್ ನೆಲಕ್ಕೆ ನೆಲನೇಂ ಪತ್ತಿತ್ತೊ ಮೇಣಿಲ್ಲಿ ಪ ।
ನ್ನಗವೃಂದಾರಕರೆಂದುಮಿರ್ಪ ಬಿಲನೋ ಮೇಣಿಲ್ಲಿ ದಿಙ್ನಾಗರಾ ॥
ಜಿಗೆ ಮೆಯ್ಗರ್ಚಿಕೊಳಲ್ಕಜಂ ಸಮೆದ ತೋಯೋದ್ದೇಶಮೋ ಸಂದೆಯಂ ।
ಬಗೆಗಾದತ್ತೆನಿಸಿರ್ದುದೇಂ ಪಿರಿದೊ ವೈಶಂಪಾಯನಾಬ್ಜಾಕರಂ ॥೧೧॥

೮. ಶತ್ರುಗಳಾದ ಪಾಂಡವರೊಡನೆ ವೈರವನ್ನು ಬಿಟ್ಟು ಸಂಧಿ ಮಾಡಿಕೊ ಎಂಬವರ ಮಾತನ್ನು ಕೇಳಿಸಿಕೊಳ್ಳಲು ನನ್ನ ಕಿವಿಗಳೆರಡನ್ನು ಬ್ರಹ್ಮನೇಕೆ ಮಾಡಿದನೋ !

ವ॥ ಹೀಗೆಂದು ದುರ್ಯೋಧನನು ಆ ಸರೋವರದ ಬಳಿಗೆ ಬಂದಾಗ -

೯. ಒಂದೆರಡು ಮತ್ತರುಗಳಷ್ಟು ಅಂತರದಿಂದ ಹಿಂಬರಿಕೆಯ ಹೆಜ್ಜೆಯಿಡುತ್ತ (ಕೊಳದಲ್ಲಿ ಹೊರಗೆ ಹೋದ ಹೆಜ್ಜೆ ಮೂಡುವಂತೆ) ಹಿಂದುಮುಂದಾಗಿ ಸರೋವರವನ್ನು ಸೇರಲಾಗಿ, "ಛೀ" ಎಂದು ರಾಜ್ಯಲಕ್ಷ್ಮಿಯು ಜಿಗುಪ್ಸೆಯಿಂದ ಅವನನ್ನು ಬಿಟ್ಟು ತೊಲಗಿದಳು.

೧೦. ಹಸುಗಳನ್ನು ಕಳ್ಳತನದಿಂದ ಹಿಡಿಸುವ, ದ್ರೌಪದಿಯ ಸೀರೆಯನ್ನು ಸುಲಿಯಲು ಹೇಳುವ, ಸರೋವರವನ್ನು ಹಿಂದುಮುಂದಾಗಿ ಹೊಗುವ ಹೀನ ನಡತೆಗಳು ಕೌರವ ರಾಜನ ರಾಜ್ಯದ ಮತ್ತು ಶೌರ್ಯದ ಕುಂದನ್ನು ಸೂಚಿಸುವುದಿಲ್ಲವೆ ?

ವ॥ ಹೀಗೆ ಸರೋವರಕ್ಕೆ ಬಂದಾಗ -

೧೧. ಆಕಾಶವೆ ಕೆಳಗೆ ಬಂದು ಬಿದ್ದು ನೆಲಕ್ಕೆ ಹತ್ತಿಕೊಂಡಿತೋ ಅಥವಾ ಇದೇನು ನಾಗದೇವತೆಗಳು ವಾಸಮಾಡುವ ಗೂಡೋ ಅಥವಾ ದಿಗ್ಗಜಗಳೆಲ್ಲಕ್ಕೂ ಸ್ನಾನಮಾಡಲೆಂದು ಬ್ರಹ್ಮನು ನಿರ್ಮಿಸಿದ ಜಲಾಶಯವೋ ಎಂದು ಮನಸ್ಸಿಗೆ ಭ್ರಾಂತಿಯಾಗುವಂತೆ ವೈಶಂಪಾಯನ ಸರೋವರವು ಅದೆಷ್ಟು ವಿಶಾಲವಾಗಿತ್ತು !

ಅಂತು ಗಂಭೀರನೀರಾಕರಮಿರ್ಪಂತಿರ್ದ ಕಮಲಾಕರಮಂ ನೋೞ್ಪಲ್ಲಿ -

ಕುರುಪತಿ ನಿನ್ನ ಪೊಕ್ಕ ತೊಱೆಗಳ್ ಮೊದಲಾಗಿಯೆ ಬತ್ತುತಿರ್ಪುವೀ ।
ದೊರೆಯ ದುರಾತ್ಮನಂ ಖಳನನಾನೊಳಕೊಂಡೊಡೆ ಭೀಮನೀ ಸರೋ ॥
ವರಮುಮನೆಮ್ಮುಮಂ ಕದಡುಗುಂ ಪುಗದಿರ್ ತೊಲಗೆಂದು ಬಗ್ಗಿಪಂ ।
ತಿರೆ ನೆಗೆದತ್ತನೇಕಬಕಕೋಕಮರಾಳವಿಹಂಗಮಸ್ವನಂ ॥೧೨॥

ವಳಿತ ಶಿಳೀಮುಖಮುತ್ಪಳ ।
ದಳನಯನಂ ಕಂಜರಂಜಿತಂ ಜಯಲಕ್ಷ್ಮೀ ॥
ವಿಳಸಿತಮೆನೆ ದಿಟ್ಟಗೆ ಕೊಳು ।
ಗುಳಮಂ ಪೋಲ್ದತ್ತು ಪೂಗೊಳಂ ಕೌರವನಾ ॥೧೩॥

ಆಗಳ್ ಕುರುಕುಳಸರೋರಾಜಹಂಸನಲ್ಲಿಯ ರಾಜಹಂಸಿಗಳುಮನಾ ವಿಶ್ವ ವಿಶ್ವಂಭರಾಧಃಕೂರ್ಮನಲ್ಲಿಯ ಕೂರ್ಮಗಳುಮನಾ ಭರತಕುಲಚಕ್ರೇಶ್ವರನಲ್ಲಿಯ ಚಕ್ರವಾಕಂಗಳುಮನಾ ಮತ್ಸ್ಯಲೋಚನನಲ್ಲಿಯ ಮತ್ಸ್ಯಂಗಳುಮನಾ ಪುರುಷವರಪುಂಡರೀಕನಲ್ಲಿಯ ಪುಂಡರೀಕಂಗಳುಮನಾ ಕುರುಕುಲಕುವಲಯಲಲಾಮನಲ್ಲಿಯ ಕುವಲಯಂಗಳುಮನಾ ಶಂಖಚಕ್ರಾಂಕಿತಚರಣನಲ್ಲಿಯ ಷಟ್ಚರಣಂಗಳುಮನಾ ಗಂಭೀರನಲ್ಲಿಯ ಗಂಭೀರಧ್ವನಿಯುಮನತಿಕುತೂಹಲಂಬೆರಸು ನೋಡುತುಂ ಬಂದು ತನ್ನ ಮೆಯ್ಯೊಳ್ ಕಱಂಗಿದ ನೆತ್ತರಂ ಕರ್ಚಿ ಕಳೆದು ಕರಚರಣವದನಪ್ರಕ್ಷಾಳನಂಗೆಯ್ದು ಮುಕ್ಕುಳಿಸಿಯುಗುಳ್ದಾಚಮನಕ್ರಿಯೆಗಳಂ ನಿರ್ವರ್ತಿಸಿ ಜಲದೇವತಾನಮಸ್ಕಾರಂಗೆಯ್ದು ಜಲಮಂತ್ರದಿಂ ಜಲಮನಭಿಮಂತ್ರಿಸಿ -

ವ॥ ಆಳವಾದ ಕಡಲಂತಿರುವ ಆ ಕಮಲ ಸರೋವರವನ್ನು ನೋಡುತ್ತಿರುವಾಗ-

೧೨. "ಕುರುರಾಜಾ, ನೀನು ಹೊಕ್ಕ ನದಿಗಳು ತಟ್ಟನೆ ಬತ್ತಿಹೋಗುವುವು. ಈ ಪರಿಯ ಪಾಪಿಯಾದ ದುಷ್ಟನನ್ನು ಒಳಗೆ ಇಟ್ಟುಕೊಂಡರೆ ಭೀಮನು ಈ ಸರೋವರವನ್ನೂ ನಮ್ಮನ್ನೂ ಕದಡಿಬಿಡುವನು. (ಆದುದರಿಂದ) ನೀನು ಇಲ್ಲಿ ಪ್ರವೇಶಮಾಡಬೇಡ ಹೋಗಾಚೆಗೆ ಎಂದು ಗದರಿಸುವ ರೀತಿಯಲ್ಲಿ ಅಲ್ಲಿದ್ದ ಬಕಪಕ್ಷಿ ಕೊಕ್ಕರೆ, ಹಂಸ ಮೊದಲಾದ ಅನೇಕ ಪಕ್ಷಿಗಳ ಧ್ವನಿ ಹೊಮ್ಮಿತು".

೧೩. ಶಿಳೀಮುಖ (೧. ದುಂಬಿ, ೨. ಬಾಣ)ಗಳಿಂದ ಸುತ್ತುವರಿಯಲ್ಪಟ್ಟು, 'ಉತ್ಪಳದಳನಯನ'ವಾಗಿ (೧. ನೈದಿಲೆಯೆಸಳುಗಳೆ ಕಣ್ಣಾಗಿ. ೨. ಈಟಿಗಳನ್ನು ಹೊಂದಿ?) "ಕಂಜರಂಜಿತ"ವಾಗಿ (೧. ಕಮಲಗಳಿಂದ ಶೋಭಿಸಿ. ೨. ರಾಜಕುಮಾರರಿಂದ ಕಂಗೊಳಿಸಿ) ಜಯಲಕ್ಷ್ಮಿಯ ವಿಲಾಸದಿಂದ ಒಡಗೂಡಿದ ಸರೋವರವು ಯುದ್ಧಭೂಮಿಗೆ ಸದೃಶವಾಗಿ ತೋರಿತು.

ವ॥ ಕುರುಕುಲವೆಂಬ ಸರೋವರದ ರಾಜಹಂಸನೂ, ಸಮಸ್ತ ಭೂಮಂಡಲವನ್ನು ಹೊತ್ತು ನಿಂತ ಕೂರ್ಮನೂ, ಭರತವಂಶದ ಚಕ್ರವರ್ತಿಯೂ, ಮೀನುಗಳಂತೆ ಕಣ್ಣುಳ್ಳವನೂ, ಪುರುಷಶ್ರೇಷ್ಠನೂ ಕುರುವಂಶಭೂಷಣನೂ, ಶಂಖ, ಚಕ್ರಗಳ ಚಿಹ್ನೆಗಳನ್ನು ಪಾದಗಳಲ್ಲಿ ಹೊಂದಿದವನೂ, ಗಂಭೀರನೂ ಆದ ದುರ್ಯೋಧನನು ಅಲ್ಲಿಯ ರಾಜಹಂಸಿ, ಕೂರ್ಮ (ಆಮೆ), ಮೀನು, ಪುಂಡರೀಕ, ತಾವರೆ, ದುಂಬಿಗಳನ್ನು ನೋಡುತ್ತ

ನರಲೋಕಮನನುಭೋಗಿಸಿ ।
ಸುರಲೋಕದ ಸುಖಮನಾತ್ಮವಿಭವದೆ ತಳೆದಾ ॥
ಕುರುಪತಿ ವೈಶಂಪಾಯನ ।
ಸರಮಂ ಪುಗುವಂತೆ ನಾಗಲೋಕವ ಪೊಕ್ಕಂ ॥೧೪॥

ಉರುಪಕ್ಷಪಾತಮಧುರ ।
[ಸ್ವರನಂ ಪ್ರಸಾಧಿತದಿಶಮದ] ಚ್ಯುತನಂ ಭಾ ॥
ಸುರ ಕಮಲಾಕರದೊಳ್ ಧಾ ।
ರ್ತರಾಷ್ಟ್ರನಂ ಪೋಲ್ತು ಧಾರ್ತರಾಷ್ಟ್ರಂ ಪೊಕ್ಕಂ ॥೧೫॥

ಅಂತು ಕುರುಕುಲಮಹೀಪಾಲಂ ಮಧ್ಯಮಲೋಕಪಾಲನಾಗಿಯುಂ ಪಶ್ಚಿಮದಿಕ್ಪಾಲಕನಂತೆ ಜಲನಿಲಯನಾಗಿಯುಂ -

ವನರುಹವಿಷ್ಟರಂಗುಚಿತರೇಚಕಪೂರಕಕುಂಭಕಕ್ರಿಯಾ ।
ಮನಮಿರೆ ನೆತ್ತಿಯೊಳ್ ದರನಿಮೀಲಿತದೃಷ್ಟಿನಿವಿಷ್ಟಮಾಗೆ ಮೂ ॥
ಗಿನ ತುದಿಯೊಳ್ ನಿರುದ್ಧಕರಮುಂ ನಿಲೆ ಮಂತ್ರಪದಾಕ್ಷರಂಗಳಂ ।
ಜಿನುಗುತಲಿರ್ದನಾ ಪರಮಯೋಗಿಯವೊಲ್ ಫಣಿರಾಜಕೇತನಂ ॥೧೬॥

ಅನ್ನೆಗಮತ್ತಲ್ ಶಲ್ಯನ ವಧೆಯಿಂ ಬಟಿಯಂ ದುರ್ಯೋಧನನ ರೂಪ

ಅವುಗಳ ಗಂಭೀರಧ್ವನಿಯನ್ನು ಕೇಳುತ್ತ ಬಂದು, ತನ್ನ ಮೈಗೆ ಮೆತ್ತಿಕೊಂಡ ರಕ್ತವನ್ನು ತೊಳೆದು; ಕೈಕಾಲು ಮುಖಗಳನ್ನು ತೊಳೆದುಕೊಂಡು, ಮುಕ್ಕುಳಿಸಿ ಉಗುಳಿ, ಆಚಮನ ಮಾಡಿ ಜಲದೇವತೆಗೆ ನಮಸ್ಕರಿಸಿ, ಜಲಮಂತ್ರದಿಂದ ನೀರನ್ನು ಮಂತ್ರಿಸಿ -

೧೪. ಮನುಷ್ಯಲೋಕದ ಸುಖವನ್ನು ಉಂಡು ತೀರಿಸಿ, ಸ್ವರ್ಗಲೋಕದ ಸುಖವನ್ನು ಆತ್ಮೋನ್ನತಿಯಿಂದ ಹೊಂದಿದ ತರುವಾಯ ನಾಗಲೋಕ (ಪಾತಾಳ) ವನ್ನು ಹೊಗುವಂತೆ ಕೌರವನು ವೈಶಂಪಾಯನ ಸರೋವರವನ್ನು ಹೊಕ್ಕನು.

೧೫. [ಪ್ರಕ್ಷಿಪ್ತವಾದ ಈ ಪದ್ಯದ ಪಾಠ ಕ್ಲಿಷ್ಟವಾಗಿದ್ದು, ಅರ್ಥ ಸಂದೇಹವಾದುದರಿಂದ ಅನುವಾದ ಮಾಡಲಾಗಿಲ್ಲ]

ವ॥ ಹೀಗೆ ಕುರುರಾಜನು ಮಧ್ಯಲೋಕ (ಭೂಲೋಕ)ದ ಒಡೆಯನಾಗಿದ್ದರೂ ಪಶ್ಚಿಮ ದಿಕ್‌ಪಾಲಕನಾದ ವರುಣನಂತೆ ಜಲನಿವಾಸಿಯಾಗಿ -

೧೬. ಪದ್ಮಾಸನಸ್ಥನಾಗಿ ರೇಚಕ ಪೂರಕ ಕುಂಭಕಕ್ರಿಯೆಗಳನ್ನು (ಉಸಿರನ್ನು ಮೂಗಿನಿಂದ ಹೊರದೂಡುವುದು, ಒಳಗೆಳೆದುಕೊಳ್ಳುವುದು, ಹಾಗು ಉಸಿರನ್ನು ತಡೆದು ನಿಲ್ಲಿಸುವುದು ಎಂಬ ಪ್ರಾಣಾಯಾಮದ ಮೂರು ಕ್ರಿಯೆಗಳನ್ನು) ಮಾಡುತ್ತ, ಮನಸ್ಸನ್ನು ನೆತ್ತಿಯಲ್ಲಿ ಕೇಂದ್ರೀಕರಿಸಿ, ಅರೆದೆರೆದ ದೃಷ್ಟಿಯನ್ನು ಮೂಗಿನ ತುದಿಯಲ್ಲಿ ನಿಲ್ಲಿಸಿ ಕೈಕಟ್ಟಿ ಮಂತ್ರಾಕ್ಷರಗಳನ್ನು ಜಪಿಸುತ್ತಾ ದುರ್ಯೋಧನನು ಯೋಗಿಯಂತಿದ್ದನು.

ವ॥ ಅಷ್ಟರಲ್ಲಿ ಶಲ್ಯವಧಾನಂತರ ದುರ್ಯೋಧನನನ್ನು ಎಲ್ಲೆಲ್ಲಿ ಹುಡುಕಿದರೂ

ನೆಲ್ಲಿಯುಮಱಿಸಿ ಕಾಣದೆ ಏನಾನುಮೊಂದು ಕಾರಣಮಾಗಲ್ವೇೞ್ಕುಮೆಂದು ಧರ್ಮನಂದನಂ ಗರುಡಧ್ವಜನೊಳಾಳೋಚಿಸಿದುದಂ ಕುರುಕುಳಾಂತಕಂ ಕೇಳ್ದು -

ತೊದಳಾಯ್ತೆನ್ನಯ ಪೂಣ್ಕೆ ಪೂಣ್ಕೆ ಸಭೆಯೊಳ್ ಪಾಂಚಾಲರಾಜಾತ್ಮಜಾ ।
ವದನಮ್ಲಾನತೆ ಮಾಣ್ದುದಿಲ್ಲ ಗಡ ಮದ್ದೋರ್ದಂಡಕಂಡೂತಿ ಮ ॥
ಟ್ಗಿದುದಿಲ್ಲಿನ್ನುಮೊಳಂ ಸುಯೋಧನನದರ್ಕೇಗೆಯ್ವೆನೆಂತಕ್ಕುಮೆಂ ।
ಬುದನಂದುತ್ಸುಕಚಿತ್ತನುಮ್ಮಳಿಸಿದಂ ಕೌರವ್ಯಕೋಳಾಹಳಂ ॥೧೭॥

ಅಂತುಮ್ಮಳಿಸಿ ಕುರುಕುಲಮಹೀಪಾಲನ ಬೃಹದೂರುಶೈಲದ್ವಂದ್ವಂಗಳಂ ತನ್ನ ಗದಾದಂಡವಜ್ರದಂಡದಿಂ ನುರ್ಗುನುಚಿಮಾಡಲುಂ ಆ ಕೌರವೇಶ್ವರನ ಬಾಹುಶಾಖೆಗಳಂ ತನ್ನ ಗದಾಕುಠಾರದಿಂ ತತ್ತರದಱಿಯಲುಂ ಆ ಪಿಂಗಾಕ್ಷನ ವಿಶಾಲವಕ್ಷಸ್ಥಳಮಂ ತನ್ನ ಗದಾಲಾಂಗಲದಿಂದಿರ್ಬಗಿಯಾಗಿ ಪೋೞ್ದು ಪರೆಪಲುಂ ಆ ಫಣಿರಾಜಕೇತನನ ವಿಕಟ ಲಲಾಟಶಿಲಾಪಟ್ಟಮಂ ತನ್ನ ಗದಾದಂಡದಿಂ ಚಿಪ್ಪುಚಿಪ್ಪಾರ್ದಿಡಲುಂ ಆ ದ್ರೌಪದೀದ್ರೋಹನ ಮಣಿಮಯಮಕುಟಮಂ ತನ್ನ ಗದಾಪ್ರಹರಣದಿಂದುರುಳ್ಚಿ ಪಾದಪ್ರಹಾರದಿಂ ಪುಡಿಯೊಳ್ ಪೊರಳ್ಚಲುಂ ಆ ಸುಯೋಧನನ ರುಧಿರಧಾರಾಪೂರದಿಂ ತನ್ನ ಧಗಧಗೀಯಮಾನ ವಿಸ್ಫುಲಿಂಗ ಕೋಪಪಾವಕಶಿಖಾಕಲಾಪಮನಾಱಿಸಲುಂ ಪಡೆಯದೆ ಕೋಪದಿಂ ಕಿಡಿಕಿಡಿವೋಗಿ ಭೀಮಸೇನಂ ಮೀಸೆಯಂ ಕಡಿದು -

ಕಾಣಲಾಗದೆ, ಇದಕ್ಕೇನೊ ಕಾರಣವಿರಬೇಕೆಂದು ಧರ್ಮರಾಜನು ಕೃಷ್ಣನೊಡನೆ ಆಲೋಚಿಸಿದನು. ಅದನ್ನು ಕೇಳಿ ಭೀಮನು -

೧೭. ಕೌರವರ ಸಭೆಯಲ್ಲಿ ನಾನು ಮಾಡಿದ ಪ್ರತಿಜ್ಞೆ ಹುಸಿಯಾಯಿತು, ದ್ರೌಪದಿಯ ಮುಖ ಕಂದಿರುವುದು ಇನ್ನೂ ತಪ್ಪಲಿಲ್ಲವಲ್ಲ ! ನನ್ನ ತೋಳ ತೀಟೆ ತೀರಲಿಲ್ಲವಲ್ಲ ! ಸುಯೋಧನನು ಇನ್ನೂ ಬದುಕಿರುವನು. ಅದಕ್ಕೆ ಏನು ಮಾಡಲಿ ? ನನ್ನ ಪ್ರತಿಜ್ಞೆ ಹೇಗೆ ಈಡೇರೀತು ? ಎಂದು ಉತ್ಸುಕತೆಯಿಂದ ಪರಿತಪಿಸಿದನು.

ವ॥ ಹೀಗೆ ಪರಿತಪಿಸಿ ಕುರುಕುಲರಾಜನ ತೋರವಾದ ತೊಡೆಗಳೆಂಬ ಬೆಟ್ಟಗಳನ್ನು ತನ್ನ ಗದೆಯಂಬ ವಜ್ರಾಯುಧದಿಂದ ನುಚ್ಚುನುರಿ ಮಾಡಲು, ಆತನ ತೋಳುಗಳೆಂಬ ಕೊಂಬೆಗಳನ್ನು ತನ್ನ ಗದೆಯೆಂಬ ಕೊಡಲಿಯಿಂದ ತುಂಡುತುಂಡಾಗಿ ಕತ್ತರಿಸಲು, ಅವನ ಅಗಲವಾದ ಎದೆಯನ್ನು ತನ್ನ ಗದೆಯೆಂಬ ನೇಗಲಿನಿಂದ ಎರಡು ಹೋಳಾಗಿ ಸೀಳಿ ಒಗೆಯಲು, ಸರ್ಪಧ್ವಜನಾದ ಆತನ ಹಣೆಯೆಂಬ ಹಾಸುಗಲ್ಲನ್ನು ತನ್ನ ಗದೆಯಿಂದ ಚಿಪ್ಪುಚಿಪ್ಪಾಗಿ ಒಡೆದು ಹಾಕಲು, ದ್ರೌಪದಿಗೆ ದ್ರೋಹ ಬಗೆದ ಆ ದುಷ್ಟನ ರತ್ನಕಿರೀಟವನ್ನು ಗದೆಯಿಂದ ಹೊಡೆದು ಉರುಳಿಸಿ, ಒದೆದು ಹುಡಿಯಲ್ಲಿ ಉರುಳಾಡಿಸಲು, ಆ ಸುಯೋಧನನ ನೆತ್ತರ ಧಾರೆಯಿಂದ ತನ್ನ ಧಗಧಗಿಸುವ ಕೋಪಾಗ್ನಿಯನ್ನು ನಂದಿಸಲು ಸಾಧ್ಯವಾಗದೆ ಕ್ರುದ್ಧನಾಗಿ ಕಿಡಿಕಾರುತ್ತ ಭೀಮಸೇನನು ಅವುಡುಗಚ್ಚಿ -

ಮೀಱಿದ ಪಗೆವನ ಪಟ್ಟಂ ।
[ಪಾ] ಱಿಸುವೆನೊ ಮುನ್ನಮಮರರುಂಡಮೃತಮನೇಂ ।
ಕಾಱಿಸುವೆನೊ ಖಚರರನಡ ।
ರ್ದೇಱಿಸುವೆನೊ ಮೇರುಗಿರಿಯ ತೂಱಿಲ ತುದಿಯಂ ॥೧೮॥

ಎತ್ತುವೆನೊ ಮಂದರಾದ್ರಿಯ ।
ನೊತ್ತುವೆನೊ ರಸಾತಳಕ್ಕೆ ನೆಲನಂ ದೆಸೆಯಂ ॥
ಪತ್ತುವೆನೊ ಪಗೆಯ ಬೆನ್ನಂ ।
ಪತ್ತುವೆನೊ ದಿಶಾಗಜಂಗಳಂ ತುತ್ತುವೆನೋ ॥೧೯॥

ದಾಂಟುವೆನೊ ಕುಲನಗಂಗಳ ।
ನೀಂಟುವೆನೊ ಚತುಸ್ಸಮುದ್ರಮಂ ರವಿಶಶಿಯಂ ॥
ಮೀಂಟುವೆನೊ ಗಗನತಳ[ದಿಂ]
ಗಂಟಲನೊತ್ತುವೆನೊ ಸಕಲದಿಕ್ಪಾಲಕರಂ ॥೨೦॥

ಅಂತು ಕುರುಕುಲಕೃತಾಂತಕನಂತಕನಂತೆ ಮಾಮುಸಕಂ ಮುಸಗಿ ಪ್ರಳಯ ಕಲ್ಪಸಂಕಲ್ಪಂಗೆಯ್ದು -

ರಸೆಗಿಟಿದನೊ ಮೇಣ್ ನಾಲ್ಕುಂ ।
ದೆಸೆಗಳ ಕೋಣೆಗಳೊಳುಟಿದನೋ ಖಳನಿಲ್ಲೀ ॥
ವಸುಮತಿಯೊಳ್ ಗಾಂಧಾರಿಯ ।
ಬಸಿಱಿಂ ಮೇಣ್ ಮಗುಟಿ ಪೋಗಿ ಪೊಕ್ಕಿರ್ದಪನೊ ॥೨೧॥

೧೮. ಉದ್ಧಟ ಶತ್ರುವನ್ನು ಪಟ್ಟನೆ ಹಾರಿಸುವೆನೊ? ಮೊದಲು ದೇವತೆಗಳು ಉಂಡ ಅಮೃತವನ್ನು ಕಕ್ಕಿಸುವೆನೊ? ದೇವೆತಗಳನ್ನು ಆಕ್ರಮಿಸಿ ಮೇರುಪರ್ವತದ ತುತ್ತತುದಿಗೆ ಓಡಿಸುವೆನೊ?

೧೯. ಮಂದರಗಿರಿಯನ್ನೆ ಎತ್ತಿ ಬಿಡುವೆನೊ? ಈ ಭೂಮಿಯನ್ನು ಪಾತಾಳಕ್ಕೆ ಒತ್ತಿಬಿಡುವೆನೊ? ಶತ್ರುವಿನ ಬೆನ್ನು ಹತ್ತುವೆನೊ? ದಿಗ್ಗಜಗಳನ್ನು ನುಂಗುವೆನೊ?

೨೦. ಕುಲಪರ್ವತಗಳನ್ನು ದಾಟುವೆನೊ? ನಾಲ್ಕು ಸಮುದ್ರಗಳನ್ನು ಕುಡಿದುಬಿಡುವೆನೊ! ಸೂರ್ಯಚಂದ್ರರನ್ನು ಆಕಾಶದಿಂದ ಮೀಟುವೆನೊ! ಎಲ್ಲಾ ದಿಕ್ಪಾಲಕರ ಗಂಟಲು ಹಿಸುಕುವೆನೊ?

ವ॥ ಎಂದು ಕುರುಕುಲಯಮನಾದ ಭೀಮನು ಯಮರಾಜನಂತೆ ಅತ್ಯಂತ ಕ್ರುದ್ಧನಾಗಿ ಪ್ರಳಯವನ್ನೇ ಉಂಟುಮಾಡಲು ನಿರ್ಧರಿಸಿ -

೨೧. ಆ ನೀಚನೇನು ಪಾತಾಳಕ್ಕೆ ಇಳಿದು ಹೋದನೊ? ಚತುರ್ದಿಕ್ಕುಗಳ ಮೂಲೆಯಲ್ಲಿ ಎಲ್ಲಾದರೂ ಅಡಗಿದನೋ? ಭೂಮಿಯ ಮೇಲೆಲ್ಲಿಯೂ ಅವನಿಲ್ಲ. ಮರಳಿ ಗಾಂಧಾರಿಯ ಬಸಿರಲ್ಲಿ ಹೊಕ್ಕು ಬದುಕಿಕೊಂಡಿರುವನೊ?

ಭುವನಂಗಳ್ ಪದಿನಾಲ್ಕು ನಾಲ್ಕು ಪೆಸರಿಂ ವಾರಾಶಿಗಳ್ ಪತ್ತು ದಿ ।
ಗ್ವಿವರಂ ನೋೞ್ಪೊಡಜಾಂಡಮೊಂದೆ ಪೆಱತಿಂಬಿನ್ನಿಲ್ಲಮಿನ್ನೆತ್ತಲೋ ॥
ಡುವನಾರಂ ಕೆಳೆಗೊಳ್ವನಾರ ಮಱಿಯಂ ಪೊಕ್ಕಿರ್ಪನೆಲ್ಲಿರ್ಪನಿ ।
ನ್ನಿವಱಿಂದಂ ಪೊಱಗೆಲ್ಲಿ ಪೊಕ್ಕು ಬರ್ದುಕಲ್ಕಕ್ಕುಂ ಭುಜಂಗಧ್ವಜಂ ॥೨೨॥

ಚರಮಚರಮೆಂಬ ಜಗದಂ ।
ತರದೊಳ್ ಖಳನೆಲ್ಲಿ ಪೊಕ್ಕೊಡಂ ತದ್ಭುಜಪಂ ॥
ಜರದೊಳ್ ಪೊಕ್ಕೊಡೆ ಹರಿಹರ ।
ಹಿರಣ್ಯಗರ್ಭರ್ಕಳಾಂತೊಡಂ ಕೊಲ್ಲದಿರೆಂ ॥೨೩॥

ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ ತಾತ ಮಾ ।
ರುತ ಕೇಳ್ ಮಾರುತಮಾರ್ಗ ಕೇಳ್ ಪಗೆವನಂ ಕೊಂದೆನ್ನ ಕೋಪಾಗ್ನಿಗಾ ।
ಹುತಿಮಾೞ್ಪೆಂ ಕೊಲಲಾಱದಂದು ತಱಿಸಂದಾನೆನ್ನ ಸಂದಗ್ನಿಗಾ ॥
ಹುತಿಮಾೞ್ಪೆಂ ಗಡಮೆಂದು ಪೂಣ್ದೊದಱಿದಂ ಕೌರವ್ಯಕೋಳಾಹಳಂ ॥೨೪॥

ಅಂತು ಪಂಚಭೂತಸಾಕ್ಷಿಯೊಳೆ ಪೂಣ್ದು ನಡೆದು ಅಜಾತಶತ್ರುಗೆ ಕುರುಕುಲ ಪ್ರಳಯನೆನಿಸಿದ ಸಾಹಸಭೀಮಂ ಸಾಷ್ಟಾಂಗಪ್ರಣಾಮಂಗೆಯ್ದು -

೨೨. ಲೋಕಗಳು ಹದಿನಾಲ್ಕು, ಸಾಗರಗಳು ನಾಲ್ಕು, ದಿಕ್ಕುಗಳು ಹತ್ತು, ಬ್ರಹ್ಮಾಂಡವೆಂಬುದು ಒಂದೇ. ಇವುಗಳನ್ನು ಬಿಟ್ಟು ಬೇರೆ ಸ್ಥಳವಂತೂ ಇಲ್ಲ. ದುರ್ಯೋಧನನು ಇನ್ನೆತ್ತ ಓಡುವನು? ಯಾರ ಸ್ನೇಹವನ್ನು ಗಳಿಸುವನು? ಯಾರ ಆಶ್ರಯ ಪಡೆದುಕೊಂಡಿರುವನು? ಎಲ್ಲಿರುವನು ಅವನು? ಈ ಸ್ಥಳಗಳನ್ನು ಬಿಟ್ಟು ಬೇರೆ ಎಲ್ಲಿ ಹೊಕ್ಕು ಅವನು ಬದುಕಲು ಸಾಧ್ಯ?

೨೩. ಈ ಚರಾಚರ ಜಗತ್ತಿನೊಳಗೆ ಎಲ್ಲಿಯೆ ಹೊಕ್ಕಿರಲಿ, ಬ್ರಹ್ಮ ವಿಷ್ಣು ಮಹೇಶ್ವರರು ಮರೆಯಲ್ಲಿ ಇಟ್ಟುಕೊಂಡರೂ ಕೂಡ ಆ ನೀಚನನ್ನು ಕೊಲ್ಲದೆ ಬಿಡೆನು.

೨೪. ನಾಲ್ಕು ಸಾಗರಗಳು ಸೀಮೆಯಾದ ಭೂದೇವಿಯೆ ಕೇಳು, ಸಮುದ್ರವೆ ಕೇಳು,ಅಗ್ನಿಯೆ ಕೇಳು,ತಂದೆ ವಾಯುದೇವನೆ ಕೇಳು, ಆಕಾಶವೆ ಕೇಳು, ವೈರಿಯನ್ನು ಕೊಂದು ನನ್ನ ಕೋಪಾಗ್ನಿಗೆ ಬಲಿಕೊಡುವೆನು. ಕೊಲ್ಲಲಾಗದಿದ್ದರೆ ನಿಶ್ಚಯವಾಗಿಯೂ ನಾನು ಅಗ್ನಿಗೆ ಆಹುತಿಯಾಗುವೆನು" ಎಂದ ಭೀಮನು ಪ್ರತಿಜ್ಞೆ ಮಾಡಿ ಗರ್ಜಿಸಿದನು.

ವ॥ ಹೀಗೆ ಪಂಚಭೂತಗಳನ್ನು ಸಾಕ್ಷಿಯಾಗಿಟ್ಟುಕೊಂಡು ಪ್ರತಿಜ್ಞೆ ಮಾಡಿ ಬಂದು ಭೀಮಸೇನನು ಧರ್ಮರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ -

ಎನಿತುಂ ದ್ರೌಪದಿ ಮುಕ್ತಕೇಶಿ ನಮೆವಳ್ ತದ್ದುಃಖಮಂ ಕಂಡುಕ ।
ಡೆನಿತುಂ ಸೈರಿಪೆವಾನುಮೆನ್ನನುಜರುಂ ಪಾಂಚಾಲಿಯಂ ನೋಡಿ ನೀಂ ॥
ಮನದೊಳ್ ನೋವುದುಮಿಲ್ಲ ನಿಷ್ಕರುಣೆಯಯ್ ನೀನಿಂತಿರಾನನ್ನೆಗಂ ।
ಮುನಿಸಂ ತೀರ್ಚೆ ನರೇಂದ್ರವೈರಿತರುವಂ ನಿರ್ಮೂಲನಂ ಮಾಡುವೆಂ ॥೨೫॥

ಆನುಂ ವಿಧೇಯನಲ್ಲಂ ।
ನೀನುಂ ಗುರುವಲ್ಲಮಿಂದಿನೊಂದೆವಸಂ ಧಾ ॥
ತ್ರೀನಾಥ ಪರಿಯ ಬಿಡ ಕುರು ।
ಸೂನುವನಾನಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ ॥೨೬॥

ಮುಂದಲೆಯಂ ಪಿಡಿದೆನ್ನಯ ।
ಮುಂದೆಳೆದನಲಜೆಯನಂದು ಪರಿಭವಿಸಿಯೆ ದ ॥
ರ್ಪೆಂದುರಿದು ಸೊರ್ಕಿದವನಂ ।
ಕೊಂದೆಂ ಕುರುಪತಿಯನಿಂ ಕೊಲಲ್ ತಡೆದಪೆನೇ ॥೨೭॥

ಎಂದು ಕುರುಕುಲಾಂತಕಂ ಕುರುಕುಳವಿಳಯಕೇತುದಂಡಭೀಕರ ಕ್ರೋಧ ಬದ್ಧಾನುಕಾರಿತಮುಖನುಂ ಗಾಂಧಾರಿನಂದನಸಂಹರಣೋನ್ಮೀಲಿತ ಕರಾಳ ದಂತದಂಷ್ಟ್ರೋಷ್ಠ ವಿಕಟಬದ್ಧಭ್ರುಕುಟಭಂಗಭೀಷಣಲಲಾಟಚ್ಛಟನುಂ ಕುರುವಂಶದಿಶಾಪಟ್ಟನುಂ ಸಂಧ್ಯಾರಾಗ ಸನ್ನಿಕಾಶದುರ್ನಿರೀಕ್ಷ್ಯಕಟಾಕ್ಷವಿಕ್ಷೇಪಲಕ್ಷಿತನುಂ ಪಿಂಗಾಕ್ಷಮಾರಣಕಾರಣನುಂ ಉತ್ಪನ್ನ ಮಹೋತ್ಸವಚಲಾಯಮಾನಸ್ಫುರದಂಘ್ರಿಯುಗ್ಮನುಂ ಕುರುಕುಲಪ್ರಳಯಜಲಧರ

೨೫. (ಪ್ರತಿಜ್ಞೆ ನೆರವೇರದಿರುವುದರಿಂದ) ದ್ರೌಪದಿ ಮುಡಿಯನ್ನು ಕಟ್ಟಿಕೊಳ್ಳದೆ ಎಷ್ಟೊಂದು ಕೊರಗುತ್ತಿರುವಳು! ಆ ದುಃಖವನ್ನು ನೋಡಿ ನಾನೂ ನನ್ನ ತಮ್ಮಂದಿರೂ ಎಷ್ಟೆಂದು ಸಹಿಸಬಲ್ಲೆವು? ದ್ರೌಪದಿಯನ್ನು ಕಂಡು ನೀನು ಮನಸ್ಸಿನಲ್ಲಿ ಕೂಡ ನೊಂದು ಕೊಳ್ಳುವುದಿಲ್ಲ. ನೀನು ನಿರ್ದಯನಾಗಿರುವೆ. ನೀನು ಹೀಗೇ ಇರು. ನಾನು ನನ್ನ ಕೋಪವನ್ನು ತೀರಿಸಿಕೊಳ್ಳಲು ಶತ್ರುವೆಂಬ ಮರವನ್ನು ಬೇರುಸಹಿತವಾಗಿ ಕಿತ್ತೊಗೆಯುವೆನು.

೨೬. ಇದೊಂದು ದಿನದ ಮಟ್ಟಿಗೆ ನಾನು ನಿನಗೆ ಆಜ್ಞಾನುವರ್ತಿಯಲ್ಲ ; ನನಗೆ ನೀನು ಹಿರಿಯನೂ ಅಲ್ಲ. ರಾಜಾ, ನನ್ನನ್ನು ಮುನ್ನುಗ್ಗಗೊಡು. ಕೌರವನನ್ನು ಹೊಡೆದು ಕೆಡಹಿ ಹಿಸುಕಿಹಾಕುವೆನು.

೨೭. ನನ್ನ ಕಣ್ಣೆದುರಲ್ಲಿಯೆ ದ್ರೌಪದಿಯ ಮುಂದಲೆ ಹಿಡಿದೆಳೆದು ಅವಮಾನ ಗೊಳಿಸಿ ಉರವಣೆಯಿಂದ ಸೊಕ್ಕಿದವನನ್ನು ಕೊಂದುಹಾಕಿದೆನು. ಇನ್ನು ಕೌರವಮುಖ್ಯನನ್ನು (ದುರ್ಯೋಧನನನ್ನು) ಕೊಲ್ಲಲು ತಡಮಾಡುವೆನೆ?

ವ॥ ಹೀಗೆಂದು ಕುರುಕುಲನಾಶಕನಾದ, ಭೀಮನು ಗಾಂಧಾರಿಪುತ್ರನ ಸಂಹಾರಕ್ಕಾಗಿ ಕ್ರೂರವಾಗಿ ಅವುಡುಗಚ್ಚಿ, ಹುಬ್ಬುಗಂಟಿಕ್ಕಿ, ಸಂಜೆಯ ಕೆಂಪಿನಂತೆ ಕಣ್ಣು ಕಡುಗೆಂಪಾಗಿ, ದುರ್ಯೋಧನವಧೆಗಾಗಿ, ಅತಿಯಾದ ಉತ್ಸಾಹದಿಂದ ಕಾಲುಗಳು ಮುನ್ನುಗ್ಗುತ್ತಿರಲಾಗಿ, ಕುರುವಂಶಪ್ರಳಯಕ್ಕಾಗಿ ಬಂದ ಮೇಘದ ಗರ್ಜನೆಯಂತೆ ಘೋರವಾಗಿ ಸಿಂಹನಾದದಿಂದ ಪ್ರತಿಜ್ಞೆ ಮಾಡಿ ದಿಕ್ಕುದಿಕ್ಕುಗಳನ್ನೆಲ್ಲ ಅದಿರಿಸುತ್ತ, ದುರ್ಯೋಧನನನ್ನು ಹುಡುಕಿ

ನಿನಾದಗಂಭೀರೋದ್ದಾಮ ಸಿಂಹನಾದಪ್ರತಿಮಪ್ರತಿಜ್ಞಾಪ್ರಚಲಿತನಿಖಿಲದಿಕ್ಚಕ್ರವಾಳನುಂ ಸುಯೋ ಧನಾನುಜರುಧಿರೋದ್ಗಾರಿನಿಶ್ಶೇಷನುಮಾಗಿ ದುರ್ಯೋಧನವಿಶೇಷಾನ್ವೇಷಣಾರ್ಥಂ ಮಾಮುಸಕಂ ಮಸಗಿ ಕುರುಕುಲಪ್ರಳಯಕಾಲದಂಡಮೆನಿಪ ನಿಜವಿಜಯಗದಾದಂಡಮನೆತ್ತಿ ಕೊಂಡು -

ಕುರುಕುಲಕದಳೀಕಾನನ ।
ಕರಿಕಳಭಂ ಶತ್ರುಶಲಭಸಂಪಾತನವಿ ।
ಸ್ಫುರಿತಪ್ರದೀಪನಾ ಕುರು ।
ಧರೆಯೊಳ್ ಕುರುಪತಿಯನರಸಿದಂ ಪವನಸುತಂ ॥೨೮॥

ಗುರು ಲಕ್ಷ್ಯಸಿದ್ಧಿಯಿಲ್ಲೆನೆ ।
ಪರಿವಂಬಂ ಪರಿದು ಪಿಡಿದು ತರ್ಪಂತಿರೆ ಮಾ ॥
ಣ್ದಿರದೆ ಮರುಜ್ಜವದಿಂದಂ ।
ಮರುತ್ಸುತಂ ಪರಿದನಾಗಳಿದಿರುಂ ಬಱಿಯುಂ ॥೨೯॥

ಅಂತಿದಿರುಂ ಬಱಿಯುಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ [ತಿಡ್ಡಮುಂ] ಪರಿದು ಕುರುಕ್ಷೇತ್ರದೊಳ್ ವಜ್ರಪ್ರಹರಣದಿನೆಱಂಕೆವೆರಸು ಕೆಡೆದ ಪರ್ವತಂಗಳಂತೆ ಲೋಹವಕ್ಕರಿಕೆಗಳ್ವೆರಸು ಕೋಡನೂಱಿ ಪಾಡಟೆದು ಪರಕಲಿಸಿ ಕೆಡೆದ ಮದಾಂಧ ಗಂಧಸಿಂಧುರಂಗಳಡಿಯೊಳಡಂಗಿದನೆಗೆತ್ತು ಕೈಗುತ್ತಿ ನೋಡಿಯುಂ ತನ್ನ ಭೀಕರಗದಾಘಾತ ದೊಳಂ ಜಾಱಿ ಪಱಿವಱಿದು ತೂಱುಪಾಱಾದ ಕಾಂಭೋಜಾವಳಿಗಳ ತುರುಷ್ಕತುರಂಗಮಂಗಳಡಿಯೊಳಡಂಗಿದನೆಗೆತ್ತು ಬಳಸಿ ಬಲವಂದು ನೋಡಿಯುಂ ತನ್ನ ನಿಶಿತ ನಾರಾಚಪರಂಪರಾಭಿಘಾತದೊಳ್ ತಗ್ಗಲುಂ ಮುಂದೆ ಕೆಡೆದಿರ್ದ ತೇರ ಪಲಗೆಗಳೊಳ್

ಕಾಣುವುದಕ್ಕಾಗಿ ಅತಿಶಯವಾಗಿ ಆವೇಶಗೊಂಡು ಕುರುವಂಶಕ್ಕೆ ಯಮದಂಡವೆನಿಸಿದ ತನ್ನ ಗದೆಯನ್ನು ಎತ್ತಿಕೊಂಡು -

೨೮. ಕುರುವಂಶವೆಂಬ ಬಾಳೆಯ ವನಕ್ಕೆ ಆನೆಯಾದವನೂ ಶತ್ರುಗಳೆಂಬ ಪತಂಗಗಳು (ಆಹುತಿಯಾಗಿ) ಬಿದ್ದಂತೆಲ್ಲ ಪುಟಿದೇಳುವ ದೀಪದಂತಿರುವವನೂ ಆದ ಭೀಮನು ಕುರುಕ್ಷೇತ್ರದಲ್ಲಿ ಕುರುರಾಜನನ್ನು ಹುಡುಕಾಡಿದನು.

೨೯. (ವಿದ್ಯಾಭ್ಯಾಸ ಕಾಲದಲ್ಲಿ) ಗುರುಗಳು ನಿನ್ನ ಗುರಿ ತಪ್ಪಿತೆಂದು ನುಡಿದೊಡನೆ, ತಾನು ಬಿಟ್ಟ ಬಾಣದ ಹಿಂದೆಯೆ ಓಡಿಹೋಗಿ ಅದನ್ನು ಹಿಡಿದು ಮರಳಿ ತಂದಿದ್ದ ಭೀಮನು ಅದೇ ರೀತಿ ಈಗ ವಾಯುವೇಗದಿಂದ ಅತ್ತ ಇತ್ತ ಹರಿದಾಡಿದನು.

ವ॥ ಹಾಗೆ ಹಾಸು ಹೊಕ್ಕಾಗಿ, ಆಚೆ, ಈಚೆ, ಅಡ್ಡ, ತಿಡ್ಡ, ಹಿಂದೆ, ಮುಂದೆ ಎರೆಡೆರಡು ಸಲ ಮೂರು ಮೂರು ಸಲ ಹರಿದಾಡಿದನು. ಕುರುಕ್ಷೇತ್ರದಲ್ಲಿ ವಜ್ರಾಯುಧದ ಪ್ರಹಾರದಿಂದ ರೆಕ್ಕೆಸಹಿತವಾಗಿ ಮುರಿದು ಬಿದ್ದ ಪರ್ವತಗಳಂತೆ ಲೋಹದ ಮೈಗವಚ ಸಹಿತವಾಗಿ ಕೋರೆ ಊರಿಕೊಂಡು ಚೆಲ್ಲಾಪಿಲ್ಲಿಯಾಗಿ ಬಿದ್ದ ಮತ್ತಗಂಧಗಜಗಳ ಕೆಳಗೇನಾದರೂ (ದುರ್ಯೋಧನನು) ಅಡಗಿರುವನೊ ಏನೊ ಎಂದು ಭಾವಿಸಿ ಕೈಯಿಂದ ತಿವಿತಿವಿದು ನೋಡಿದನು ; ತನ್ನ ಭಯಂಕರವಾದ ಗದಾಪ್ರಹಾರದಿಂದ ನೊಗಹರಿದುಕೊಂಡು

**ಮೆಯ್ಯಗ್ಗೆರೆದನೆಗೆತ್ತು ಬೆದಂಕಿ ನೋಡಿಯುಂ ತನ್ನ ನಿಷ್ಠುರಚರಣಸಂಘಟ್ಟದೊಳಂ ಪಡಲ್ವಟ್ಟ ವೀರಭಟರ್ಕಳ ಮಕುಟಂಗಳೊಳ್ ತಲೆಗರೆದನೆಗೆತ್ತು ಸೋದಿಸಿ ನೋಡಿಯುಂ ನೆತ್ತರ ತೊಱೆಗಳೊಳೆ ಕಾಲ್ಗುತ್ತಿ ನೋಡಿಯುಂ ನೆಣನ ಬಣಂಬೆಗಳೊಳಗೆ ಕೈದುಗುತ್ತಿ ನೋಡಿಯುಂ ಅಡಗಿನ ಗಿಡಿವಿನೊಳ್ ಸುೞಿದು ನೋಡಿಯುಂ ನರವಿನ ನೆರವಿಯೊಳ್ ತೊೞಲ್ದು ನೋಡಿಯುಂ ಮೂಳೆಯ ಮೊರಡಿಗಳನೇಱೆ ನೋಡಿಯುಂ ಮಿದುಳ ಕೋೞ್ಗೆಸಱೊಳ್ ಪೊಕ್ಕು ಕರುಳ ಮೆದೆಯಂ ಪಿಕ್ಕಿ ಪರಪಿ ನೋಡಿಯುಂ ಪಲ್ಗಳ ಬಣಂಬೆಗಳೊಳ್ ಪರವಸಂಗೊಂಡು ಮೆಟ್ಟಿಯುಂ ಅಟ್ಟೆಯ ಬೆಟ್ಟಘಟ್ಟದಿಟ್ಟೆಡೆಗಳೊಳ್ ನಿಟ್ಟಿಸಿಯುಂ ವೈಯಾಕರಣನಂತೆ ಶಬ್ದಮನಾಲಿಸಿಯುಂ ಬೇಂಟೆಕಾರನಂತೆ ಅಡಿವಜ್ಜೆಯನಱಸಿಯುಂ ಗರುಡನಂತೆ ಹಾವಿನ ಹೞವಿಗೆಯನಾರಯ್ದು ನೋಡಿಯುಂ ವೈದ್ಯನಂತಹಿತಗದಾನ್ವೇಷಣಂಗೆಯ್ದು ನೋಡಿಯುಂ ಮುನ್ನಂ ಪರಶುರಾಮನೀ ನೆಲದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದು ಸೂೞ್ವರೆಗಂ ಪಿಳ್ಳೆಪೆಸರಿಲ್ಲದಂತು ಕೊಂದವಂದಿರ ನೊರೆನೆತ್ತರೊಳ್ ತೀವಿ ತನ್ನ ತಾಯ್ಗೆ ನೀರಿಳಿಯಲುಂ ತಂದೆಗೆ ನೀರ್ಗುಡಲುಮೆಂದು ಮಾಡಿದ ಸ್ಯಮಂತಕಪಂಚಕಂಗಳೆಂಬ ಪೆಸರ ಪೆರ್ಮಡುಗಳೊಳಗೆ ಮೂಡಿ ಮುೞ್ಕಾಡಿ ನೋಡಿಯುಂ ನಾಲ್ವತ್ತೆಣ್ಗಾವುದಪರಿಪ್ರಮಾಣ ಕುರುಕ್ಷೇತ್ರದೊಳೆಲ್ಲಿಯುಂ ದುರ್ಯೋಧನನಂ ಅಱಸಿ ಕಾಣದೆ ವಿಸ್ಮಯಂಬಟ್ಟವನ ಬಟ್ಟ ಬೇಡಿಂಗೆ ನಿಟ್ಟುರಿಗೊಂಡು –**

ತುಂಡುತುಂಡಾಗಿ ಬಿದ್ದ ಕಾಂಭೋಜಿ ಕುದುರೆಗಳ, ತುರುಷ್ಕ ಕುದುರೆಗಳ ಕೆಳಗೆ ಅಡಗಿರುವನೆಂದು ಭ್ರಮಿಸಿ ಸುತ್ತಲೂ ತಿರುಗಿ ನೋಡಿದನು ; ತನ್ನ ಹರಿತವಾದ ಬಾಣಗಳ ಹೊಡೆತಕ್ಕೆ ಈಡಾಗಿ ಮುಂದೆ ಕುಸಿದು ಮುರಿದು ಬಿದ್ದ ರಥಗಳ ಹಲಗೆಗಳಲ್ಲೇನಾದರೂ ಅವಿತುಕೊಂಡಿರಬಹುದೆಂದು ಅವುಗಳನ್ನೆಲ್ಲ ಕೆದರಿ ನೋಡಿದನು ; ತನ್ನ ಕಠೋರವಾದ ಒದೆತಗಳಿಂದ ಅಸ್ತವ್ಯಸ್ತವಾಗಿ ಬಿದ್ದಿರುವ ವೀರಸೈನಿಕರ ಕಿರೀಟಗಳ ರಾಶಿಯಲ್ಲಿ ತಲೆ ಮರಸಿಕೊಂಡಿರುವನೆಂದು ಸಂದೇಹಿಸಿ ಅವುಗಳನ್ನೆಲ್ಲ ಕಿತ್ತು ಪರೀಕ್ಷಿಸಿ ನೋಡಿದನು; ರಕ್ತದ ಪ್ರವಾಹಗಳಲ್ಲಿ ಕಾಲಾಡಿಸಿ ನೋಡಿದನು ; ನೆಣದ ಬಣವೆಗಳಲ್ಲಿ ಕೈಯಿಂದ ತಿವಿತಿವಿದು ನೋಡಿದನು; ಮಾಸಂದ ರಾಶಿಗಳಲ್ಲಿ ಸುಳಿದಾಡಿ ನೋಡಿದನು ; ನರಗಳ ಸಮೂಹದಲ್ಲಿ ಹೊಕ್ಕು ನೋಡಿದನು ; ಮೂಳೆಯ ದಿಣ್ಣೆಗಳನ್ನು ಏರಿ ನೋಡಿದನು ; ಮಿದುಳುಗಳ ದಟ್ಟವಾದ ಕೆಸರಿನಲ್ಲಿ ಹೊಕ್ಕು, ಕರುಳುಗಳ ಮೆದೆಯನ್ನು ಬಿಡಿಬಿಡಿಸಿ ಹರವಿ ನೋಡಿದನು ; ಹಲ್ಲುಗಳ ಬಣವೆಗಳನ್ನು ರಭಸದಿಂದ ಮೆಟ್ಟಿ ನೋಡಿ, ಅಟ್ಟೆಗಳ (ರುಂಡವಿಲ್ಲದ ದೇಹಗಳ) ಬೆಟ್ಟ ಸಾಲುಗಳ ಸಂದುಸಂದುಗಳಲ್ಲಿ ಕಣ್ಣಿಟ್ಟು ಪರೀಕ್ಷಿಸಿದನು; ವೈಯಾಕರಣನಂತೆ ಶಬ್ದ (೧. ಅಕ್ಷರಗಳಿಂದಾದ ಪದ. ೨. ಸೊಪ್ಪುಳು, ಧ್ವನಿ) ವನ್ನು ಕಿವಿಗೊಟ್ಟು ಆಲಿಸಿ, ಬೇಟೆಗಾರನಂತೆ ಹೆಜ್ಜೆ ಗುರುತುಗಳನ್ನು ಹುಡುಕುತ್ತ, ಗರುಡನಂತೆ ಸರ್ಪಧ್ವಜವನ್ನು ಕಾಣಲು ಹುಡುಕಾಡಿ ನೋಡಿ, ವೈದ್ಯನಂತೆ “ಅಹಿತ ಗದಾನ್ವೇಷಣ” ಮಾಡಿ (೧. ಅಹಿತಕಾರಿಯಾದ ರೋಗವನ್ನು ಕಂಡುಹಿಡಿಯಲು ಪ್ರಯತ್ನಿಸಿ. ೨. ವೈರಿಯ ಗದೆಗಾಗಿ ಹುಡುಕಾಡಿ) ನೋಡಿದನು ; ಪೂರ್ವಕಾಲದಲ್ಲಿ ಪರಶುರಾಮನು ಭೂಮಿಯ ಮೇಲಿರುವ ಕ್ಷತ್ರಿಯರಾಜರನ್ನೆಲ್ಲ ಒಂದು ಪಿಳ್ಳೆ ಕೂಡ ಉಳಿಯದಂತೆ ಇಪ್ಪತ್ತೊಂದು ಬಾರಿ ಸುತ್ತಾಡಿ ಕೊಂದು ಅವರ ನೊರೆಸಹಿತವಾದ ರಕ್ತದಿಂದ ತುಂಬಿದ ಐದು ಕೊಳಗಳನ್ನು ತನ್ನ ತಾಯಿಗೆ ಸೂತಕಸ್ನಾನ ಮಾಡಲೂ ತಂದೆಗೆ ತರ್ಪಣ ಬಿಡಲೂ ನಿರ್ಮಿಸಿದ್ದನು ;

ಜತುಗೃಹದೊಳ್ ಸುಡಲ್ ಬಗೆದನೆಲ್ಲಿದನಿಕ್ಕಿ ವಿಷಾನ್ನಮಂ ಮರು ।
ತ್ಸುತನನುಪಾಯದಿಂ ಕೊಲಲೊಡರ್ಚಿದನೆಲ್ಲಿದನಾ ದುರೋದರ ।
ವ್ಯತಿಕರದೊಳ್ ಪರಾಭವಿಸಿ ಕೃಷ್ಣೆಯನುಯ್ದಪರಾಧಿಯೆಲ್ಲಿದಂ ।
ಕೃತಕಸಭಾಪ್ರವೇಶಕರನೆಲ್ಲಿದನೆಲ್ಲಿದನೋ ಸುಯೋಧನಂ ॥೩೦॥

ಧೃತರಾಷ್ಟ್ರಾಪತ್ಯನಬ್ಜಪ್ರಿಯಸುತಸಖನೇಕಾದಶಾಕ್ಷೋಹಿಣೀಶಂ ।
ಕೃತಕದ್ಯೂತಸ್ವನಾಥೀಕೃತಯಮಸುತಭೀಮಾರ್ಜುನಂ ದ್ರೋಣ ಭೀಷ್ಮೋ ॥
ಚಿತವಾಕ್ಯದ್ವೇಷಿ ಕೃಷ್ಣಾಂಬರಕಬರಹರಂ ಶೋಕತೀವ್ರಾಗ್ನಿದಗ್ಧಂ ।
ಸುತಶೋಕಾಕ್ರಾಂತನೆಲ್ಲಿರ್ದನೊ ನೃಪತಿಲಕಂ ನಿಮ್ಮ ರಾಜಾಧಿರಾಜಂ ॥೩೧॥

ಭರತಕುಲೇಂದುಕಲಂಕಂ ।
ಭರತಾನ್ವಯ ರಾಜಭವನರಾಜಕಪೋತಂ ॥
ಕುರುಕೇತುವೆಲ್ಲಿದಂ ತ ।
ತ್ಕುರುಕುಲಲಯಕೇತು ಭೀಮಸೇನಂ ಬಂದಂ ॥೩೨॥

ಎಂದು ಶಿಬಿರರಕ್ಷಕರ ಗರ್ಭಮುಂ ಶಿಬಿರನಿತಂಬಿನಿಯರ ಗರ್ಭಮುಂ ಒಡನೊಡನೆ ಗಳಿಯಿಸೆ ಸಿಂಹಗರ್ಜನೆಯಿಂ ಗರ್ಜಿಸಿ ಕುರುರಾಜ ದ್ವಾರೋಪಾಂತಮನೆಯ್ದಿವಂದಾಗಳ್ -

ಸ್ಯಮಂತಕ ಪಂಚಕವೆಂದು ಹೆಸರಾದ ಆ ಐದೂ ದೊಡ್ಡ ಕೊಳಗಳ ಮಡುವಿನಲ್ಲಿ ಭೀಮನು ಮುಳುಮುಳುಗಿ ಹುಡುಕಿ ನೋಡಿದನು ; ಹೀಗೆ ನಾಲ್ವತ್ತೆಂಟು ಗಾವುದ ಸುತ್ತಳತೆಯುಳ್ಳ ಕುರುಕ್ಷೇತ್ರದಲ್ಲಿ ಎಲ್ಲಿಯೂ ದುರ್ಯೋಧನನನ್ನು ಕಂಡುಹಿಡಿಯಲಾಗದೆ, ವಿಸ್ಮಿತನಾಗಿ ಆತನು ವಾಸಿಸುವ ಪಾಳೆಯಕ್ಕೇ ಗುರಿಯಿಟ್ಟು ನಡೆದು-

೩೦. ಅರಗಿನ ಮನೆಯಲ್ಲಿ (ನಮ್ಮನ್ನು) ಸುಡಲು ಯೋಚಿಸಿದವನು ಎಲ್ಲಿ? ವಿಷವುಣಿಸಿ ಭೀಮನನ್ನು ಮೋಸದಿಂದ ಕೊಲ್ಲಲು ಹವಣಿಸಿದವನು ಎಲ್ಲಿ? ಆ ದ್ಯೂತ ಪ್ರಸಂಗದಲ್ಲಿ ನಮ್ಮನ್ನು ಸೋಲಿಸಿ, ದ್ರೌಪದಿಯನ್ನು ಎಳೆದೊಯ್ದ ಅಪರಾಧಿ ಎಲ್ಲಿರುವನು? ಸಭೆಗೆ ಬನ್ನಿಯೆಂದು ಮೋಸಮಾಡಿದ ಸುಯೋಧನನು ಎಲ್ಲಿರುವನೊ?

೩೧. ಧೃತರಾಷ್ಟ್ರನ ಮಗನೂ, ಕರ್ಣನ ಮಿತ್ರನೂ, ಹನ್ನೊಂದು ಅಕ್ಷೋಹಿಣಿ ಸೈನ್ಯಕ್ಕೆ ಒಡೆಯನಾಗಿದ್ದವನೂ, ಮೋಸದ ಜೂಜಿನಲ್ಲಿ ಧರ್ಮ ಭೀಮ ಅರ್ಜುನರನ್ನು ಗೆದ್ದುಕೊಂಡವನೂ,ದ್ರೋಣ ಭೀಷ್ಮರ ಯೋಗ್ಯವಾದ ಮಾತುಗಳನ್ನು ದ್ವೇಷಿಸಿದವನೂ, ದ್ರೌಪದಿಯ ಮುಡಿಯನ್ನೂ ಸೀರೆಯನ್ನೂ ಹಿಡಿದೆಳೆಯಿಸಿದವನೂ, ದಾರುಣವಾದ ಶೋಕಾಗ್ನಿ ಯಲ್ಲಿ ಬೆಂದವನೂ, ಮಕ್ಕಳ ಸಾವಿನಿಂದ ದುಃಖಿಸುವವನೂ,ಅದ ನಿಮ್ಮ ರಾಜಾಧಿರಾಜ, ರಾಜಭೂಷಣನು ಎಲ್ಲಿರುವನೋ?

೩೨. ಭರತವಂಶಕ್ಕೆ ಕಳಂಕನೂ, ಭರತಕುಲದ ಅರಮನೆಯನ್ನು ಹೊಕ್ಕ ಅನಿಷ್ಟ ಬೆಳವನೂ, ಕುರುಕುಲಮುಖ್ಯನೂ ಎಲ್ಲಿರುವನು ಹೇಳಿ. ಕುರುವಂಶಕ್ಕೆ ಪ್ರಳಯವಾಗಿರುವ ಭೀಮಸೇನನು ಬಂದಿರುವನು.

ವ॥ ಎಂದು ಪಾಳೆಯದ ಕಾವಲುಗಾರರ ಹೊಟ್ಟೆಗಳೂ, ಪಾಳೆಯದಲ್ಲಿರುವ ಸ್ತ್ರೀಯರ ಗರ್ಭಗಳೂ ಥಟ್ಟನೆ ಕಳಚಿ ಬೀಳುವಂತೆ ಸಿಂಹನಾದದಿಂದ ಗರ್ಜಿಸಿ ಕೌರವ ರಾಜನ ಬಾಗಿಲ ಬಳಿಗೆ ಬಂದಾಗ-

ಆರಾರ್ ಸತ್ತರ್ ಸಮರದೊ ।
ಳಾರಾರೊಳರೆನ್ನ ಸೂನುಗಳ್ಗೇನಾಯ್ತೆಂ ॥
ದಾರಯ್ಯಲ್ ನೃಪಭವನ ।
ದ್ವಾರದೊಳಿರ್ದಹಿತಜನನಿ ಪರಿಜನಸಹಿತಂ ॥೩೩॥

ದೆಸೆಯಂ ತೆಕ್ಕನೆ ತೀವಿ ಪರ್ಬಿ ಗಗನಂ ಕೂಡಿಟ್ಟವೊಲ್ ನೀಳ್ದಗು
ರ್ವಿಸೆ ಬಾಹುಭ್ರಮಿತಾಭ್ರವಿಭ್ರಮಗದಂ ಕೌರವ್ಯರಂ ತಿಂದರ ॥
ಕ್ಕಸನೋ [ಭೀಮನೋ ಈತನಾವ]ನೆನುತುಂ ಗಾಂಧಾರಿ ಬಳ್ಕುತ್ತೆ ಬೆ ।
ಕ್ಕಸಮುತ್ತಳ್ ಬರೆ ಕಂಡು ಪಾಂಡವಬಲಪ್ರಾಕಾರನಾಕಾರಮಂ ॥೩೪॥

ಅಂತು ಕಂಡು ಬಿಲ್ಲುಂಬೆಜಿಗುಮಾಗಿ -

ಎನ್ನಾತ್ಮಜರಂ ನೂರ್ವರು ।
ಮನ್ನುಂಗಿದ ತೆಱದೆ ನುಂಗೆ ಬಂದಂ ಭರದಿಂ ॥
ಪನ್ನಗಕೇತನನುಮನಿಂ ॥
ತನ್ನೆಯಮಾಯ್ತೆಂದು ಪಿರಿದುಮುಮ್ಮಳಿಸುತ್ತುಂ ॥೩೫॥

ಎಂಬನ್ನೆಗಂ ವಿಜೃಂಭಿಸಿ ಕಯ್ಪೆಸರದಿಂ ಗುರುಜನಕ್ಕೆ ಸಮುಚಿತಾಚಾರಮುಂ ಮೆಱೆದು ಭೀಮಂ ಭೀಮನಾದಮಂ ನೆಗಟ್ಟೆ -

ಧೃತರಾಷ್ಟ್ರಕ್ಷಿತಿಪಾಲ ಕೇಳ್ ಜನನಿ ಕೇಳ್ ಗಾಂಧಾರಿ ಕೊಂದೆಂ ಭವ
ತ್ಸುತರಂ ನೂರ್ವರುಮಂ ಗದಾಪ್ರಹತಿಯಿಂ ದುಶ್ಶಾಸನೋರಃಸ್ಥಳ ॥
ಕ್ಷತಜಾಸೃಗ್ಜಲಸೇಕದಿಂ ತಣಿಪಿದೆಂ ಕೋಪಾಗ್ನಿಯಂ ಬಂದೆನು ।
ದ್ಧತನಂ ಕೋಪಕೃತಾಪರಾಧಶತನಂ ನುಂಗಲ್ಕೆ ಪಿಂಗಾಕ್ಷನಂ ॥೩೬॥

೩೩. ಯುದ್ಧದಲ್ಲಿ ಯಾರು ಯಾರು ಸತ್ತರು, ಯಾರು ಯಾರು ಉಳಿದರು, ನನ್ನ ಮಕ್ಕಳಿಗೆ ಏನಾಯಿತು ಎಂದು ತಿಳಿಯಲು ಗಾಂಧಾರಿಯು ತನ್ನ ಪರಿಜನ ಸಹಿತಳಾಗಿ ಬಾಗಿಲಿಗೆ ಬಂದು ನಿಂತಿದ್ದಳು.

೩೪. ದಿಕ್ಕುಗಳೆನ್ನೆಲ್ಲ ತುಂಬಿ ಆಕಾಶವನ್ನೆ ಸುತ್ತಿ ಇಟ್ಟಂತೆ ಗರಗರನೆ ಮೋಡಗಳನ್ನು ಭೀಕರವಾಗಿ ತಿರುಗಿಸುತ್ತಿರುವ ತನ್ನ ಗದಾಸಹಿತನಾಗಿ ಕೌರವರನ್ನು ನುಂಗಿದ ರಾಕ್ಷಸನೋ, ಭೀಮನೋ, ಈನು ಯಾರೆಂದುಕೊಳ್ಳುತ್ತ ಗಾಂಧಾರಿ ಅಂಜುತ್ತ ಅಳುಕುತ್ತ ನಿಂತು, ಪಾಂಡವ ಸೈನ್ಯವನ್ನು ರಕ್ಷಿಸುವ ಕೋಟೆಯಾದ ಭೀಮನು ಬರುವುದನ್ನು ಕಂಡಳು.

ವ॥ ಹಾಗೆ ಕಂಡು ತುಂಬ ಬೆರಗಾಗಿ -

೩೫. ನನ್ನ ನೂರು ಮಕ್ಕಳನ್ನು ನುಂಗಿದ ರೀತಿಯಲ್ಲಿ ಸುಯೋಧನನನ್ನೂ ನುಂಗಲೆಂದು ರಭಸದಿಂದ ಈತನು ಬಂದನಲ್ಲ ! ಅನ್ಯಾಯವಾಯಿತು ಎಂದು ಆಕೆ ಪರಿತಪಿಸಿದಳು.

ವ॥ ಅಷ್ಟರಲ್ಲಿ ಆರ್ಭಟಿಸಿ ಭೀಮನು ಕಹಿಯಾದ ಧ್ವನಿಯಲ್ಲಿ ಹಿರಿಯರಿಗೆ ಯೋಗ್ಯವಾದ ಆಚರಣೆ ಮಾಡಿ (ನಮಸ್ಕರಿಸಿ) ಭೀಕರವಾಗಿ ಗರ್ಜಿಸಿ -

೩೬. ಧೃತರಾಷ್ಟ್ರ ರಾಜಾ, ಕೇಳು ; ತಾಯಿ ಗಾಂಧಾರೀ ಕೇಳು. ಗದೆಯಿಂದ ಹೊಡೆದು ನಿಮ್ಮ ನೂರ್ವರು ಮಕ್ಕಳನ್ನು ಕೊಂದೆನು. ದುಶ್ಶಾಸನನ ಎದೆಯನ್ನು ಬಗಿದು

ಎಂಬುದುಂ ಗಾಂಧಾರಿ ಜರಾಸಂಧಾರಿಗೆ ಬದ್ಧಾಂಜಲಿಯಾಗಿ -

ಅನಿಬರ್ತನಯರ ದುಃಖಮ ।
ನನುಭವಿಸಿಯುಮಣಮೆ ಪೋಗವೆಮ್ಮಸುಗಳ್ ನೀ ॥
ನಿನಿತನೆಮಗೊಳ್ಳಿಕೆಯ್ ಭೀ ।
ಮ ನುಂಗು ಮುನ್ನೆಮ್ಮನೆಮ್ಮ ಸುತನಂ ಬಟೆಯಂ ॥೩೭॥

ಎಂಬುದುಮಂಧರಾಜಂಗೆ ಪವನತನೂಜನಭಿಮುಖನಾಗಿ -

ಕುರುಸುತ ಕುರುಕುಲವರ್ಧನ ।
ಕುರುಭೂತಳವಿಪಿನದೊಳಗೆ ಕುರುಶಾರ್ದೂಲಂ ॥
ದೊರೆಕೊಳೆ ನಿನ್ನಯ ಬಟೆಯಂ ।
ಪೊರಳ್ಚಿ ಕೊಲಲೆಂದು ಬಂದ ಭೀಮಕಿರಾತಂ ॥೩೮॥

ಎಂಬುದುಂ ಅನ್ನೆಗಂ ತ್ವರಿತಗತಿಯಿಂ ವಿಂಧ್ಯಕಜಾಲಕರೆಂಬ ಕಿರಾತದೂತರ್ ಬಂದು ದೂರಪ್ರಣತರಾಗಿ - ದೇವಾ ದುರ್ಯೋಧನನಂ ಕುರುಕ್ಷೇತ್ರದೊಳೆಲ್ಲಿಯುಮಱಸಿ ಕಾಣದೆ ಮಧ್ಯಂದಿನ ಸಮಯದೊಳ್ ಲಲಾಟಂ ತಪಮಾದ ತಪನತಾಪದಿಂ ತೃಷ್ಣಾಭಿಭೂತರಾಗಿ ಸಕಲಜನಾಪ್ಯಾಯನಕಾರಿಯಪ್ಪ ವೈಶಂಪಾಯನ ಸರೋವರಕ್ಕೆ ನೀರ್ಗುಡಿಯಲೆಂದು ಪೋಗಿ ಹಲಕುಲಿಶಕಮಲಶಂಖಚಕ್ರಲಾಂಛನಮಪ್ಪಡಿವಜ್ಜೆಯಂ ಕೊಳದ ತಡಿಯೊಳ್ ಕಂಡೆವಲ್ಲಿ ಪೊಱಮಟ್ಟ ಪಜ್ಜೆಯಲ್ಲದೆ ಪೊಕ್ಕ ಪಜ್ಜೆಯಂ ಕಾಣೆವೆನೆ ಪವನತನಯನವರನೊಡಗೊಂಡು

ಅವನ ರಕ್ತದಿಂದ ನನ್ನ ಕೋಪಾಗ್ನಿಯನ್ನು ಆರಿಸಿದೆನು. ಉದ್ಧಟನಾಗಿ ಕೋಪದಿಂದ ನೂರಾರು ಅಪರಾಧಗಳನ್ನು ಮಾಡಿದ ದುರ್ಯೋಧನನನ್ನು ನುಂಗಲೆಂದು ಈಗ ಬಂದಿರುವೆನು.

ವ॥ ಎಂದು ನುಡಿಯಲು ಗಾಂಧಾರಿಯು ಭೀಮನಿಗೆ ಕೈಮುಗಿದು -

೩೭. ಅಷ್ಟೊಂದು ಮಕ್ಕಳ ದುಃಖವನ್ನು ಅನುಭವಿಸಿದರೂ ನಮ್ಮ ಪ್ರಾಣಗಳು ಹೋಗಲಿಲ್ಲ. ನೀನು ನಮಗೆ ಇಷ್ಟೇ ಉಪಕಾರ ಮಾಡಪ್ಪ ಭೀಮಾ - ಮೊದಲು ನಮ್ಮನ್ನು ನುಂಗು, ಆಮೇಲೆ ನಮ್ಮ ಮಗನನ್ನು ನುಂಗುವೆಯಂತೆ.

ವ॥ ಎನ್ನಲಾಗಿ ಭೀಮನು ಧೃತರಾಷ್ಟ್ರನಿಗೆ ಎದುರಾಗಿ -

೩೮. ಕುರುಪುತ್ರಾ, ಕುರುವಂಶವರ್ಧನಾ, ಕುರುಕ್ಷೇತ್ರವೆಂಬ ಕಾಡಿನಲ್ಲಿ ದುರ್ಯೋಧನನೆಂಬ ಹುಲಿ ನಿನ್ನ ಬಳಿಯಲ್ಲಿ ಸಿಕ್ಕಿದರೆ ಕೊಲ್ಲಬೇಕೆಂದು ಬಂದ ಭೀಮನೆಂಬ ಬೇಡ ನಾನು.

ವ॥ ಎಂದನು. ಅಷ್ಟರಲ್ಲಿ ವೇಗವಾಗಿ ವಿಂಧ್ಯಕಜಾಲಕರೆಂಬ ಕಿರಾತದೂತರು ಬಂದು ದೂರದಿಂದಲೆ ಬಾಗಿ ನಮಸ್ಕರಿಸುತ್ತ ಹೀಗೆಂದು ಅರಿಕೆ ಮಾಡಿಕೊಂಡರು - "ದೇವಾ, ಕುರುಕ್ಷೇತ್ರದಲ್ಲಿ ದುರ್ಯೋಧನನನ್ನು ಎಲ್ಲಿ ಹುಡುಕಿದರೂ ಕಾಣದೆ ಮಧ್ಯಾಹ್ನದ ಹೊತ್ತಿನಲ್ಲಿ ನೆತ್ತಿಯನ್ನು ಸುಡುವ ಬಿಸಿಲ ತಾಪಕ್ಕೆ ಗುರಿಯಾಗಿ, ನೀರಡಿಕೆಯಿಂದ ಬಳಲಿ

ಬಂದು ಧರ್ಮತನಯಾದಿಗಳ್ಗೆ ತದ್ವೃತ್ತಾಂತಮನೆಲ್ಲಮನಱಿಪೆ ಯುಕ್ತಿಯುಕ್ತಮಪ್ಪ ದೂತರ ಮಾತಂ ಸಕಲಜಗದುತ್ಪತ್ತಿಸ್ಥಿತಿ ಪ್ರಳಯಪ್ರಭುವೆನಿಸಿದ ವಿಷ್ಣು ಕೇಳ್ದು ಮನದೊಳವಧಾರಿಸಿ-

ದ್ಯುನದೀಜಂ ಕುಡೆ ತೋಯಮಂತ್ರಬಲದಿಂ ಪೊಕ್ಕಿರ್ದಪಂ ಕಾಲವಂ ।
ಚನೆಗೆಯ್ಯಲ್ ಕೊಳನಂ ಹಲಾಯುಧಕೃಪಾಶ್ವತ್ಥಾಮರುಂ ನಾಗಕೇ ॥
ತನನೊಳ್ ನಾಳೆಯೆ ಕೂಡಿ ಬರ್ಪರವರಿನ್ನುಂ ಬಾರದನ್ನಂ ಸುಯೋ ।
ಧನನಂ ಮುನ್ನಮೆ ಕಯ್ಗೆ ಮಾಳ್ಪುದು ಬಳಿಕ್ಕಾರ್ಗಂ ಗೆಲಲ್ ಬರ್ಕುಮೇ ॥೩೯॥

ಅದಱಿಂದೀಗಳೆ ಪೋಗಿ ಪೂಗೊಳನಂ ಮುತ್ತಿ ದುರ್ಯೋಧನನಂ ಪೊಱಮಡಿಸಿ ಪಗೆಯಂ ಪರಿಭವಿಸುವುದೆಂದರವಿಂದನಾಭಂ ಧರ್ಮನಂದನಾದಿಗಳನೊಡಗೊಂಡು ಬಂದು ಕಿರಾತದೂತಸಂಸೂಚಿತಸಂಕೇತಮನಲ್ಲಿ ಕಂಡು ದುರ್ಯೋಧನನಡಿವಜ್ಜೆಯಪ್ಪುದಂ ತಪ್ಪಿಲ್ಲ ದಱಿದು ನಿಸ್ಸಂದಿಗ್ಧಚಿತ್ತನಾಗೆ -

ಭರತಜರೊಳ್ ಮುನ್ನಿಲ್ಲದ ।
ಪರಿಭಾಷೆಯನುಂಟುಮಾಡಿ ಪೆಱಗಡಿಯಿಟ್ಟಂ ॥
ಕುರುರಾಜನೆಂದು ಲಜ್ಜಾ ।
ಭರದಿಂದಂ ತಲೆಯನೆಱಗಿದಂ ಧರ್ಮಸುತಂ ॥೪೦॥

ಸರ್ವಜನಕ್ಕೂ ಹಿತಾವಹವಾದ ವೈಶಂಪಾಯನ ಸರೋವರಕ್ಕೆ ನೀರು ಕುಡಿಯಲೆಂದು ಹೋದೆವು. ಆಗ ಹಲ, ವಜ್ರ, ಕಮಲ, ಶಂಖ, ಚಕ್ರ ಚಿಹ್ನೆಗಳುಳ್ಳ ಹೆಜ್ಜೆಯ ಗುರುತುಗಳನ್ನು ಕೊಳದ ದಂಡೆಯಲ್ಲಿ ಕಂಡೆವು. ಆದರೆ ಕೊಳದಿಂದ ಹೊರಗೆ ಹೋದ ಹೆಜ್ಜೆಗಳಲ್ಲದೆ, ಕೊಳದಲ್ಲಿ ಹೊಕ್ಕ ಹೆಜ್ಜೆಗಳನ್ನು ನಾವು ಕಾಣಲಿಲ್ಲ." ಈ ಮಾತನ್ನು ಕೇಳಿ ಭೀಮನು ಅವರನ್ನೊಡಗೊಂಡು ಬಂದು ಧರ್ಮರಾಜನೆ ಮೊದಲಾದವರಿಗೆ ಈ ಸುದ್ದಿಯನ್ನೆಲ್ಲ ತಿಳಿಸಲಾಗಿ, ಸಯುಕ್ತಿಕವಾದ ದೂತರ ಮಾತನ್ನು ಸಕಲ ಜಗತ್ತಿನ ಹುಟ್ಟು - ಉಳಿವು - ಸಾವುಗಳಿಗೆ ಒಡೆಯನಾದ ವಿಷ್ಣು (ಕೃಷ್ಣನು) ಕೇಳಿ ಮನಸ್ಸಿನಲ್ಲಿಯೆ ವಿಚಾರ ಮಾಡಿ -

೩೯. ಭೀಷ್ಮನು ಉಪದೇಶ ಮಾಡಿದ ಜಲಮಂತ್ರದ ಸಹಾಯದಿಂದ, (ನಿಮ್ಮಿಂದ ತಪ್ಪಿಸಿಕೊಂಡು) ಕಾಲ ಕಳೆಯುವುದಕ್ಕಾಗಿ ದುರ್ಯೋಧನನು ಸರೋವರದಲ್ಲಿ ಹೊಕ್ಕಿರುವನು. ಬಲರಾಮ, ಅಶ್ವತ್ಥಾಮ, ಕೃಪ - ಇವರೆಲ್ಲರೂ ನಾಳೆಗೇ ಅವನನ್ನು ಕೂಡಿಕೊಳ್ಳುವರು. ಅವರು ಬರುವುದಕ್ಕೆ ಮುಂಚಿಯೆ ಸುಯೋಧನನನ್ನು ನಾವು ಗೆಲ್ಲಬೇಕು. (ಈ ಸಮಯ ಕಳೆದ) ಬಳಿಕ ಗೆಲ್ಲಲು ಸಾಧ್ಯವೆ?

ವ॥ ಆದುದರಿಂದ ಈಗಿಂದೀಗಲೆ ಹೋಗಿ ಕಮಲ ಸರೋವರವನ್ನು ಮುತ್ತಿ ದುರ್ಯೋಧನನನ್ನು ಅದರೊಳಗಿಂದ ಹೊರಬೀಳಿಸಿ ಸೋಲಿಸಬೇಕು. ಹೀಗೆಂದು ಕೃಷ್ಣನು ಧರ್ಮರಾಜನೆ ಮೊದಲಾದವರನ್ನು ಕರೆದುಕೊಂಡು ಬಂದು ಕಿರಾತ ದೂತರು ಹೇಳಿದ ಗುರುತುಗಳನ್ನು ಅಲ್ಲಿ ಕಂಡನು. ಅವು ದುರ್ಯೋಧನನ ಹೆಜ್ಜೆಯ ಗುರುತುಗಳೇ ಎಂದು ನಿಃಸಂದೇಹವಾಗಿ ಮನವರಿಕೆಯಾಗಲು -

೪೦. ಕುರುರಾಜನು ಹಿಂಜರಿಕೆಯ ಹೆಜ್ಜೆಯಿಟ್ಟು, ಭರತವಂಶಕ್ಕೆ ಎಂದಿಲ್ಲದ ಕಳಂಕವನ್ನು ತಂದಿಟ್ಟನು ಎಂದು ನಾಚಿಕೆಯಿಂದ ಧರ್ಮರಾಜನು ತಲೆ ತಗ್ಗಿಸಿದನು.

ಎಂದು ಧರ್ಮನಂದನಂ ದುರ್ಯೋಧನನ ದುರ್ಯಶಸ್ಸಿಗೆ ತಲೆವಾಗಿ -

ವಿರುವತ್ಸಾರಸರಾಜಹಂಸರವದಿಂದೇಂವಂದಿರೇ ಬನ್ನಿಮಿಂ ।
ತಿರಿಮೆಂದಾದರಿಪಂತುಟಾಯ್ತು ಪವನೋದ್ಧೂತೋತ್ತರಂಗಾಂಬುವಿಂ ॥
ತರದಿಂ ಕಾಲ್ಗೆಱಿಪಂತುಟಾಯ್ತು ವಿಕಸತ್ಪಂಕೇಜದಿಂ ಪಂಕಜಾ ।
ಕರಮರ್ಘ್ಯಂಗುಡುವಂತುಟಾಯ್ತನಿಲಜಂಗಭ್ಯಾಗತಪ್ರೀತಿಯಿಂ ॥೪೧॥

ಭಾವಿಸೆ ಪೋಲ್ತುದು ನಾಳಂ ।
ಕಾವನೆ ಕರ್ಣಿಕೆಯೆ ಕಳಸಮನೆ ಮರಕತಪ ॥
ತ್ರಾವಳಿ ವಿಳಸಿತದಿಂ ಜಲ ।
ದೇವಿಯ ಪಿಂಛಾತಪತ್ರಮನೆ ಶತಪತ್ರಂ ॥೪೨॥

ಕಡೆಯ ದಳಂಗಳೆ ವಜ್ರಂ ।
ನಡುವಣ ಕರ್ಣಿಕೆಯೆ ಕೇವಣಂ ಕೇವಣದೊಳ್ ॥
ತೊಡರ್ದಳಿ ನೀಲದ ಪರಲೆನೆ ।
ಮೃಡರಿಪುಮುದ್ರಿಕೆವೊಲಾಯ್ತು ಕನಕಾಂಬುರುಹಂ ॥೪೩॥

ಮರುದಾಂದೋಳಿತಜಂಬೂ ।
ತರುಶಾಖಾ ಹಸ್ತಕಿಸಲಯಂ ಮಿಳಿಮಿಳಿರು ॥
ತ್ತಿರೆ ಸನ್ನೆಗೆಯ್ದು ತೋರ್ಪಂ ।
ತಿ[ರಲೆಸೆದುವು ಪವನ]ಜಂಗೆ ದುರ್ಯೋಧನನಂ ॥೪೪॥

ವ॥ ಹೀಗೆ ಧರ್ಮರಾಜನು ದುರ್ಯೋಧನನ ದುಷ್ಕೀರ್ತಿಗೆ ತಲೆ ತಗ್ಗಿಸಿರುವಾಗ-

೪೧. ಧ್ವನಿ ಮಾಡುತ್ತಿರುವ ಸಾರಸ ರಾಜಹಂಸಗಳ ಕಲಕಲದ ರೂಪದಲ್ಲಿ 'ಬಂದಿರಾ ? ಹೀಗೆ ಬನ್ನಿ' ಎಂದು ಆದರಿಸುವಂತಾಯಿತು ; ಗಾಳಿಯ ರಭಸಕ್ಕೆ ಏರಿ ಬಂದ ತೆರೆಗಳ ನೀರಿನಿಂದ ಪಾದಗಳಿಗೆ ನಮಸ್ಕಾರ ಮಾಡುವಂತಾಯಿತು; ಅರಳುವ ತಾವರೆಗಳಿಂದ ಅರ್ಘ್ಯ ಕೊಡುವಂತಾಯಿತು; ಹೀಗೆ ಆ ಕಮಲಸರೋವರವು ಭೀಮನಿಗೆ ಪ್ರೀತಿಯಿಂದ ಅಭ್ಯಾಗತಸತ್ಕಾರವನ್ನು ಮಾಡಿದಂತೆ ತೋರಿತು.

೪೨. ತನ್ನ ದೇಟು ಕಾವನ್ನೂ, ಮಧ್ಯದ ಬೀಜಕೋಶಪಿಂಡವು ಕಳಸವನ್ನೂ, ಹಸಿರೆಲೆಗಳು ನವಿಲುಗರಿಗಳನ್ನೂ ಹೋಲಲಾಗಿ, ಅಲ್ಲಿಯ ಕಮಲವು ಜಲದೇವತೆಯ ಪಿಂಛಾತಪತ್ರ (ನವಿಲ್ಗರಿಯ ಕೊಡೆ) ವೆಂಬಂತೆ ಶೋಭಿಸಿತು.

೪೩. ಕಡೆಯ ಎಸಳುಗಳೆ ವಜ್ರ, ನಡುವಿನ ಬೀಜಕೋಶವೆ ಕುಂದಣದ ನೆಲೆ ; ಆ ಕೋಶದಲ್ಲಿ ಸಿಕ್ಕಿದ ದುಂಬಿಯೆ ನೀಲದ ಹರಳುಗಳಾಗಿ ಹೊಂದಾವರೆ ಮನ್ಮಥನ ಉಂಗುರದಂತೆ ತೋರಿತು.

೪೪. ಗಾಳಿಗೆ ತುಯ್ಯುತ್ತಿರುವ ನೇರಳೆಮರದ ಕೊಂಬೆಯಲ್ಲಿ ಅಲುಗುವ ಚಿಗುರುಗಳು 'ದುರ್ಯೋಧನನು ಇಲ್ಲಿ ಅಡಗಿರುವನು ನೋಡೆಂದು' ಬೆರಳಿಟ್ಟು ತೋರುವಂತೆ ಕಂಗೊಳಿಸಿದುವು.

ಭವದಹಿತನಿಲ್ಲಿದಂ ಕೌ ।
ರವಾರಿ ನೋಡೆಂದು ಮೂಡಿ ಮುಳ್ಕಾಡಿಯೆ ತೋ ॥
ರ್ಪವೊಲಲ್ಲಿ ಮೂಡಿ ಮುಳ್ಕಾ ।
ಡುವ ವಿಹಗಾವಳಿಗಳೇಂ ಮನಂಗೊಳಿಸಿದುವೋ ॥೪೫॥

ಮೀಂಗುಲಿಗವಕ್ಕಿ ಕೊಳನೊಳ್ ।
ಮೀಂಗೆಱಗುವ ತೆಱದಿನೆಱಗಿ ನೋಡಿಲ್ಲಿರ್ದಂ ॥
ಪಿಂಗಾಕ್ಷನೆಂದು ಪವನಸು ।
ತಂಗಱಿಪುವ ತೆಱದಿ[ನಂತದೇಂ] ಸೊಗಯಿಸಿತೋ ॥೪೬॥

ಮರುದಾತ್ಮಜ ನಿಜರಿಪು ತಲೆ ।
ಗರೆದಿರ್ದಪನಿಲ್ಲಿ ನೋಡು ಕೊಳದೊಳಗೆಂಬಂ ॥
ತೆರೆ ಪೊಳೆದು ತೋರ್ಪ ಜಲಚರ ।
ಪರಿಕರಮಱಿಪಿದುವು ತಾಮೆ ದುರ್ಯೋಧನನಂ ॥೪೭॥

ಒಳಗಾದಂ ಪಗೆವಂ ಸರೋವರದೊಳಿರ್ದಿನ್ನೆತ್ತವೋಪಂ ಸರೋ ।
ಜಳಮಂ ಮುಂ ತವೆ ಪೀರ್ದು ಪೀರ್ವೆನಸುಹೃದ್ರಕ್ತಾಂಬುವಂ ತೋರ್ಪೆನೆ ॥
ನ್ನಳವಂ ಮತ್ಪತಿಗೆಂದು ಸಂತಸದೆ ಬಾಹಾಸ್ಫಾಲನಂಗೆಯ್ದು ದಿ ।
ಗ್ವಳಯಂ ಮಾರ್ದನಿಯಿಟ್ಟವೊಲ್ ಗಜಱಿದಂ ಚಾಳುಕ್ಯಕಂಠೀರವಂ ॥೪೮॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀ ಸತ್ಯಾಶ್ರಯ ಕುಲತಿಲಕಂ ಶ್ರೀ ಮದಾಹವಮಲ್ಲದೇವ ಶ್ರೀ ಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯ ಚಕ್ರವರ್ತಿ ಶ್ರೀ ಸಾಹಸಭೀಮ ವಿಜಯದೊಳ್ ಕೌರವಸರೋವರಪ್ರವೇಶವರ್ಣನಂ ಷಷ್ಠಾಶ್ವಾಸಂ ಸಂಪೂರ್ಣಂ

೪೫. ನಿನ್ನ ಶತ್ರು ಇಲ್ಲಿಯೆ ಇರುವನೆಂದು ಭೀಮನಿಗೆ ಮರಮರಳಿ ತೋರುವುವೊ ಏನೊ ಎಂಬಂತೆ ನೀರಲ್ಲಿ ಮುಳುಮುಳುಗಿ ಏಳುವ ಜಲಪಕ್ಷಿಗಳು ಶೋಭಿಸಿದುವು.

೪೬. ಮಿಂಚುಳ್ಳಿ ಹಕ್ಕಿ ಮೀನಿನ ಮೇಲೆ ಎರಗುವ ನೆಪದಲ್ಲಿ ನೀರಿಗೆ ದುಮುಕಿ, "ಭೀಮಾ, ನೋಡಿಕೋ, ದುರ್ಯೋಧನನು ಇಲ್ಲಿಯೆ ಇರುವನು" ಎಂದು ತಿಳಿಸುವುದೊ ಏನೊ ಎಂಬಂತೆ ಕಂಗೊಳಿಸಿತು.

೪೭. ವಾಯುಪುತ್ರನೆ, ನಿನ್ನ ಶತ್ರು ಈ ಕೊಳದಲ್ಲಿ ಅಡಗಿಕೊಂಡಿರುವನು ನೋಡು ಎಂದು ಭೀಮನಿಗೆ ತಿರುತಿರುಗಿ ತಿಳಿಸುವಂತೆ ಮೀನುಗಳು ಹೊಳೆಹೊಳೆದು ತೋರಿದುವು.

೪೮. ಶತ್ರು ಕೈಗೆ ಸಿಕ್ಕಿದನು. ಸರೋವರದಲ್ಲಿದ್ದವನು ಇನ್ನೆತ್ತ ಹೋದಾನು ! ಸರೋವರದ ನೀರನ್ನೆಲ್ಲ ಮೊದಲು ಹೀರಿಬಿಟ್ಟು, ಆಮೇಲೆ ಶತ್ರುವಿನ ರಕ್ತವನ್ನು ಹೀರುವೆನು. ನನ್ನ ಒಡೆಯ (ಧರ್ಮರಾಜ)ನಿಗೆ ನನ್ನ ಸಾಮರ್ಥ್ಯವನ್ನು ತೋರಿಸುವೆನು ಎಂದು ತನ್ನ ತೋಳುಗಳನ್ನು ತಟ್ಟಿಕೊಳ್ಳುತ್ತ ದಿಕ್ಕುಗಳೆಲ್ಲ ಪ್ರತಿಧ್ವನಿಸುವಂತೆ ಭೀಮನು ಗರ್ಜಿಸಿದನು.

# ಸಪ್ತಮಾಶ್ವಾಸಂ

ಶ್ರೀ ರಮಣೀರಮಣಂ ಪೃಥು ।
ಳೋರಸ್ಥ್ಥಳನಹಿತಕುಂಭಿಕುಂಭಸ್ಥಳನಿ ॥
ದಾರಣಪಟುಭುಜದಂಡಂ ।
ದಾರುಣಕೋಪಂ ಪ್ರತಾಪಿ ಸಾಹಸಭೀಮಂ ॥೧॥

ಆಗಳಾ ಕೊಳನ ಬಳಸಿಂಗೆ ಬಂದು ನಿಬ್ಬರಮಾಗೆ ಬೊಬ್ಬಿಱಿದಬ್ಬರಂಗೆಯ್ದು ಪಲತೆಱದ ಪಱೆಗಳಂ ಪೊಯ್ಸಿಯುಂ ಶಂಖಂಗಳಂ ಪೂರೈಸಿಯುಂ ಭೇರಿಗಳಂ ತಾಟಿಸಿಯುಂ ಕಹಳೆಗಳನೊತ್ತಿಸಿಯುಂ ಪಂಚಮಹಾವಾದ್ಯಂಗಳಂ ಬಾಜಿಸಿಯುಂ ಎಂತುಂ ಪೊಱಮಡಿಸ ಲಾಱದಿರೆ ಸುಯೋಧನನಂ ಪೆಸರ್ಗೊಂಡು ನಕುಲನಾಸ್ಫೋಟಿಸಿ -

ಅಂಕದ ಕಲಿ ಕುರುವಂಶಶ ।
ಶಾಂಕನೆ ದುರ್ಯೋಧನಾಂಕನೆನೆ ನೆಗಟ್ದಯಶಃ ॥
ಪಂಕದೊಳಮೀ ಸರೋವರ ।
ಪಂಕದೊಳಂ ನೀನೆ ನಿನ್ನನಿಂತರ್ದುವರೇ ॥೨॥

ಇಱಿವಬೆಡಂಗನೊಳಿಱಿಯಲ್ ।
ನೆಱೆಯಯ್ ನಿನಗಾನೆ ಸಾಲ್ವೆನೆಕ್ಕತುಳಕ್ಕಂ ॥
ನೆಱೆದಿರ್ದೆನಿರದೆ ಕೊಳನಂ ।
ಪೊಱಮಡು [ನೀಂ ತೋರ್ಪೆನೆನ್ನ] ಕೊಂತದ ಸವಿಯಂ ॥೩॥

೧. ಐಶ್ವರ್ಯಕ್ಕೆ ಒಡೆಯನೂ, ವಿಶಾಲವಾದ ಎದೆಯುಳ್ಳವನೂ, ಶತ್ರು ಗಜಗಳ ನೆತ್ತಿಗಳನ್ನು ಸೀಳುವುದರಲ್ಲಿ ಕುಶಲ ಹಾಗು ಸಮರ್ಥವಾದ ತೋಳುಗಳುಳ್ಳವನೂ, ಉಗ್ರಕೋಪಿಯೂ, ಪರಾಕ್ರಮಶಾಲಿಯೂ ಆದ ಸಾಹಸಭೀಮನು-

ವ॥ ಆ ಸರೋವರದ ತೀರಕ್ಕೆ ಬಂದು, ಆರ್ಭಟೆಯಿಂದ ಗರ್ಜಿಸಿ, ಹಲವಾರು ಬಗೆಯ ಹರೆಗಳನ್ನು ಹೊಡೆಯಿಸಿಯೂ, (ಕೊಂಬು, ತಂಬಟೆ, ಶಂಖ, ಭೇರಿ, ಜಾಗಟೆಯೆಂಬ) ಐದು ಮಹಾವಾದ್ಯಗಳನ್ನು ನುಡಿಸಿಯೂ, ಏನು ಮಾಡಿದರೂ ದುರ್ಯೋಧನನನ್ನು ಕೊಳದಿಂದ ಹೊರಡಿಸಲಾಗಲಿಲ್ಲ. ಆಗ ಅವನನ್ನು ಹೆಸರು ಹಿಡಿದು ಕರೆಯುತ್ತ ನಕುಲನು ಹೀಗೆ ಅಬ್ಬರಿಸಿದನು. -

೨. "ಹೆಸರಾಂತ ವೀರ, ಕೌರವಕುಲಚಂದ್ರ, ಯುದ್ಧದಲ್ಲಿ ದುಃಸಾಧ್ಯನೆಂದು ಹೆಸರಿಟ್ಟುಕೊಂಡವನು. ಹೀಗೆಲ್ಲ ಖ್ಯಾತನಾದ ನೀನು - ಈ ಕೊಳದ ಕೆಸರಲ್ಲಿ ಹಾಗು ಅಪಯಶಸ್ಸಿನ ಕೆಸರಲ್ಲಿ ನಿನ್ನನ್ನು ನೀನೆ ಅದ್ದಿಕೊಳ್ಳಬೇಕೆ?

೩. ಭೀಮನೊಡನೆ ನೀನು ಯುದ್ಧ ಮಾಡಲು ಅಸಮರ್ಥ. ನಿನಗೆ ನಾನೇ ಯೋಗ್ಯ. ದ್ವಂದ್ವಯುದ್ಧಕ್ಕೆ ಸಿದ್ಧನಾಗಿ ನಿಂತಿದ್ದೇನೆ. ತಡಮಾಡದೆ ಕೊಳದಿಂದ ಎದ್ದು ಬಾ. ನನ್ನ ಈಟಿಯ ಸವಿಯನ್ನು ನಿನಗೆ ತೋರುವೆನು."

ಎನೆ ಸಹದೇವನಾಸ್ಫೋಟಿಸಿ -

ಎಂದಿಂಗೆ ನಿನಗೆ ಸಾವಿ ।
ಲ್ಲೆಂದಿರ್ದಯ್ ನಿನ್ನ ಮನದೊಳಿನ್ನೆವರಂ ನೀ ॥
ನೊಂದಂ ಬಗೆದಿರೆ ವಿಧಿ ತಾ ।
ನೊಂದಂ ಬಗೆದತ್ತು ಸಕಲಕುರುಕುಲಕೇತೂ ॥೪॥

ಜವನ ಮಗನಿರ್ಕೆ ಸುಭಟರ ।
ಜವನಿರ್ಕೆ ಸಿತಾಶ್ವನಿರ್ಕೆ ನಕುಲನುಮಿರ್ಕ ॥
ಣ್ಮುವೊಡೆನ್ನ ಬಾಳ ಸವಿಯಂ ।
ಸವಿನೋಡಿ ಬಟಿಕ್ಕೆ ನೀರ ಸವಿಯಂ ನೋಡಾ ॥೫॥

ಎಂಬುದುಮರ್ಜುನಂ ವಿಜೃಂಬಿಸಿ -

ಮಾನಧನನೆನಿಸಿ ನಿನ್ನಭಿ ।
ಮಾನಕ್ಷತಿಮಾಡಿದಯ್ ಸುಯೋಧನ ನೀಂ ಮು ॥
ತ್ತೀ ನೀರೊಳಗೆಸಡಿರ್ಕುಂ ।
ಮೀನಿರ್ಕುಂ ಕಪ್ಪೆಯಿರ್ಕುಮಿರ್ಪರೆ ಗಂಡರ್ ॥೬॥

ಮಾನಧನ ನಿನ್ನ ಸುತಸ್ಯೆ ।
ನ್ಯಾನುಜಶತಕಕ್ಕೆ ಕೇತುವಲ್ಲದೆ ಗಂಗಾ ॥
ಸೂನು ಮೊದಲಾದ ಪಲರ್ಗಂ ।
ನೀನೊರ್ವನೆ ಕೇತುವಾದೆ ಕುರುಕುಲಕೇತೂ ॥೭॥

ವ॥ ಬಳಿಕ ಸಹದೇವನು ಆರ್ಭಟಿಸಿ ಹೀಗೆಂದನು -

೪. "ನಿನಗೆ ಎಂದಿಗೂ ಮರಣವಿಲ್ಲವೆಂದು ಈವರೆಗೆ ನೀನು ಅಂದು ಕೊಂಡಿದ್ದೆಯಲ್ಲಾ, ಕೌರವೇಶ್ವರ ! ನೀನೊಂದು ಬಗೆದರೆ ದೈವ ಇನ್ನೊಂದು ಬಗೆಯಿತು.

೫. ಧರ್ಮರಾಜ ಬೇಡ, ಬಂಟರ ಯಮ (ಭೀಮ)ನು ಬೇಡ, ಅರ್ಜುನನೂ ಬೇಡ, ನಕುಲನೂ ಬೇಡ, ಹೋರಾಡುವ ಪರಾಕ್ರಮ ನಿನಗಿದ್ದರೆ ಮೊದಲು ನನ್ನ ಖಡ್ಗದ ಸವಿಯನ್ನು ನೋಡಿ, ಬಳಿಕ ನೀರಿನ ಸವಿಯನ್ನು ನೋಡು."

ವ॥ ಹೀಗೆನ್ನುತ್ತಲೆ ಅರ್ಜುನನು ದರ್ಪದಿಂದ ಹೀಗೆಂದನು -

೬. "ಸುಯೋಧನಾ, ಅಭಿಮಾನಶಾಲಿಯಾಗಿದ್ದ ನೀನು ಆತ್ಮಗೌರವಕ್ಕೆ ಭಂಗವೊದಗಿಸಿಕೊಂಡೆ. ಈ ನೀರಲ್ಲಿ ಏಡಿಗಳು ಇರುತ್ತವೆ ; ಕಪ್ಪೆಗಳಿರುತ್ತವೆ. ವೀರರಾದವರು ನೀರಲ್ಲಿ (ಅಡಗಿ) ಇರುವರೆ?

೭. ಅಭಿಮಾನವೇ ಮಿಗಿಲೆಂದು ಭಾವಿಸುವ ಸುಯೋಧನನೆ, ನಿನ್ನ ಅನೇಕ ಮಕ್ಕಳಿಗೂ ತಮ್ಮಂದಿರಿಗೂ ಮಾತ್ರ ನೀನು 'ಕೇತು' (೧. ಹಿರಿಯ. ೨. ನಾಶ ಸೂಚಕವಾದ ಕೇತುಗ್ರಹ) ವಾಗಲಿಲ್ಲ, ಭೀಷ್ಮನೆ ಮೊದಲಾದ ಅನೇಕರಿಗ ಕೇತುವಾದೆ. ಕುರುವಂಶಕ್ಕೇ ನೀನು ಕೇತು.

ಕುಮ[ರಾ]ಂಕರಾಮನೃಪನೊಳ್ ।
ಸಮರಂ ನಿನಗರಿದು ತಕ್ಕುದೆನಗಂ ನಿನಗಂ ॥
ಸಮರಂ ನಿನ್ನಂ ನುಂಗ ।
ಲ್ಕಮೋಘಶರಮಿರ್ದುವಿವಱ ಸವಿಯಂ ನೋಡಾ ॥೮॥

ಎಂಬುದುಂ ಧರ್ಮನಂದನಂ ಧೃತರಾಷ್ಟ್ರನಂದನನ ಮುನ್ನೆ ಗೆಯ್ದ ಅಧರ್ಮಮಂ ಬಗೆಯದೆ ಕುಲಕ್ರಮಯುಕ್ತಮಪ್ಪ ನಿರ್ಮಲಕ್ಷತ್ರಧರ್ಮಮನೆ ಬಗೆದು

ಭರತಾನ್ವಾಯದೊಳಂದಿನಿಂದುವರೆಗಂ ಸಾಪತ್ನರೊಳ್ ಬದ್ಧಮ ।
ತ್ಸರಮಿಲ್ಲೆಮ್ಮನಕಾರಣಂ ಕದಡಿದಯ್ ಸಾವೆಯ್ದಿದಯ್ ನಷ್ಟಸೋ ॥
ದರಮಾಬತ್ತೆನಗಂ ಸ್ವಗೋತ್ರವಧೆಯಪ್ಪಾ ಪಾತಕಂ ಕೌರವೇ ।
ಶ್ವರ ನೀಂ ಸಂಧಿಗೊಡಂಬಡಿಂತು ಕೊಳನಂ ಪೊಕ್ಕಿರ್ಪುದೇಂ ತಕ್ಕುದೇ ॥೯॥

ಎಂಬುದುಮಾ ನುಡಿಗೆ ಸೈರಿಸಲಾಱದೀ ಬೂತೆನ್ನ ಸರಂಗೇಳ್ದೊಡಲ್ಲದೆ ಪೊಱಮಡುವನಲ್ಲನಿವಂಗಾನೆ ಸಾಲ್ವೆನೆಂದು ಭೀಮಸೇನನುದ್ದಾಮಕೋಪಾಟೋಪವಿರಚಿತಬದ್ಧಭ್ರುಕುಟಿಯಾಗಿ -

ಬಳವದ್ವಿಗ್ರಹದೊಳ್ ನೀ ।
ನೊಳಗಿರ್ದಯ್ ಮುನ್ನೆ ನಿನ್ನ ಕುಲಮೆಲ್ಲಮನಾಂ ॥
ಮುಳಿದಿಱಿದುಂ ಪಿಂದನೆ ಬರೆ ।
ಕೊಳದೊಳಗುಟಿದಿರ್ದು ಮರುಳೆ ಬರ್ದುಕಲ್ ಬಗೆವಾ ॥೧೦॥

೮. ಭೀಮನೊಡನೆ ಯುದ್ಧಮಾಡುವುದು ನಿನ್ನಿಂದ ಆಗದ ಮಾತು. ನನಗೂ ನಿನಗೂ ಸರಿಜೋಡಿಯಾಗುವುದು. ನಿನ್ನನ್ನು ನುಂಗುವುದಕ್ಕೆ ಸಮರ್ಥವಾದ ಬಾಣಗಳಿವೆ. ಇವುಗಳ ಸವಿಯನ್ನಷ್ಟು ನೋಡು."

ವ॥ ಆಗ ಧರ್ಮರಾಜನು (ಮುಂದೆ ಬಂದು), ಈ ಮೊದಲು ದುರ್ಯೋಧನನಿಂದಾದ ದುಷ್ಕರ್ಮಗಳನ್ನೆಲ್ಲ ಎಣಿಸದೆ ವಂಶಗೌರವಕ್ಕೆ ಯೋಗ್ಯವಾದ ಶುದ್ಧ ಕ್ಷತ್ರಿಯ ಧರ್ಮವೊಂದನ್ನೆ ಪರಿಗಣಿಸಿ ಹೀಗೆ ನುಡಿದನು -

೯. "ಭರತವಂಶದಲ್ಲಿ ಮೊದಲಿಂದ ಇಂದಿನವರೆಗೆ ದಾಯಾದ ಮತ್ಸರವಿರಲಿಲ್ಲ. ನಿಷ್ಕಾರಣವಾಗಿ ನೀನು ನಮ್ಮನ್ನು ಕಲಕಿದೆ ; ಸಾವು ತಂದುಕೊಂಡೆ. ಸೋದರರು ಪ್ರಾಣ ಕಳೆದುಕೊಂಡರು. ಸ್ವವಂಶವಧೆಯ ಪಾಪ ನನಗೂ ತಟ್ಟಿತು. ಕೌರವರಾಜಾ, ಸಂಧಿಗೆ ಒಪ್ಪಿಕೊ. ಹೀಗೆ ಕೊಳದಲ್ಲಿ ಅಡಗಿಕೊಂಡಿರುವುದು ಯೋಗ್ಯವೆ ?"

ವ॥ ಹೀಗೆನ್ನುತ್ತಲೆ ಆ ಮಾತನ್ನು ಸಹಿಸಲಾರದೆ ಭೀಮಸೇನನು "ಈ ಭೂತ ನನ್ನ ಧ್ವನಿಯನ್ನು ಕೇಳದೆ ಹೊರಬೀಳಲಾರದು. ಇವನಿಗೆ ನಾನೇ ಯೋಗ್ಯ" ಎಂದು ಅತ್ಯುಗ್ರವಾದ ಕೋಪದಿಂದ ಹುಬ್ಬುಗಂಟಿಕ್ಕಿ ಹೀಗೆ ನುಡಿದನು -

೧೦. "ಘೋರವಾದ ಕಾಳಗ ನಡೆದಾಗ ನೀನು (ಸುರಕ್ಷಿತವಾಗಿ) ಒಳಗೇ ಉಳಿದುಕೊಂಡಿದ್ದೆ. ನಿನ್ನ ವಂಶವನ್ನೆಲ್ಲ ನಾನು ಕೋಪದಿಂದ ಹೊಡೆದು ಕೊಂದು

ಭವದನುಜನರುಣಜಲಮಂ ।
ಸವಿನೋಡಿದೆ [ನಾನೆ] ನಿನ್ನ ಬಲಜಲನಿಧಿಯಂ ॥
ಸವಿನೋಡಿದೆನೀ ಕೊಳನಂ ।
ತವೆ ಪೀರ್ದು ಬಟಿಕ್ಕೆ ನಿನ್ನ ಸವಿಯಂ ನೋೞ್ಪೆಂ ॥೧೧॥

ಸರಮಂ ಕೇಳಲ್ಕೆನ್ನು ।
ಗ್ರರೂಪಮಂ ನಿಂದು ನೋಡಲಣ್ಮದೆ ಸಮರಾ ॥
ಕರಮಂ ಬಿಸುಟ್ಟು ಕಮಲಾ ।
ಕರಮಂ ಪೊಕ್ಕಲವೊ ಮರುಳೆ ಬರ್ದುಕಲ್ ಬಗೆವಾ ॥೧೨॥

ಜಳದೊಳ್ ಮೀನಿರ್ಪವೊಲ್ ನೀಂ ಕೊಳದೊಳೆ ಮುೞುಗಿರ್ದಕ್ಕಟಾ ಕೋಡ
ಸೇಡಿಂ ।
ಗೊಳಗಾದಯ್ ನಿನ್ನ ದುರ್ಯೋಧನವೆಸರ್ಗಿದು ಲಜ್ಜಾಕರಂ ತೋಱಿ
ದಯ್ ನಿ ॥
ನ್ನಳವಂ ಛೀಃ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕಯ್ದುಗೊಳ್ ಕೌರವೇಂದ್ರಾ।
ಚಳವಜ್ರಂ ಬಂದನೀಗಳ್ ಕುರುಕುಲಮಥನೋದ್ಧೀಕರಂ ಭೀಮಸೇನಂ ॥೧೩॥

ಹರಿ ಸಂಧಾನಕ್ಕೆ ವಂದಂದವಗಡಿಸಿದಹಂಕಾರಮೇನಾಯ್ತೊ ಕೃಷ್ಣಾಂ ।
ಬರಕೇಶಾಕೃಷ್ಟಿಯಂ ಮಾಡಿಸಿದ ಮದಮದೇನಾಯ್ತೊ ಕೌಂತೇಯರಂ ಮ ॥
ಚ್ಚರದಿಂ ಕಾಂತಾರದೊಳ್ ತಿಱಿನೆ ತಿರಿಪಿದ ಸೊರ್ಕೀಗಳೇನಾದುದೆಂದಾ ।
ಕುರುವಂಶಾಧೀಶನಂ ಮೂದಲಿಸಿದನದಟಂ ಭೀಮನುದ್ದಾಮಭೀಮಂ ॥೧೪॥

ಬೆನ್ನಟ್ಟಿ ಬಂದಾಗ, ಅಯ್ಯೊ ಮರುಳೆ, ಕೊಳದಲ್ಲಿ ಅಡಗಿಕೊಂಡು ಬದುಕ ಬಯಸಿದೆಯಾ ?

೧೧. ನಿನ್ನ ತಮ್ಮನ ನೆತ್ತರನ್ನು ಸವಿನೋಡಿದೆನು ; ನಿನ್ನ ಸೈನ್ಯ ಸಮುದ್ರವನ್ನೂ ಸವಿನೋಡಿದೆನು. ಈಗ ಈ ಸರೋವರದ ನೀರನ್ನೆಲ್ಲ ಪೂರ್ತಿಯಾಗಿ ಹೀರಿ, ಬಳಿಕ ನಿನ್ನ ಸವಿಯನ್ನು ನೋಡುವೆನು.

೧೨. ನನ್ನ ಧ್ವನಿಯನ್ನು ಕೇಳುವುದಕ್ಕೆ ಹೆದರಿ, ನನ್ನ ಉಗ್ರಾವತಾರವನ್ನು ನೋಡಲು ಅಂಜಿ ರಣಭೂಮಿಯಿಂದ ಓಡಿಬಂದು, ಕೊಳದಲ್ಲಿ ಹೊಕ್ಕು ಬದುಕಬೇಕೆನ್ನುವಿಯಾ ?

೧೩. ಮೀನಿನಂತೆ ನೀನು ಸರೋವರದಲ್ಲಿ ಮುಳುಗಿಕೊಂಡು, ಅಯ್ಯೊ, ಶೀತಬಾಧೆಗೆ ಒಳಗಾದೆಯಲ್ಲ ! 'ದುರ್ಯೋಧನ' (ಯಾವನ ಕೂಡ ಯುದ್ಧ ಮಾಡುವುದು ತುಂಬ ಕಷ್ಟಕರವೊ ಅಂತಹವನು) ಎಂಬ ಹೆಸರಿಗೆ ಇದು ನಾಚಿಕೆಗೇಡು. ನಿನ್ನ ಯೋಗ್ಯತೆಯನ್ನು ತೋರಿಸಿಬಿಟ್ಟೆ. ಛೀ ! ಸತ್ತವರೇನು ಮರಳಿ ಹುಟ್ಟುವುದಿಲ್ಲವೆ ? ಹೊರಗೆ ಬಾ. ಆಯುಧವನ್ನು ಹಿಡಿ. ಕೌರವ ಪರ್ವತಕ್ಕೆ ವಜ್ರಾಯುಧನೆನಿಸಿದ, ಕುರುವಂಶ ಧ್ವಂಸಕಾರಿಯಾದ ಭಯಾನಕ ಭೀಮಸೇನನು ಬಂದಿದ್ದಾನೆ.

೧೪. ಕೃಷ್ಣನು ಸಂಧಿಮಾಡಿಸಲು ಬಂದಾಗ ಹೀಯಾಳಿಸಿದ ಅಹಂಕಾರ ವೇನಾಯಿತು? ದ್ರೌಪದಿಯ ವಸ್ತ್ರವನ್ನೂ ಮುಡಿಯನ್ನೂ ಹಿಡಿದೆಳೆಸಿದ ಸೊಕ್ಕು

ಅಂತು ಮುಟ್ಟ ಮೂದಲಿಸಿ ನುಡಿದುಮೆಂತುಂ ಪೊಱಮಡಿಸಲಾಱದೆ -

ಎನಿತುಂ ಪೊಕ್ಕಿರ್ದಪಯ್ ನೀಂ ಪೊಱಮಡು ಕೊಳದಿಂ ದ್ರೌಪದೀ ದ್ರೋಹ
ದುಶ್ಶಾ ।
ಸನದುಷ್ಟಜ್ಯೇಷ್ಠ ಭೀಷ್ಮಪ್ರಮುಖನಿಖಿಲಬಂಧುಕ್ಷಯೋತ್ಪನ್ನದುಃಖ ॥
ಧ್ವನಿವಾರಿಚ್ಛಿನ್ನಧೈರ್ಯದ್ರುಮ ಯಮಸುತನಿಷ್ಕಾರಣದ್ವೇಷಿ ಭೀಮ ।
ಧ್ವನಿಯಂ ಕೇಳ್ದಿನ್ನುಮಿರ್ದಯ್ ಕುರುಕುಲವಿಲಯೋತ್ಪಾತನೋತ್ಪಾತ
ಕೇತೂ ॥೧೫॥

ಎಂದು ಮತ್ತಮಿರದೆ -

ಒಡೆಯಲಜಾಂಡಂ ಕುಲಗಿರಿ ।
ಕೆಡೆಯಲ್ ನಡುಗಲ್ಕೆ ಧಾತ್ರಿ ದಿವಿಜರ್ ಸೆಡೆಯ ॥
ಲ್ಕೊಡರಿಸುವಿ[ನಂ] ಜಟಾಸುರ ।
ಹಿಡಿಂಬಬಕವೈರಿ ಸಿಂಹನಾದಂಗೆಯ್ದಂ ॥೧೬॥

ಆ ಪ್ರಸ್ತಾವದೊಳ್ -

ಏನಾಯಿತು? ಕುಂತೀಪುತ್ರರನ್ನು ಕಾಡಿನಲ್ಲಿ ನಿಂತಲ್ಲಿ ನಿಲ್ಲದಂತೆ ಅಲೆದಾಡಿಸಿದ ಗರ್ವ ಈಗ ಎಲ್ಲಿಗೆ ಹೋಯಿತು"? ಎಂದು ಭೀಮನು ಕುರುರಾಜನ ಮರ್ಮಕ್ಕೆ ಮುಟ್ಟುವಂತೆ ಚುಚ್ಚು ಮಾತಾಡಿದನು.

ವ॥ ಹೀಗೆ ಮರ್ಮಾಂತಿಕವಾಗಿ ತಿವಿದು ನುಡಿದರೂ ಅವನನ್ನು ಕೊಳದಿಂದ ಹೊರಡಿಸಲಾರದೆ -

೧೫. "ಎಷ್ಟು ಹೊತ್ತು ನೀನು ನೀರಲ್ಲಿ ಅಡಗಿಕೊಂಡಿರುವೆ? ದ್ರೌಪದಿಗೆ ದ್ರೋಹಬಗೆದ ನೀಚನೆ, ದುಶ್ಶಾಸನನ ದುಷ್ಟ ಅಣ್ಣನೆ, ಭೀಷ್ಮಾದಿ ಸಮಸ್ತ ಬಂಧುಗಳ ಮರಣದಿಂದ ಶೋಕಾರ್ತನಾಗಿ ಧೈರ್ಯಗುಂದಿದವನೆ, ಧರ್ಮರಾಜನನ್ನು ನಿಷ್ಕಾರಣವಾಗಿ ದ್ವೇಷಿಸುವವನೆ, ಕುರುವಂಶಕ್ಕೆ ಪ್ರಳಯವನ್ನು ತಂದೊಡ್ಡಿದ ದುಷ್ಟಕೇತುಗ್ರಹವೆ, ನನ್ನ ಧ್ವನಿಯನ್ನು ಕೇಳಿಯೂ ನೀನು ತೆಪ್ಪಗಿರುವೆಯಾ?"

ವ॥ ಎಂದು ಅಷ್ಟಕ್ಕೇ ಬಿಡದೆ -

೧೬. ಬ್ರಹ್ಮಾಂಡ ಬಿರಿಯುವಂತೆ, ಕುಲಪರ್ವತಗಳು ಕದಡಿ ಬೀಳುವಂತೆ, ಭೂಮಿ ನಡುಗುವಂತೆ, ದೇವತೆಗಳು ಗಾಬರಿಯಾಗುವಂತೆ, ಜಟಾಸುರ ಹಿಡಿಂಬಾದಿಗಳನ್ನು ಕೊಂದ ಭೀಮಸೇನನು ಅಬ್ಬರದಿಂದ ಗರ್ಜಿಸಿದನು.

ವ॥ ಆಗ -

ಅನಿಲತನೂಜನ ಸಿಂಹ ।
ಧ್ವನಿಯಂ ಕೇಳ್ದಳ್ಕಿ ತತ್ಸರೋವರದೆರ್ದೆ ಪ ॥
ವ್ವನೆ ಪಾಱುವಂತೆ ಪಾಱೆದು ।
ವನಾಕುಳಂ ಕೊಳದೊಳಿರ್ದ ತದ್ವಿಹಗಕುಳಂ ॥೧೭॥

ಆರೆಸೀದುವು ತಾವರೆ ಖಗ ।
ಮರೆಬೆಂದುವು ಭೀಮಕೋಪಶಿಖಿ ಮುಟ್ಟೆ ಸರೋ ॥
ವರದ ಮಱಲ್ ಪುರಿಗಡಲೆಗೆ ।
ಪುರಿದ ಮಱಲ್ ಕಾಯ್ವ ತೆಱದೆ ಕಾಯ್ದತ್ತೆತ್ತಂ ॥೧೮॥

ಬಂದಂ ಬಕಾಂತಕಂ ಪೋ ।
ಕೊಂದಂ ಬಕವೆಸರ್ಗೆ ಮುನಿದು ನಮ್ಮುಮನಿನ್ನೆಂ ॥
ಬಂದದೊಳೆ ಪಾಱೆ ಪೋದುವು ।
ನಿಂದಿರದುರವಣಿಸಿ ಬಕನಿಕಾಯಕಮದಱೊಳ್ ॥೧೯॥

ಕುಪಿತಮರುತ್ಸುತರವಕ ।
ಳ್ಕಿ ಪಯಶ್ಚರನಿಕರಸಂಭ್ರಮೋಲ್ಲಹರಿಕೆ ಭಾ ॥
ವಿಪೊಡೆ ಜನಕ್ಕೆ ಕೊಳಂ ಕಿ ।
ಬ್ಬು ಪಾಱುವಂತಾಯ್ತು ಕಮಲಜಾಂಡಂಬರೆಗಂ ॥೨೦॥

ಅಳುರ್ದು ಕೊಳೆ ಭೀಮಕೋಪಾ ।
ನಳನೆಸರ್ಗಾಯ್ದಿಟ್ಟ ತೆಱದೆ ಮಱುಗಿದುದಾಗಳ್ ॥
ಕೊಳನ ಜಲಮೆಯ್ದೆ ಕಾಯ್ದೆಸ ।
ರೊಳೆ ಕೂಟ್ ಕುದಿವಂತೆ ಕುದಿದುವಂದಾ ಮೀನ್ಗಳ್ ॥೨೧॥

೧೭. ಭೀಮಸೇನನ ಸಿಂಹಗರ್ಜನೆಯನ್ನು ಕೇಳಿ ಭಯದಿಂದ ಸರೋವರದ ಎದೆಯೆ ಹಾರಿತೇನೊ ಎಂಬಂತೆ ಅದರೊಳಗಿದ್ದ ಜಲಪಕ್ಷಿಗಳು ಹಾರಿಹೋದುವು.

೧೮. ಭೀಮನ ಕೋಪಾಗ್ನಿಯ ಜಳಕ್ಕೆ ಕಮಲಗಳು ಅರ್ಧಮರ್ಧ ಕರಿಕಾದುವು, ಪಕ್ಷಿಗಳು ಕೆಲಮಟ್ಟಿಗೆ ಬೆಂದುಹೋದುವು, ಸರೋವರದ ಮರಳೆಲ್ಲ ಹುರಿಗಡಲೆಗೆ ಕಾಯಿಸಿದ ಮರಳಿನಂತೆ ಕಾವೇರಿತು.

೧೯. ಬಕಾಸುರನ ವೈರಿ ಭೀಮನು ಬಂದುಬಿಟ್ಟನು. 'ಬಕ' ಎಂಬ ಹೆಸರಿಗೆ ಕೋಪಗೊಂಡು ನಮ್ಮನ್ನೂ ಕೊಂದಾನು ಎಂದು ಅಂಜಿದುವೊ ಏನೊ ಎಂಬಂತೆ ಅಲ್ಲಿಯ ಬಕಪಕ್ಷಿಗಳು ಹಿಂಡುಹಿಂಡಾಗಿ ರಭಸದಿಂದ ಹಾರಿಹೋದುವು.

೨೦. ಕ್ರೋಧಾವೇಶದ ಭೀಮನ ಧ್ವನಿಗೆ ಹೆದರಿಕೊಂಡು ಗಾಬರಿಯಿಂದ ಎತ್ತೆತ್ತಲೊ ಹರಿದಾಡುವ ಜಲಚರಗಳ ಗರಿಯಿಂದೆದ್ದ ತೆರೆಗಳನ್ನು ನೋಡಿದರೆ, (ಭಯಗೊಂಡ) ಸರೋವರವೇ ಕಿತ್ತು ಬ್ರಹ್ಮಾಂಡದಂಚಿಗೆ ಹಾರಿಹೋಗುವಂತೆ ತೋರಿತು.

೨೧. ಭೀಮನ ಕೋಪದ ಬೆಂಕಿ ತಾಕಿದೊಡನೆ ಎಸರಿಟ್ಟ ನೀರಿನಂತೆ ಸರೋವರದ ನೀರು ಕುದಿಯಿತು. ಎಸರಿನಲ್ಲಿ ಅನ್ನ ಕುದಿಯುವಂತೆ ಕೊಳದೊಳಗಿನ ಮೀನುಗಳು ಕತಕತನೆ ಕುದಿದುವು.

ಅಂತು ಜಲಚರಜೀವರಾಶಿಗಳೆಲ್ಲಮಸುಂಗೊಳೆ ಗೋಳುಂಡೆಗೊಳೆ ಕೊಟ್ಟುದಿಗೊಳೆ ಮಹೋತ್ತುಂಗಸಿಂಹಕೇತನಂ ಸಿಂಹನಾದಂಗೆಯ್ಯೆ -

ಆ ರವಮಂ ನಿರ್ಜಿತಕಂ ।
ಠೀರವರವಮಂ ನಿರಸ್ತಘನರವಮಂ ಕೋ ॥
ಪಾರುಣನೇತ್ರಂ ಕೇಳ್ದಾ
ನೀರೊಳಗಿರ್ದುಂ ಬೆಮರ್ತನುರಗಪತಾಕಂ ॥೨೨॥

ಅಂತು ಬೆಮರ್ತುಮ್ಮಳಿಸಿ ಸೈರಿಸಲಾಱದೆ ಜಲಮಂತ್ರಮನೇನುಮಂ ಬಗೆಯದೆ ಕೋಪೋದ್ರೇಕಮನೆ ಬಗೆದು -

ಸಲಿಲಸ್ತಂಭನವಿದ್ಯಾ ।
ಬಲಮನಪೇಕ್ಷಿಸಿದನೆನ್ನದುರಗಪತಾಕಂ ॥
ಬಲಹಾನಿಯಾಗೆ ಕೊಳದೊಳ್ ।
ಮುೞುಗಿರ್ದಪನೆಂದು ನಗರೆ ಕೂರದರೆನ್ನಂ ॥೨೩॥

ಶಲ್ಯಂ ಸತ್ತಿಂಬೞಿಯಮ ।
ಖಲ್ಯಂ ಕೊಳದೊಳಗೆ ಪೊಕ್ಕು ಮೆಯ್ಗರೆದಯ್ ಛಃ ॥
ಖಲ್ಯನೆನೆ ಬಾರ್ತೆಗೆಟ್ಟುದ ।
ಮೂಲ್ಯಯಶೋರತ್ನಮೆಂಬುದಂ ಮಾಡುವೆನೇ ॥೨೪॥

ವ॥ ಹೀಗೆ ಜಲಚರಜೀವಗಳೆಲ್ಲ ಕುದಿಗೀಡಾಗಿ ಗೋಳಿಡುವಂತೆ ಸಿಂಹಧ್ವಜನಾದ ಭೀಮಸೇನನು ಸಿಂಹನಾದ ಮಾಡಲಾಗಿ -

೨೨. ಸಿಂಹದ ಗರ್ಜನೆಯನ್ನೂ ಮೇಘದ ಗರ್ಜನೆಯನ್ನೂ ಮೀರಿಸುವ ಆ ಧ್ವನಿಯನ್ನು ಕೇಳಿ ಕೋಪದಿಂದ ಕಣ್ಣು ಕೆಂಪಡರಿದ ದುರ್ಯೋಧನನು ನೀರೊಳಗಿದ್ದರೂ ಬೆವತುಹೋದನು.

ವ॥ ಹೀಗೆ ಬೆವತು, ತಾಪವನ್ನು ಸಹಿಸಲಾರದೆ ಜಲಮಂತ್ರದ ಯೋಚನೆಯನ್ನು ಬಿಟ್ಟು, ಕೋಪೋದ್ರೇಕಕ್ಕೆ ಈಡಾಗಿ -

೨೩. ಜಲಸ್ತಂಭನ ವಿದ್ಯಾಸಾಧನೆ ಮಾಡುತ್ತಾನೆ ಎಂದೆನ್ನದೆ, ಬಲಹೀನನಾದ ದುರ್ಯೋಧನನು ಸರೋವರದಲ್ಲಿ ಮುಳುಗಿ ಮೈಮರೆಸಿಕೊಂಡಿರುವನೆಂದು ಶತ್ರುಗಳು ನನ್ನನ್ನು ಹೀಯಾಳಿಸಿ ನಗಲಿಕ್ಕಿಲ್ಲವೆ ?

೨೪. 'ಶಲ್ಯನು ಸತ್ತ ಬಳಿಕ ಹೇಡಿಯಾಗಿ ಕೊಳದಲ್ಲಿ ಹೊಕ್ಕು ಮೈಮರೆಸಿಕೊಂಡೆ, ಛೀ ! ಶೂರನೆ ನೀನು ? ಅಮೌಲ್ಯವಾದ ಯಶಸ್ಸು ಹಾಳಾಗಿ ಹೋಯಿತಲ್ಲ" - ಎಂದು ಎನಿಸಿಕೊಳ್ಳುವಂತೆ ವರ್ತಿಸುವೆನೆ?

ತೃಣವಲ್ಲಘುಜೀವಿತರ ।
ಕ್ಷಣಾರ್ಥದಿಂ ಕುಲದ ಚಲದ ಚಾಗಮನಾಂತುಂ ॥
ಗುಣಹಾನಿಯಾಗಿ ಪುರುಷರ ।
ಗಣನೆಗೆವಂದೆನ್ನನಾನೆ ಲಘುಮಾಡುವೆನೇ ॥೨೫॥

ಮುನಿವಂ ಮೂದಲಿಸಿಯುಮಿ ।
ನ್ನೆನಿತುಂ ಪೊಕ್ಕಿರ್ಪೆನೆಂದು ಚಿತ್ತಕ್ಷೋಭಂ ॥
ತನಗಾಗೆ ಜಲಚರಕ್ಷೋ ।
ಭನಿನಾದಂ ಪೊಕ್ಕು ಪೊಣ್ಮೆ ವಿಬುಧಕ್ಷೋಭಂ ॥೨೬॥

ಆಗಳಾ ಜಲಸ್ತಂಭಮಂತ್ರಮೆಲ್ಲಮವಿನೀತನಪ್ಪ ರಾಜಪುತ್ರನೊಳಾಳೋಚಿಸಿದ ಮಂತ್ರದಂತೆ ಪರಿಣಾಮರಮಣೀಯಮಾಗದೆ ಕಿಡೆಯುಮಹಂಕಾರಂಗಿಡದೆ -

ನಿಜಮಕುಟಸ್ಫುರನ್ಮಣಿಗಣಚ್ಛವಿಯಿಂ ಸುರಚಾಪಲೀಲೆ ಪಂ ।
ಕಜವನದೊಳ್ ಮನಂಗೊಳಿಸೆ ತನ್ನಯ ಮೇಗೊಗೆದಿರ್ದ ನೀಲನೀ ॥
ರಜವನದಿಂ ಕಱಂಗಿ ಕಮಲಾಕರದಿಂ ಪೊಱಮಟ್ಟನಾಗಳಾ ।
ಭುಜಯುಗತೋರಣಾಯಿತಗದಾಪರಿಘಂ ಫಣಿರಾಜಕೇತನಂ ॥೨೭॥

ಉನ್ಮಜ್ಜತ್ಕುರುರಾಜಕ ।
ನನ್ಮಣಿಮಯಮಕುಟಮಣಿಗಣಾರುಣವಿಕ್ಷೇ ॥
ಪೋನ್ಮಣಿಕಿರಣದ್ಯುತಿಜಲ ।
ಜನ್ಮಂ ಬೆಳರ್ಗೆಂಪನಾಳ್ದುದಾ ಕಮಲವನಂ ॥೨೮॥

೨೫. ಕುಲ, ಛಲ, ತ್ಯಾಗಗಳ ಘನತೆಯನ್ನು ಹೊಂದಿ ಪೌರುಷಶಾಲಿಗಳಲ್ಲಿ ಒಬ್ಬನೆಂದು ಗಣ್ಯನಾದವನು ನಾನು. ಹುಲ್ಲುಕಡ್ಡಿಯಂತೆ ಕ್ಷುಲ್ಲಕವಾದ ಜೀವವನ್ನು ಉಳಿಸಿಕೊಳ್ಳುವುದಕ್ಕೋಸ್ಕರ, ಗುಣಹೀನನಾಗಿ, ನನ್ನನ್ನು ನಾನೇ ಕೀಳ್ತನಕ್ಕೆ ಇಳಿಸಿಕೊಳ್ಳಲೆ?

೨೬. "ನನ್ನ ವೈರಿ ಬಂದು ಚುಚ್ಚಿ ಮಾತಾಡಿದ ಮೇಲೂ ನಾನು ಇನ್ನೆಷ್ಟು ಹೊತ್ತು ಈ ಕೊಳದಲ್ಲಿರಲಿ?"ಎಂದು ದುರ್ಯೋಧನನ ಮನಸ್ಸು ಉದ್ವಿಗ್ನವಾಯಿತು; ಜಲಚರಗಳ ಕೋಲಾಹಲ ಧ್ವನಿ ಮುಗಿಲಿಗೆದ್ದು ಹಬ್ಬಿತು ; ಆಕಾಶದಲ್ಲಿದ್ದ ದೇವತೆಗಳು ಉದ್ವಿಗ್ನರಾದರು.

ವ॥ ಆಗ ಅಯೋಗ್ಯ ರಾಜಕುಮಾರನಿಗೆ ಹೇಳಿದ ಮಂತ್ರಾಲೋಚನೆ ವ್ಯರ್ಥವಾಗಿ ಕೆಡುವಂತೆ ಜಲಸ್ತಂಭಮಂತ್ರದ ಪ್ರಭಾವ ನಿಂತುಹೋಯಿತು. ಆದರೂ ಅಹಂಕಾರ ಮುಕ್ಕಾಗದೆ -

೨೭. ತನ್ನ ಕಿರೀಟದಲ್ಲಿ ಕೆಚ್ಚಿದ ರತ್ನಗಳ ಕಾಂತಿಯಿಂದ ಇಂದ್ರಧನುವಿನ ಸೊಬಗು ಕಮಲಗಳ ಮೇಲೆ ಆವರಿಸಿ ಮನೋಹರವಾಗಲಾಗಿ, ತನ್ನ ಮೇಲೆ ಅರಳಿದ ಕನ್ನೈದಿಲೆಗಳ ಛಾಯೆಯಿಂದ (ಮೈಯೆಲ್ಲ) ಕಪ್ಪಾಗಿ, ದುರ್ಯೋಧನನು ತೋರಣದಂತೆ ಎರಡೂ ಕೈಗಳಲ್ಲಿ ಗದೆಯನ್ನು (ಅಡ್ಡಲಾಗಿ) ಹಿಡಿದುಕೊಂಡು ಕೊಳದಿಂದ ಮೇಲೆದ್ದನು.

೨೮. ಮೇಲೇಳುತ್ತಿರುವ ದುರ್ಯೋಧನನ ಕಿರೀಟದ ರತ್ನಕಾಂತಿ ಅಲ್ಲಿದ್ದ

ಬಕರಿಪು ಮುರರಿಪು [ತ]ದ್ಭುಜ ।
ಗ ಕಾಂಚನಾದ್ರೀಂದ್ರಮೆನಿಸಿ ತತ್ಕಮಲಸರೋ ॥
ದಕದಿಂದೆ [ಮಥಿಸಿದೊಡೆ] ಕಾ ।
ಳಕೂಟಮೊಗೆವಂತಿರೊಗೆದನುರಗಪತಾಕಂ ॥೨೮-ಅ॥

ರಭಸೋದ್ಗತಮಾದ ತರಂ ।
ಗಭಂಗಮೂರುಗಳೊಳುತ್ತಮಾಂಗದೊಳೆತ್ತಂ ॥
ಪ್ರಭವಿಸಿದುವು ಕೌರವನೂ ।
ರುಭಂಗಮಂ ಮಕುಟಭಂಗಮಂ ಸೂಚಿಪವೋಲ್ ॥೨೯॥

ರಸಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋಮಧ್ಯದಿಂ ಸಾ ।
ಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟೆಲ್ಲಿದಂ ಭೀಮನೆಂದೆ ॥
ಣ್ದೆಸೆಯಂ ನೋಡುತ್ತೆ ಮತ್ತದ್ಭುತನಟನಿಟಲಾಲೋಲಕೀಲಾಕ್ಷಿವೊಲ್ ದ ।
ಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ ॥೩೦॥

ಅಂತಿರ್ದ ದಂದಶೂಕಪತಾಕನ ಸೆರಗಿಲ್ಲದ ಮೆಯ್ಗಲಿತನಕ್ಕೆ ಮೆಚ್ಚಿ ತಲೆಯಂ ತೂಗಿ ನಿಜಭುಜಪ್ರತಾಪನಿರ್ಜಿತನಿಖಿಲಭೀಮಸೇನಂ ಭೀಮಸೇನಂ ಕೌರವನಿದಿರ್ಗೆ ವಂದು -

(ಬಿಳಿಯ) ತಾವರೆಗಳನ್ನು ಆವರಿಸಿ ಕೆಂಪು ಛಾಯೆಯನ್ನು ನೀಡಿತು. ಅದರಿಂದಾಗಿ ಆ ಸರೋವರವು ತಿಳಿಗೆಂಪು ವರ್ಣವನ್ನು ಹೊಂದಿತು.

೨೮. (ಅ) ಭೀಮನೆ ಶೇಷಸರ್ಪ, ಕೃಷ್ಣನೆ ಮೇರುಗಿರಿ, ಆ ತಾವರೆಗೊಳವೆ ಸಮುದ್ರವಾಗಲಾಗಿ, ಆ ಸಮುದ್ರಮಥನದಿಂದ ಉದ್ಭವಿಸಿದ ಕಾಳಕೂಟವೆಂಬಂತೆ ದುರ್ಯೋಧನನು ಮೇಲೆದ್ದು ಬಂದನು.

೨೯. ದುರ್ಯೋಧನನು ರಭಸದಿಂದ ಮೇಲೇಳುವಾಗ ಆ ಕೊಳದ ತೆರೆಗಳು ಅವನ ತಲೆಯ ಬಳಿಯಲ್ಲಿಯೂ, ತೊಡೆಯ ಬಳಿಯಲ್ಲಿಯೂ 'ಭಂಗ'ವಾಗಿ (ಇಬ್ಭಾಗವಾಗಿ) ಅವನ 'ಊರುಭಂಗ'ವನ್ನೂ (ತೊಡೆಗಳು ಮುರಿದು ಹೋಗುವುದನ್ನೂ) 'ಮಕುಟ ಭಂಗ'ವನ್ನೂ (ಕಿರೀಟವು ಕೆಳಗೆ ಬಿದ್ದು ಸಿಡಿಯುವುದನ್ನೂ) ಸೂಚಿಸುವಂತೆ ತೋರಿದವು.

೩೦. ಪಾತಾಳಲೋಕದಿಂದ ಪ್ರಳಯಕಾಲಾಗ್ನಿ ರುದ್ರನು ಮೇಲೆದ್ದು ಬರುವಂತೆ, ಆ ಸರೋವರದ ಮಧ್ಯದಿಂದ ಒಮ್ಮೆಲೆ ಎದ್ದು ಬಂದ ದುರ್ಯೋಧನನು ಅದ್ಭುತವಾದ ತಾಂಡವಶಿವನ ರಕ್ತನೇತ್ರಗಳಂತೆ ಕೋಪಾವೇಶದಿಂದ ಕೆಂಗಣ್ಣುಗಳಲ್ಲಿ ಉರಿಯುಗುಳುತ್ತಾ "ಎಲ್ಲಿರುವನಾ ಭೀಮ ?"ಎಂದು ತನ್ನ ತೋಳ ಮೇಲಿನ ಗದೆಯನ್ನು ತೂಗಾಡಿದನು.

ವ॥ ಹಾಗೆ ಬಂದ ದುರ್ಯೋಧನನ ಅಸಹಾಯ ಶೌರ್ಯಕ್ಕೆ ಮೆಚ್ಚಿ ತಲೆದೂಗಿ, ತನ್ನ ತೋಳ್ಬಲದಿಂದ ಸಮಸ್ತ ಸೈನ್ಯವನ್ನು ಸದೆಬಡಿದ ಭೀಮಸೇನನು ಕೌರವ ರಾಜನ ಎದುರಿಗೆ ಬಂದು (ಹೀಗೆಂದನು) -

ನಿನ್ನನುಜನರುಣಜಲಮಂ ।
ಮುನ್ನಂ ತವೆ ಪೀರ್ದೊಡಂಜಿ ನೀಂ ಪುಗೆ ಕೊಳನಂ ॥
ಬೆನ್ನನೆ ಬಂದಾತಂ ಶೌ ।
ರ್ಯೋನ್ನತನೀಯಿರ್ದನಲ್ತೆ ಸಾಹಸಭೀಮಂ ॥೩೧॥

ಎಂದು ನೆಱನನುಂಟುಮಾಡಿ ಮೂದಲಿಸಿ ನುಡಿಯೆ ದುರ್ಯೋಧನನತಿ ಕ್ರೋಧಾನಲನಾಗಿ -

ಯಮರಾಜಪ್ರಿಯಸೂನುಗಂ ನಿನಗಮಾ ಗಾಂಡೀವಧನ್ವಂಗಮಾ ।
ಯಮಳರ್ಗಂ ಪ್ರಿಯೆಯಪ್ಪ ಕೃಷ್ಣೆಯ ಕಚಪ್ರಾರಂಭಮಂ ಬಾಹುವಿ ॥
ಕ್ರಮಿ ದುಶ್ಶಾಸನನೆನ್ನ ಮುಂದೆ ತೆಗೆವಂದೆಲ್ಲಿರ್ದೆಯೀ ಗಂಡಗ ।
ರ್ವಮುಮಂದೆಲ್ಲಿಗೆ ಪೋಯ್ತು ಪಂಡ ನಿನಗಿಂದೀ ಗಂಡನಾರ್
ಮಾಡಿದರ್ ॥೩೨॥

ಅನಿಲಾತ್ಮಜ ನಿಮ್ಮಯ್ವರ ।
ವನಿತೆಯನೊರ್ವಳನೆ ತಂದನಲ್ಲಂ ದುಶ್ಶಾ ॥
ಸನನೆಟಿದು ತಂದನಖಿಳಾ ।
ವನಿಯುಮನಂದೆನಗೆ ಕೀರ್ತಿಯಂ ಲಕ್ಷ್ಮಿಯುಮಂ ॥೩೩॥

೩೧. "ಇಕೊ, ಇಲ್ಲಿಯೆ ಇದ್ದೇನೆ. ನಿನ್ನ ತಮ್ಮನ ರಕ್ತವನ್ನು ನಿಶ್ಶೇಷವಾಗಿ ನಾನು ಹೀರಿದಾಗ ನೀನು ಅಂಜಿಕೊಂಡು ಈ ಕೊಳದಲ್ಲಿ ಹೊಗಲು, ನಿನ್ನನ್ನು ಬೆನ್ನಟ್ಟಿ ಬಂದ ಸಾಹಸಭೀಮನು ಇಲ್ಲಿದ್ದೇನಲ್ಲವೆ?"

ವ॥ ಹೀಗೆ ಮರ್ಮಾಂತಿಕವಾಗಿ ಚುಚ್ಚಿ ನುಡಿಯಲಾಗಿ, ದುರ್ಯೋಧನನು ಸಿಟ್ಟು ಬೆಂಕಿಯಾಗಿ ಹೀಗೆಂದನು -

೩೨. "ಯಮರಾಜನ ಪ್ರಿಯಪುತ್ರ (ಧರ್ಮರಾಜ)ನಿಗೂ, ನಿನಗೂ, ಗಾಂಡೀವಧನುರ್ಧಾರಿಯಾದ ಅರ್ಜುನನಿಗೂ, ಆ ಅವಳಿಮಕ್ಕಳಿಗೂ ನಲ್ಲೆಯಾದ ದ್ರೌಪದಿಯ ಮುಡಿಗೂದಲನ್ನು ಬಾಹುವಿಕ್ರಮಿಯಾದ ದುಶ್ಶಾಸನನು ನನ್ನ ಸಮಕ್ಷಮದಲ್ಲಿ ಹಿಡಿದೆಳೆಯುವಾಗ ಎಲ್ಲಿದ್ದೆಯೊ ನೀನು? ನಿನ್ನ ಈ ಗಂಡಸುತನದ ದರ್ಪ ಆಗ ಎಲ್ಲಿಗೆ ಹೋಗಿತ್ತು? ನಪುಂಸಕಾ, ನಿನಗೆ ಈಗ ಈ ಗಂಡಸುತನವನ್ನು ಯಾರು ತಂದು ಕೊಟ್ಟರು?

೩೩. ಭೀಮನೇ, ದುಶ್ಶಾಸನನು ಅಂದು ನಿಮ್ಮೈವರ ಹೆಂಡತಿಯೊಬ್ಬಳನ್ನೆ ಎಳೆದು ತರಲಿಲ್ಲ, ಸಮಸ್ತ ರಾಜ್ಯವನ್ನೂ ಕೀರ್ತಿಯನ್ನೂ ಐಶ್ವರ್ಯವನ್ನೂ ಸೆಳೆದುತಂದು ನನಗೆ ನೀಡಿದನು.

ಅಸುರಂ ವಸುಧಾತಳಮಮಂ ।
ರಸಾತಳಕ್ಕುಯ್ಯೆ ಹರಿ ತರಲ್ ಪೊಕ್ಕವೊಲೀ ॥
ವಸುಮತಿಯನ್ನೆತ್ತಿ ನಿನ್ನಯ ।
ದೆಸೆಯಿಂ ತರೆ ಪೊಕ್ಕೆನಂಜಿ ಪೊಕ್ಕೆನೆ ಕೊಳನಂ ॥೩೪॥

ನಾಟ್ಕಡಿಗಳೆದುೞಿ ಬೇರಂ ।
ಬಿಟ್ಕೆಯುಮಂ ತಿಂದು ವನದೊಳಡಗಿರೆ ನೀಮುಂ ॥
ನೀಟ್ಕರಿಸಿ ನಿಂದುಮೀಗಳ್ ।
ಪೇೞ್ಕಮ್ಮೈಸುವರೆ ಬಿರುದುಮಂ ಬೀರಮುಮಂ ॥೩೫॥

ಸಕಲ ಜನನಿಂದ್ಯಲೋಕೋ ।
ತ್ಸುಕನಯ್ ನೀಂ ಸಕಲಭುವನದೂಷಕನಯ್ ಮ ॥
ತ್ಸ್ಯಕನಲ್ಲಿ ವಲಲನಯ್ ಸೂ ।
[ದಕರ್ಮಿ] ನಿನಗಿಂತು ಗಂಡಗರ್ವಮುಮಾಯ್ತೇ ॥೩೬॥

ಪುಟ್ಟಂ ಸಟ್ಟುಗಮಂ ಕೊಂ ।
ಡಟ್ಟಾಱಿಸಿ ಬೋನಮೆತ್ತಿ ಬಂದೆಯೊ ಗದೆಗೊಂ ॥
ಡೊಟ್ಟೈಸಿ ಕಾದುವಂತುಟು ।
ತೊಟ್ಟನೆ ಕೊಳೆ ನಿನಗೆ ಗಂಡಗರ್ವಮುಮಾಯ್ತೇ ॥೩೭॥

೩೪. (ಹಿರಣ್ಯಾಕ್ಷನೆಂಬ) ರಾಕ್ಷಸನು ಭೂಮಿಯನ್ನು ಪಾತಾಳಕ್ಕೆ ಎಳೆದುಕೊಂಡು ಹೋದಾಗ, ಅದನ್ನು ಮರಳಿ ಮೇಲೆತ್ತುವುದಕ್ಕೆ ವಿಷ್ಣು (ಸಮುದ್ರವನ್ನು) ಹೊಕ್ಕಂತೆ, ನಿಮ್ಮಿಂದ ಭೂಮಿಯನ್ನು ಎತ್ತಿ ತರುವುದಕ್ಕೆ ನಾನು ಕೊಳದಲ್ಲಿ ಹೊಕ್ಕೆನಲ್ಲದೆ ಅಂಜಿಕೆಯಿಂದ ಹೊಕ್ಕೆನೆ?

೩೫. ನಾಡಿನ ಸೀಮೆಯನ್ನು ದಾಟಿ ಗಡ್ಡೆಗೆಣಸುಗಳನ್ನೂ ಬಿಕ್ಕೆ ಹಣ್ಣುಗಳನ್ನೂ ತಿಂದು ಹೊಟ್ಟೆಹೊರೆಯುತ್ತ ಕಾಡಿನಲ್ಲಿ ಅಡಗಿಕೊಂಡಿದ್ದ ನೀವು ಈಗ ಸೆಡೆದು ನಿಂತು ಬಿರುದುಗಳನ್ನೂ, ಶೂರತನವನ್ನೂ ಮೆರೆಯಬಹುದೆ?

೩೬. ನೀನು ಸಕಲ ಜನರ ನಿಂದೆಗೆ ಪಾತ್ರನಾಗುವಂತೆ ವರ್ತಿಸಿದವನು. ಮೂರು ಲೋಕದಲ್ಲಿಯೂ ಅಯೋಗ್ಯನಾದವನು. ವಿರಾಟರಾಜನ ಆಶ್ರಯದಲ್ಲಿ ವಲಲನೆಂದು ಅಡುಗೆಭಟ್ಟನಾಗಿದ್ದ ನಿನಗೆ ಈಗ ಬಂಟನೆಂಬ ಗರ್ವವೂ ಬಂದಿತೆ ?

೩೭. ಹುಟ್ಟು ಸವುಟುಗಳನ್ನು ಹಿಡಿದುಕೊಂಡು ಅಡಿಗೆ ಮಾಡಿಟ್ಟು, ಆರಿಸಿ ಊಟಕ್ಕೆ ಬಡಿಸಿ ಬಂದೆಯಾ? ಗದೆಯನ್ನೆತ್ತಿಕೊಂಡು ಅಬ್ಬರಿಸಿ ಕಾಳಗ ಮಾಡುವಂತಹ ಶೌರ್ಯ ದರ್ಪ ನಿನಗೆ ಬಂದಿತೆ?

ಎಸರನಿಡುವಕ್ಕಿಗರ್ಚುವ ।
ಬೆಸನಂ ಕಯ್ಗೆಱಿವ ಕಂಚುಗರ್ಚುವ ಬೆಸನಂ ॥
ಬೆಸನಲ್ಲದೆ ಮತ್ತನ ಬಾ ।
ಣಸಿಗಂಗಾರಿತ್ತರೆಲವೊ ನಿನಗೀ ಬೆಸನಂ ॥೩೮॥

ಎಂದು ಮುಟ್ಟೆ ಮೂದಲಿಸಿ ನುಡಿಯೆ ಭೀಮಸೇನಂ ಮುಗುಳ್ನಗೆ ನಕ್ಕು -

ಪಿರಿಯಣ್ಣನ ನನ್ನಿಯನಾ ।
ದರದಿಂ ಕಾಯಲ್ಕೆ ಪೆಱರ್ಗೆ ಬಾಣಸುಗೆಯ್ದೆಂ ॥
ಕುರುವಂಶಜ ಕೇಳ್ ನಿನ್ನೀ ।
ಶರೀರಮಾಂಸದೊಳೆ ಮರುಳ್ಗೆ ಬಾಣಸುಗೆಯ್ವೆಂ ॥೩೯॥

ನೆನೆ ಚಿತ್ರಾಂಗದನಿಂದಮಂದು ನಿನಗಾದಾಪತ್ತನಾ ಬನ್ನಮಂ ।
ನೆನೆ ನೀಂ ಗೋಗ್ರಹಣ ಪ್ರಪಂಚದೊಳೆ ಮೆಯ್ವೆತ್ತಿರ್ದುದಂ ನಿನ್ನ ತ ॥
ಮ್ಮನ ಕೆನ್ನೆತ್ತರನೀಂಟುವಲ್ಲಿ ಭಯದಿಂದಳ್ಕುತ್ತೆ ಬೆನ್ನಿತ್ತುದಂ ।
ನೆನೆ ಪಿಂತಿಕ್ಕಿದ ನಿನ್ನ ಮುನ್ನಿನ ಕವಲ್ಬನ್ನಂಗಳಂ ಕೌರವಾ ॥೪೦॥

ಜತುಗೇಹಾನಲದಾಹದಿಂ ವಿಷವಿಶೇಷಾಲಿಪ್ತಗುಪ್ತಾನ್ನದಿಂ ।
ಕೃತಕದ್ಯೂತವಿನೋದದಿಂ ದ್ರುಪದಜಾಕೇಶಾಂಬರಾಕೃಷ್ಟಿಯಿಂ ॥
ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ಕೊಡ್ಡಿದಯ್ ।
ಗತಕಾಲಂ ಲಯಕಾಲಮಾಯ್ತು ನಿನಗಿನ್ನಾಯ್ತಂತ್ಯಕಾಲಂ ಗಡಾ ॥೪೧॥

೩೮. (ಅನ್ನಕ್ಕೆ) ಎಸರಿಡುವ, ಅಕ್ಕಿಯನ್ನು ತೊಳೆಯುವ, ಪಾತ್ರೆಗಳನ್ನು ಬೆಳಗುವ ಕಾರ್ಯವೆ ನಿನ್ನ ಕಾರ್ಯ. ಎಲವೋ, ಅಡುಗೆಯ ಆಳಾದ ನಿನಗೆ (ಕಾಳಗದ) ಈ ಕಾರ್ಯವನ್ನು ಯಾರು ಹೇಳಿದರು?

ವ॥ ಹೀಗೆಂದು ಚುಚ್ಚಿ ನುಡಿಯಲಾಗಿ, ಭೀಮಸೇನನು ನಸುನಕ್ಕು ಹೀಗೆ ಉತ್ತರಿಸಿದನು -

೩೯. "ಹಿರಿಯಣ್ಣನ ಸತ್ಯಕ್ಕೆ ಗೌರವ ಕೊಟ್ಟು ಅದನ್ನು ಕಾಯುವುದಕ್ಕಾಗಿ ನಾನು ಹೆರವರಿಗೆ ಅಡುಗೆ ಮಾಡಿದುದು ನಿಜ. ಕುರುಪುತ್ರಾ, ಕೇಳು (ಆ ಕೆಲಸವನ್ನು ಈಗಲೂ ಮುಂದುವರಿಸಿ) ನಿನ್ನ ದೇಹಮಾಂಸವನ್ನು ಅಡುಗೆಮಾಡಿ ಭೂತ ಪಿಶಾಚಿಗಳಿಗೆ ಬಡಿಸುವೆನು.

೪೦. ಕೌರವಾ, ಅಂದು ಚಿತ್ರಾಂಗದನಿಂದ ನಿನಗೆ ಒದಗಿದ ವಿಪತ್ತನ್ನು ಸ್ಮರಿಸಿಕೊ. ಗೋಗ್ರಹಣ ಕಾಲದಲ್ಲಿ ನೀನು ಪಟ್ಟ ಪಾಡನ್ನು ನೆನಸಿಕೊ. ನಿನ್ನ ತಮ್ಮನ ರಕ್ತವನ್ನು ನಾನು ಹೀರುವಾಗ ಭಯದಿಂದ ವಿಮುಖನಾದುದನ್ನೂ ನೆನಸಿಕೊ. ಈ ಹಿಂದೆ ನಿನಗೆ ಬಂದೊದಗಿದ ಬಗೆಬಗೆಯ ಭಂಗಗಳನ್ನು ನೆನೆದುಕೊ.

೪೧. ಎಲೈ ಧೃತರಾಷ್ಟ್ರನ ಮಗನೆ, ಅರಗಿನ ಮನೆಗೆ ಬೆಂಕಿಯಿಟ್ಟು, ಗುಪ್ತವಾಗಿ ವಿಷ ಬೆರಸಿದ ಅನ್ನವುಣಿಸಿ, ಮೋಸದ ಜೂಜಾಟವಾಡಿ, ದ್ರೌಪದಿಯ ಕೇಶವಸ್ತ್ರಗಳನ್ನು

ಎಂದುರಗಧ್ವಜನಂ ಮರ್ಮೋದ್ಘಾಟನಂಗೆಯ್ದು ಮೂದಲಿಸಿದನಿತಱೊಳೆ ನಿಂದುರಗಧ್ವಜಂ ಮುನಿದನಿಬರ ಮೊಗಮಂ ನೋಡಿ -

ಇರಲಿಂತೀ ಮಾದ್ರಿಪುತ್ರರ್ ಬ[ಡವು]ಗಳವರೇಗೆಯ್ವರಿಂ ಧರ್ಮಪುತ್ರಂ ।
ಬೆರಸೀಗಳ್ ಬರ್ಕೆ ಭೀಮಂ ಹರಿಸುತನೊಡನೀ ಮೂವರುಂ ಬರ್ಕೆ ಮೇಣ ॥
ಯ್ವರು[ಮಿಂ] ಬರ್ಕೀ ಕೃತಾಂತಾತ್ಮಜಪವನಜಗಾಂಡೀವಧನ್ವರ್ಕಳೀ ಮೂ ।
ವರೊಳೊರ್ವಂ ಕೃಷ್ಣಂ ಬರ್ಕಂ ಪೊಣರಲನಿಬರುಂ ಬರ್ಕೆ ಮೇಣ್ ಬನ್ನ
ಮೀವೆಂ ॥೪೨॥

ಎಂದುರಗಧ್ವಜಂ ಗರುಡಧ್ವಜನಂ ಸಂಬೋಧಿಸಿ ನುಡಿಯೆ -

ವನರುಹನಾಭಂ ದುರ್ಯೋ ।
ಧನನೆಂದೊಡೆ ಕೇಳ್ದು ಭೀಮಸೇನನ ಜಡಿದಂ ॥
ವಿನಯಮನೆ ಮೆಱೆವ ದುರ್ಯೋ ।
ಧನನಂ ನೀನೆನ್ನ ಮುಂದೆ ನುಡಿವುದೆ ಭೀಮಾ ॥೪೩॥

ಎನೆ ಧರ್ಮನಂದನಂ ಧೃತರಾಷ್ಟ್ರನಂದನಂ ಮುನ್ನೆ ಗೆಯ್ದ ಅಧರ್ಮಮಂ ನೆನೆಯದೆ ನಿರ್ಮಲಕ್ಷತ್ರಧರ್ಮಮ[ನೆ] ನೆನೆದು -

ಹಿಡಿದೆಳೆದು ಪಾಂಡವರನ್ನು ಕೊಲ್ಲುವುದಕ್ಕೂ, ಪರಿಭವಿಸುವುದಕ್ಕೂ ನೀನು ಹವಣಿಸಿದೆ. ಅಂತಹ ಆ ಕಾಲ ಹೋಯಿತು. ಈಗ ಬಂದಿದೆ ನಿನಗೆ ಅಂತ್ಯಕಾಲ."

ವ॥ ಹೀಗೆ ಮರ್ಮಕ್ಕೆ ತಾಕುವಂತೆ ಚುಚ್ಚು ಮಾತಾಡಲಾಗಿ, ದುರ್ಯೋಧನನು ಕೋಪದಿಂದ ಎಲ್ಲರ ಮುಖವನ್ನು ನೋಡಿ -

೪೨. "ಈ ಮಾದ್ರೀಪುತ್ರರು ಒತ್ತಟ್ಟಿಗೆ ಇರಲಿ, ಪಾಪ, ಬಡಜೀವಿಗಳು ಏನು ಮಾಡಬಲ್ಲರು? ಧರ್ಮರಾಜ ಸಹಿತನಾಗಿ ಭೀಮನು ಬರಲಿ, ಅರ್ಜುನನೂ ಬರಲಿ, ಮೂವರೂ ಒಟ್ಟಾಗಿ ಬರಲಿ ಅಥವಾ ಐವರೂ ಬರಲಿ. ಧರ್ಮ, ಭೀಮ, ಅರ್ಜುನ - ಈ ಮೂವರಲ್ಲಿ ಒಬ್ಬನು ಬರುವನೋ, ಎಲ್ಲರೂ ಒಟ್ಟಾಗಿ ಹೋರಾಡಲು ಬರುವರೋ ಕೇಳು, ಕೃಷ್ಣಾ, ಎಲ್ಲರೂ ಬರಲಿ, ಅವರನ್ನು ಭಂಗಿಸುವೆನು."

ವ॥ ಎಂದು ಕೃಷ್ಣನನ್ನು ಉದ್ದೇಶಿಸಿ ನುಡಿದನು -

೪೩. ಆಗ ಕೃಷ್ಣನು "ಭೀಮಾ, ವಿನಯದ ಮಾತನ್ನು ಆಡುವ ದುರ್ಯೋಧನನನ್ನು ನನ್ನ ಮುಂದೆ ಹೀಯಾಳಿಸಿ ನುಡಿಯಬೇಕೆ?" ಎಂದನು.

ವ॥ ದುರ್ಯೋಧನನಿಂದ ಪೂರ್ವದಲ್ಲಿ ಆದ ಅಧರ್ಮವನ್ನು ಎಣಿಸದೆ ಪರಿಶುದ್ಧವಾದ ಕ್ಷತ್ರಿಯ ಧರ್ಮವನ್ನೆ ಮುಖ್ಯವೆಂದೆಣಿಸಿ ಧರ್ಮರಾಜನು ಹೀಗೆ ನುಡಿದನು -

ಆಗದು ಸಮರಂ ಶಮಯುತ ।
ನಾಗು ಮಹಾಭೋಗಿಯಾಗು ನಿನ್ನಾಳ್ವ ಮಹೀ ॥
ಭಾಗಮುಮಂ ಸಕಲಮಹೀ ।
ಭಾಗಮುಮಂ ನೀನೆ ಕೊಂಡು ಸುಖಮಿರಲಾಗಾ ॥೪೪॥

ಧರಣೀಚಕ್ರಮನೊಪ್ಪುಗೊಳ್ ಬಗೆಯದಿರ್ ವಿದ್ವೇಷಮಂ ನಮ್ಮನ ।
ಯ್ವರನಿನ್ನಾಳ್ವೆಸಕೆಯ್ಸಿಕೊಳ್ ನೆನೆಯದಿರ್ ಕೀೞ್ಪೊಕ್ಕಿನೊಳ್‌ತೊಟ್ಟು ಕೊಂ ॥
ಡಿರದೆಮ್ಮೆಂದುದನಿಂಬುಕೆಯ್ ಮನದೊಳೊಳ್ಪಿಂ ಶಾಂತಿವಿಶ್ರಾಂತಿ ಸೋ ।
ದರನೆಂಬಂತುಪಶಾಂತಿಯಂ ಕುರುಕುಲಕ್ಷ್ಮಾಪಾಲಚೂಡಾಮಣೀ ॥೪೫॥

ಎನೆ ಹರಿಯೆಂದಂ ದುರ್ಯೋ ।
ಧನ ಧರ್ಮತನೂಜನೊಳ್ಳಿತಂ ಪೇೞ್ದಪನಾ ॥
ತನ ಪೇೞ್ದುದೆಸಗಿ ನೀನರ ।
ಸನಾಗಿ ವಸುಮತಿಯನಾಳ್ದು ಸುಖಮಿ [ರಲಾಗಾ] ॥೪೬॥

ಎಂಬುದುಂ ಭೀಮಸೇನನಿಂತೆಂದಂ -

ನೀನಯ್ದುಬಾಡದೊಳ್ ಸಂ ।
ಧಾನಂಮಾಡಲ್ಕೆ ಪೋದೊಡೊಲ್ಲ [ದ] ನಿನ್ನೀ ॥
ಮಾನಧನನೆಯ್ದೆ ನಿಜತನು ।
ಜಾನುಜರಟ್ಟಾಡೆ ಸಂಧಿಯಂ ಮಾಡುವನೇ ॥೪೭॥

೪೪. "ಯುದ್ಧವಾಗತಕ್ಕುದಲ್ಲ. ನೀನು ಶಾಂತನಾಗು. ಸಕಲ ಭೋಗಗಳನ್ನೂ ನೀನೇ ಇಟ್ಟುಕೊ. ನಿನ್ನ ರಾಜ್ಯವಷ್ಟೆ ಅಲ್ಲದೆ ಸಮಸ್ತ ಭೂಮಂಡಲದ ಒಡೆತನವನ್ನೂ ನೀನೆ ವಹಿಸಿಕೊಂಡು ನೆಮ್ಮದಿಯಾಗಿ ಇರಲಾಗದೆ?

೪೫. ಭೂಮಿಯನ್ನೆಲ್ಲ ತೆಗೆದುಕೊ. ಶತ್ರುತ್ವದ ಭಾವನೆಯನ್ನು ಬಿಟ್ಟು ಬಿಡು. ನಮ್ಮೈವರಿಂದಲೂ ಸೇವೆ ಮಾಡಿಸಿಕೊ. ಹೀನಭಾವನೆಯನ್ನು ತಾಳದೆ ನಮ್ಮ ಮಾತಿಗೆ ಒಡಂಬಡು. ಕುರುರಾಜಶಿರೋಮಣಿಯೆ, ಒಳ್ಳೆಯ ಮನಸ್ಸಿನಿಂದ ಶಾಂತಿಸಮಾಧಾನಗಳನ್ನು ಹೊಂದಿ ಸಹೋದರನಾಗಿ ಇರು."

೪೬. ಈ ಮಾತನ್ನು ಸಮರ್ಥಿಸುತ್ತ ಕೃಷ್ಣನೆಂದನು- "ದುರ್ಯೋಧನಾ, ಧರ್ಮರಾಜನು ಒಳ್ಳೆಯದನ್ನೆ ಹೇಳುವನು. ಅದಕ್ಕೊಪ್ಪಿ ನಡೆದು, ನೀನು ಅರಸನಾಗಿ ರಾಜ್ಯವಾಳುತ್ತಾ ಸುಖದಿಂದಿರಲಾಗದೆ?"

ವ॥ ಈ ನುಡಿಯನ್ನು ಕೇಳಿ ಭೀಮಸೇನನೆಂದನು -

೪೭. "ನೀನು ಐದು ಊರು ಕೊಟ್ಟರೆ ಸಾಕು, ಸಂಧಿಮಾಡಿಸುತ್ತೇನೆಂದು ಹೋದಾಗ ಅದನ್ನೊಪ್ಪದ ಅಭಿಮಾನಶಾಲಿಯಾದ ಈತನು ತನ್ನ ತಮ್ಮಂದಿರನ್ನೂ ಮಕ್ಕಳನ್ನೂ ನೀಗಿ ಈಗ ಸಂಧಿ ಮಾಡಿಕೊಳ್ಳುವನೆ?"

ಎನೆ ದುರ್ಯೋಧನಂ ಭೀಮಸೇನನ ನುಡಿಯನೆ ಸಮರ್ಥಿಸಿ -

ಇನತನಯನ ನೇರ್ಪಿಂಗ ।
ರ್ಜುನನಂ ಮುಂ ಕೊಲ್ವೆನೆನ್ನ ತಮ್ಮನ ನೇರ್ಪಿಂ ॥
ಗನಿಲಜನಂ ಕೊಲ್ವೆಂ ಕಮ ।
ಲನಾಭ ನೇರ್ಪಿಂಗೆ ನೇರ್ಪುಗೊಳ್ಳದೆ ಮಾಣೆಂ ॥೪೮॥

ತಾಂ ಗಡ ಮಧ್ಯಸ್ಥಂ ನುಡಿ ।
ವಂ ಗಡ ಪುದುವಾಳ್ಕೆಯೆನಗಮವರ್ಗಂ ಸಂಧಾ ।
ನಂ ಗಡ ಸಂಧಿಯ ಮಾತಂ ।
ಲಂಘಿಸಿದೆಂ ಮುನ್ನಮಿನ್ನೊ[ಡಂ]ಬಟ್ಟಪೆನೇ ॥೪೯॥

ಎಂದು ನುಡಿ[ದು] ಕಂಜನಾಭನಸಮಂಜಸಿಕೆಯೊಳ್ ತನ್ನಂ ತೆಗಳ್ದು ನುಡಿದುದರ್ಕೇವೈಸಿ

ಅಂದು ಜರಾಸಂಧ [ನಿನಿನಿ ।
ತೊಂದು ಪರಾ]ಭವಮನೆಯ್ದಿ ಭೀಮನಂ ಮಱೆಯಂ ॥
ಬಂದು ಪುಗೆ ಕೊಂದು [ಕುಡಲೊಡ ।
ನಂದಿಂ ನೀಂ ದೇವನೆನಿಸಿ ದೊಡ್ಡಿದನಾದಯ್] ॥೫೦॥

ಅನುಪಮಫಲದೆ ಜನಾರ್ದನ ।
ನೆನಲಕ್ಕುಂ ಗುರುಜನಾರ್ದನಂ ಬಂಧುಜನಾ ।
ರ್ದನನೆಂದು ಪಾಪಫಲದಿಂ ।
ನಿನಗಾಯ್ತು ಪೆಸರ್ ನಿರರ್ಥಕಂ ವಾಕ್ಯಾರ್ಥಂ ॥೫೧॥

ವ॥ ಹೀಗೆನ್ನಲು ದುರ್ಯೋಧನನು ಭೀಮಸೇನನ ಮಾತನ್ನೆ ಅನುಮೋದಿಸಿ ಹೀಗೆಂದನು -

೪೮. "ಕರ್ಣನ ಸೇಡಿಗಾಗಿ ಅರ್ಜುನನನ್ನು ಕೊಲ್ಲುವೆನು. ನನ್ನ ತಮ್ಮನ ಸೇಡಿಗಾಗಿ ಭೀಮನನ್ನು ಕೊಲ್ಲುವೆನು. ಕೃಷ್ಣಾ, ಕೊಲೆಯ ಸೇಡನ್ನು ಕೊಲೆಯಿಂದಲೆ ತೀರಿಸಿಕೊಳ್ಳದೆ ಬಿಡುವವನಲ್ಲ.

೪೯. ಇವನೊಬ್ಬ ಮಧ್ಯಸ್ಥನಂತೆ ! ಅವರೊಡನೆ ನಾನು ಕೂಡಿಕೊಂಡು ಬದುಕಬೇಕಂತೆ ! ನನಗೂ ಅವರಿಗೂ ಸಂಧಿಯಂತೆ ! ಸಂಧಿಯ ಮಾತನ್ನು ಹಿಂದೆಯೆ ನಿರಾಕರಿಸಿದ ನಾನು ಈಗ ಒಪ್ಪುವುದುಂಟೆ ?"

ವ॥ ಹೀಗೆಂದು ನುಡಿದು, ತನ್ನನ್ನು ಕೃಷ್ಣನು ಅಯೋಗ್ಯವಾಗಿ ನಿಂದಿಸಿ ನುಡಿದುದಕ್ಕೆ ಸಿಡಿಮಿಡಿಗೊಂಡು -

೫೦. "ಪೂರ್ವದಲ್ಲಿ ಜರಾಸಂಧನಿಂದ ಪುನಃಪುನಃ ಸೋತು ಅವಮಾನಿತನಾದ ನೀನು ಭೀಮನ ಬೆನ್ನು ಬಿದ್ದೆ. ಅವನು ಜರಾಸಂಧನನ್ನು ಕೊಂದುಹಾಕಿ ನಿನಗೆ ದೊಡ್ಡಸ್ತಿಕೆಯನ್ನು ಕೊಟ್ಟ ಮೇಲಲ್ಲವೆ ನೀನು ದೇವನೆನಿಸಿದುದು ?

೫೧. ಅಸಾಧಾರಣವಾದ ಲೋಕಕಲ್ಯಾಣವನ್ನು ಮಾಡುವವನು ಜನಾರ್ದನ (ವಿಷ್ಣು)ನೆನಿಸುತ್ತಾನೆ. ಹಿರಿಯರನ್ನೂ, ಬಂಧುಗಳನ್ನೂ ಕೊಂದ ಪಾಪದ ಫಲವಾಗಿ ನೀನು

ಪುರುಷಾಕಾರಮದಿಲ್ಲಯ್ ।
ಹರಿ ನಿನ್ನೊಳ್ ಪುರುಷಕಾರಮಮಂ ಕಾಣೆಂ ಕಾ ॥
ಪುರುಷರ ಗಣನೆಗೆವಂದುಂ ।
ನರಂಗೆ ತೇರೆಸಗಿ ಮತ್ತೆ ಪುರುಷೋತ್ತಮನೇ ॥೫೨॥

ಬಿಟ್ದಿರುಮನಿಱಿವೆ ನೀನುಂ ।
ಬಿಟ್ದಿರುಮಂ ಕೊಲ್ವೆ ಕಲಹದೊಳ್ ಸೂಟೆಂಗಂ ॥
ದೆಬ್ಬಾಡಿಯೆ ಮುನಿದಿಸುವಯ್ ।
ಬಿಟ್ದಾನೆಯ ಕೋಡದೆರಡುಮಂ ಕಿಟ್ತಿಡುವಯ್ ॥೫೩॥

ವನವಾಸಮಲಿನನಂ ಯಮ ।
ತನಯನನುಜ್ಜ್ವಳಿಸಿ ಗೋತ್ರಧವಳನೆನೆನ್ನಂ ॥
ಘನಮಲಿನಂ ಮಾಡಿದೆ ಕೃ ।
ಷ್ಣ ನಿನ್ನವೊಲ್ ಶ್ವೇತಕೃಷ್ಣಕಾರಕರೊಳರೇ ॥೫೪॥

ನೀನುದಧಿಯೊಳೊರ್ವಳ್ ನೀ ।
ರ್ವಾಣಸೆಯಂ ಪಡೆದ ಗರ್ವದಿಂದಾನುಂ ಲ ॥
ಕ್ಷ್ಮೀನಿಳಯನೆನೆಂದಿರ್ದಪ ।
ಯಾನಱಿಯೆನೆ ನಿನ್ನ ಸಿರಿಯ ಮಹಿಮೆಯ ಪುರುಳಂ ॥೫೫॥

ಜನಾರ್ದನ (ಜನರನ್ನು ಹಿಂಸಿಸುವವ)ನೆಂಬ ಹೆಸರನ್ನು ಗಳಿಸಿದೆ. ನಿನ್ನಿಂದಾಗಿ 'ಜನಾರ್ದನ'ನೆಂಬ ಮಾತು ಅರ್ಥವನ್ನು ಕಳೆದುಕೊಂಡಿತು.

೫೨. (ಪರಮಾತ್ಮನೆಂದು ಹೇಳುವರಲ್ಲ - ಆ) ಸ್ವರೂಪ ನಿನ್ನಲ್ಲಿಲ್ಲ, ಅದು ಹೋಗಲಿ, (ಮನುಷ್ಯನಲ್ಲಿ ಇರಬೇಕಾದ) ಪೌರುಷವನ್ನೂ ನಿನ್ನಲ್ಲಿ ನಾನು ಕಾಣೆ. ಹೀನ ಮನುಷ್ಯನೆಂದು ಪರಿಗಣಿತನಾಗಿ, ಅರ್ಜುನನಿಗೆ ಸಾರಥಿಯಾಗಿ ಮತ್ತೆ ಪುರುಷೋತ್ತಮನೇ ನೀನು?

೫೩. ಬಿದ್ದವರನ್ನು ಇರಿದು ಕೊಲ್ಲುವವನು ನೀನು ; ಯುದ್ಧದಲ್ಲಿ ಕೆಳಗುರುಳಿದವರನ್ನು ಕೊಲ್ಲುವವನು ನೀನು ; ನಿನ್ನ ಸರದಿಗಾಗಿ ಆತುರಪಟ್ಟು ಕೋಪದಿಂದ ಕೊಲ್ಲುವವನು ನೀನು ; ಕೆಳಗುರುಳಿದ ಆನೆಯ ಕೋರೆಗಳೆರಡನ್ನೂ ಕಿತ್ತುಕೊಳ್ಳುವವನು ನೀನು.

೫೪. ಕಾಡಿನಲ್ಲಿ ಹುಟ್ಟಿದ ಯಮಪುತ್ರ (ಧರ್ಮರಾಜ)ನನ್ನು ಸದ್ವಂಶದವನೆಂದು ಗೌರವಿಸಿ, ಶುದ್ಧವಂಶದಲ್ಲಿ ಹುಟ್ಟಿದ ನನ್ನನ್ನು ಅತ್ಯಂತ ಕಲಂಕಿತನನ್ನಾಗಿ ಮಾಡಿದೆ. ಕೃಷ್ಣಾ, ನಿನ್ನಂತೆ ಬಿಳಿದನ್ನು ಕರಿದು ಮಾಡುವವರು ಇನ್ನಾರಾದರೂ ಉಂಟೆ?

೫೫. ಸಮುದ್ರದಿಂದ ಒಬ್ಬ ಜಲಕನ್ಯೆಯನ್ನು ತಂದುಕೊಂಡು ಲಕ್ಷ್ಮೀಪತಿಯೆಂದು ಹೇಳಿಕೊಳ್ಳುವೆ. ನಿನ್ನ ಲಕ್ಷ್ಮಿಯ ಮಹಿಮೆ ಏನೆಂದು ನನಗೇನು ಗೊತ್ತಿಲ್ಲವೆ?

ಯದುಕುಲಜಲನಿಧಿಯೊಳ್ ಪು ।
ಟ್ಟ[ದಿರ]ಮರ್ದುಂ ನಂಜುಮೊಡನೆ ಪುಟ್ಟುವವೋಲಂ ॥
ಕದ ಹಲಿಯುಂ ನೀನುಂ ಬಲ ।
ನದರ್ಕೆ ಗುಣಿಯಾದನತ್ತ ನೀಂ ನಿರ್ಗುಣಿಯಯ್ ॥೫೬॥

ಎಂಬನ್ನೆಗಮಾ ಪ್ರಸ್ತಾವದೊಳ್ -

ಹಲಮುಸಲಪಾಣಿ ಮಧುಪಾ ।
ಟಲನೇತ್ರಂ ನೀಲವಸನನಾ ಧವಳಾಂಗಂ ॥
ಬಲನೇಕಕುಂಡಲಂ ಕುರು ।
ಕುಲನಂ ಕೂಡಲ್ಕೆ ತಾಳಲಕ್ಷ್ಮಂ ಬಂದಂ ॥೫೭॥

ಅಂತು ಸುಯೋಧನಂಗೆ ಸೈಪು ಬರ್ಪಂತೆಯುಂ ಸಕಲಜಗತ್ಪವಿತ್ರತೀರ್ಥ ಸಲಿಲಸಂಪಾದಿತನಿಖಿಲಾಘಮರ್ಷಣಂ ಸಂಕರ್ಷಣಂ ಜಂಗಮಹಿಮಾಚಲಮೆ ಬರ್ಪಂತೆಯುಂ ಬಂದು ತಮ್ಮನಿಬರೊಂದಾಗಿ ಗೊಂದಣಿಸಿರ್ದ ಪಾಂಡುನಂದನರುಮಂ ಏಕಾಕಿಗನಾಗಿ ಸಾವಿಯ ದೇಸಿಗನಾಗಿ ನಿಂದ ಕುರುಕುಲಸ್ವಾಮಿಯುಮಂ ಕಂಡು ದೇವಕೀನಂದನನ ವದನಾರವಿಂದಮಂ ನೋಡಿ ವಿಸ್ಮಯಾಕ್ರಾಂತಚಿತ್ತನಾಗಿ ಮನದೊಳ್ ಕಟ್ಟುವಡೆದು ತನಗೆಱಗಿದ ಫಣಿರಾಜಕೇತನನಂ ಮನದೆಱಕದಿಂ ಪರಸಿ ಗರುಡಕೇತನನಂ ಪಾಂಡವರಯ್ವರುಮಂ ಪರಸಲೊಲ್ಲದೆ ಮುಳಿದು ತಮ್ಮನನವರಯ್ವರುಮಂ ನೋಡಿ -

೫೬. ಸಮುದ್ರದಲ್ಲಿ ಅಮೃತ ಹಾಗು ವಿಷ ಎರಡೂ ಹುಟ್ಟಿದಂತೆ, ಯಾದವ ವಂಶದಲ್ಲಿ ಶ್ರೇಷ್ಠನಾದ ಬಲರಾಮನೂ ನೀನು ಹುಟ್ಟಿ ಬಂದಿರಿ. ಬಲರಾಮನು ಗುಣವಂತನಾದನು. ನೀನೋ ಗುಣಹೀನನಾದೆ.”

ವ॥ ಹೀಗೆ ಅವನು ನುಡಿಯುತ್ತಿರುವಾಗ -

೫೭. ಹಲಾಯುಧ ಮುಸಲಾಯುಧಗಳನ್ನು ಹಿಡಿದುಕೊಂಡು, ಮದ್ಯಪಾನದಿಂದ ಕಣ್ಣು ಕೆಂಪೇರಿ, ತನ್ನ ಗೌರವರ್ಣದ ದೇಹಕ್ಕೆ ನೀಲವರ್ಣದ ವಸ್ತ್ರ ಶೋಭಿಸುತ್ತಿರಲಾಗಿ ತಾಳಧ್ವಜನಾದ ಬಲರಾಮನು ದುರ್ಯೋಧನನನ್ನು ಕೂಡಿಕೊಳ್ಳಲು ಬಂದನು.

ವ॥ ಎಲ್ಲ ತೀರ್ಥಜಲಗಳಿಂದ ಪವಿತ್ರನಾಗಿ, ನಡೆದಾಡುವ ಹಿಮಾಚಲವೆ ಬರುವಂತೆ ಸುಯೋಧನನೆಡೆಗೆ ಆತನ ಪುಣ್ಯವೆ ನಡೆದುಬರುವಂತೆ ಬಲರಾಮನು ಬಂದು, ಒಟ್ಟಾಗಿ ನಿಂತ ಪಾಂಡವರನ್ನೂ ಒಬ್ಬಂಟಿಗನಾಗಿ ಪರದೇಶಿಯಂತೆ ಅಸಹಾಯನಾಗಿ ನಿಂತ ಕೌರವರಾಜನನ್ನೂ ಕಂಡು, ಕೃಷ್ಣನ ಮುಖವನ್ನು ನೋಡಿ, ಬೆರಗಾಗಿ ಮನದಲ್ಲಿಯೆ ತುಂಬ ನೊಂದುಕೊಂಡು ತನಗೆ ನಮಸ್ಕರಿಸಿದ ದುರ್ಯೋಧನನನ್ನು ಹೃತ್ಪೂರ್ವಕವಾಗಿ ಹರಸಿದನು. ಆದರೆ ಕೃಷ್ಣನನ್ನೂ ಐವರು ಪಾಂಡವರನ್ನೂ ಹರಸಲೊಲ್ಲದೆ ಕೋಪದಿಂದ ಅವರೆಲ್ಲರನ್ನೂ ನೋಡಿ

ಜಲರುಹನಾಭನ ನಾಭಿಯೊ ।
ಳೊಳಗುಟಿದರ್ ನಿನ್ನ ಮಂತ್ರಬಲದಿಂ ಬ್ರಹ್ಮರ್ ।
ಪ್ರಳಯ[ದೊಳಿ]ನಿತುಂ ಕೌರವ ।
ಕುಲಚೂಡಾಮಣಿಯೊಳೇನನಾಲೋಚಿಸಿದಯ್ ॥೫೮॥

ಎಂದು ನುಡಿದ ಹಲಾಯುಧನ ನುಡಿಗೆ ಚಕ್ರಾಯುಧನಿಂತೆಂದಂ –

ಎನಗಭಿವಂದಿತಾರ್ಥರವಧಾರಿಸು ಚಿತ್ತದೊಳಗ್ರಜಾತ ನೀಂ ।
ಮುನಿಯದೆ ಪಾಂಡುನಂದನರ್ಗೆ ಬಾಡಮನಯ್ದನೆ ಬೇಡೆ ಪೋಗೆ ದ್ರೋ ॥
ಣನ ಧೃತರಾಷ್ಟ್ರಸಿಂಧುಸುತರೆಂದುದನೆನ್ನದೆ ನೀವಿದಂ ಸುಯೋ ।
ಧನನನೆ ಕೇಳಿ ನಂಬುವುದೆರಟ್ನುಡಿಯಂ ಫಣಿರಾಜಕೇತನಂ ॥೫೯॥

ಎನೆ ದುರ್ಯೋಧನನೆಂದನೇಕೆ ಮುನಿವಿರ್ ನಿರ್ದೋಷಿಗಳ್ ಪಾಂಡುನಂ ।
ದನರಾನೊಲ್ಲೆನೆ ಮುನ್ನಮೆಂದುಮವರೊಳ್ ಸಂಧಾನಮಂ ಪೇಟ್ವೆನೆಂ ॥
ದೆನೆ ಸತ್ತರ್ ತನುಜಾನುಜರ್ ಪಲವರುಂ ತದ್ದುಃಖಮಂ ಕಂಡೆನಿ ।
ನ್ನಿನಿತುಂ ಸೈರಿಪೆನೆಂತುಮಿರ್ಕೆ ಪಗೆವರ್ ಸನ್ನದ್ಧನಾಗಿರ್ದಪೆಂ ॥೬೦॥

ಇವರೆನ್ನನುವರಮಂ ನೋ ।
ಡುವುದಲ್ಲದೆ ಬೇಱೆ ಪೆಱವು ಮಾತಿಂಗೆಡೆಯಿ ॥
ಲ್ಲವಧಾರಿಪುದೆಂದೊಡೆ ಕೌ ।
ರವೇಂದ್ರನಂ ಮುಸಲಪಾಣಿ ಮನದೊಳ್ ಪೊಗಟ್ದಂ ॥೬೧॥

೫೮. "ಪ್ರಳಯಕಾಲದಲ್ಲಿ ನಿನ್ನ ಮಂತ್ರಶಕ್ತಿಯಿಂದ ಬ್ರಹ್ಮರನ್ನೆಲ್ಲ ವಿಷ್ಣುನಾಭಿಯ ಒಳಗೆ ಉಳಿಸಿದ ನೀನು, ಈಗ ಕೌರವಶ್ರೇಷ್ಠನ ವಿಷಯವಾಗಿ ಏನು ಆಲೋಚಿಸಿರುವೆ?"

ವ॥ ಎಂದು ನುಡಿಯಲಾಗಿ,ಕೃಷ್ಣನು ಹೀಗೆ ಉತ್ತರವಿತ್ತನು -

೫೯. "ಪೂಜ್ಯನಾದ ಅಣ್ಣನೆ, ಮನಸ್ಸನ್ನು ಕೋಪಕ್ಕೆ ಈಡುಮಾಡಿಕೊಳ್ಳದೆ ಚಿತ್ತೈಸು. ಪಾಂಡವರಿಗೆ ಐದು ಊರುಗಳನ್ನು ಕೊಟ್ಟರೆ ಸಾಕೆಂದು ಕೇಳಲು ನಾನು ಹೋದೆ. ದ್ರೋಣ, ಧೃತರಾಷ್ಟ್ರ, ಭೀಷ್ಮರೂ ಹೇಳಿದರು. ಅದನ್ನು ಇವನು ಒಪ್ಪಲಿಲ್ಲ. ಸುಯೋಧನನನ್ನೆ ಕೇಳಿ ಈ ಮಾತನ್ನು ಖಚಿತಪಡಿಸಿಕೊ. ಅವನು ಆಡಿದ ಮಾತನ್ನು ಅಲ್ಲಗಳೆಯುವವನಲ್ಲ."

೬೦. ಆಗ ದುರ್ಯೋಧನನೆಂದನು - "ನೀವೇಕೆ ಕೋಪಗೊಳ್ಳುವಿರಿ ? ಪಾಂಡವರಲ್ಲಿ ತಪ್ಪಿಲ್ಲ. ಹಿಂದೆಯೆ ಆಗಲಿ, ಈಗಾಗಲಿ ಪಾಂಡವರೊಡನೆ ಸಂಧಿಯೆಂಬುದು ನನಗೆ ಎಂದೆಂದಿಗೂ ಸಮ್ಮತವಲ್ಲ. ನನ್ನ ತಮ್ಮಂದಿರು ಸತ್ತರು, ಮಕ್ಕಳು ಸತ್ತರು, ಇನ್ನೂ ಅನೇಕರು ಸತ್ತರು. ಆ ದುಃಖವನ್ನೆಲ್ಲ ಕಂಡು ಇನ್ನೂ ಎಷ್ಟೆಂದು ನಾನು ಸಹಿಸಲಿ ? ಇರಲಿ, ವೈರಿಗಳನ್ನೆದುರಿಸಲು ಸಿದ್ಧನಿದ್ದೇನೆ.

೬೧. "ಇವರ ಹಾಗೂ ನನ್ನ ಯುದ್ಧವನ್ನು ನೋಡುತ್ತಿರಿ. ಇನ್ನು ಬೇರೆ ಮಾತಿಗೆ ಅವಕಾಶವೇ ಇಲ್ಲ. ಇದನ್ನು ಲಾಲಿಸಬೇಕು." ಈ ಮಾತನ್ನು ಕೇಳಿ ಬಲರಾಮನು ಮನದಲ್ಲಿಯೇ ಅವನನ್ನು ಹೊಗಳಿದನು.

ಅಂತು ಪೊಗೞ್ದು ರಾಜರಾಜನ ನಿರ್ವ್ಯಾಜಶೌರ್ಯಕ್ಕೆ ಸಂಕರ್ಷಣನಾಶ್ಚರ್ಯಂಬಟ್ಟು ಪೆಱತೇನುಮನೆನಲಱಿಯದೆ ಧರ್ಮನಂದನಾದಿಗಳ ಮೊಗಮಂ ನೋಡಿ- ನಿಮ್ಮಯ್ವರೊಳಾರಾಗಿಯುಮೀತನೊಳೊರ್ವನೆ ಕಾದುವುದು ಕಾದಿ ಗೆಲ್ದಿಂ ಬೞಿಯಂ ದುರ್ಯೋಧನಂ ನೆಲನನಾಳ್ಗೆ ಆತಂಗುೞಿದ ನಾಲ್ವರ್ ಬೆಸಕೆಯ್ದು ಬಾೞ್ವೆರೆಂದು ನುಡಿಯೆ ಭೀಮಸೇನ ನಿದಿರ್ಗೆವಂದು -

ಅಱಿಮುಗನಿರ್ಕರ್ಜುನನಿ ।
ರ್ಕಱಿಕೆಯ ಮಾದ್ರೀಸುತರ್ಕಳಿರ್ಕಟಿವಗೆಯಂ ॥
ಪಱಿಪಡಿಸಲ್ಕೆ ಹಲಾಯುಧ ।
ನೆಱಿದಿರ್ದಪೆನೆನಗೆ ತೋಱಿ ಬಿಡು ಕೌರವನಂ ॥೬೨॥

ಅಂತು ಮರುನ್ನಂದನಂ ರೋಹಿಣೀನಂದನಂಗೆ ನುಡಿದು ದ್ವಂದ್ವಯುದ್ಧಕ್ಕೆ ಧರ್ಮನಂದನಾದಿಗಳ ಮೊಗಮಂ ನೋಡಿ -

ಪಗೆಗೆ ಮೊದಲಿಗನೆನಾನಿಡು ।
ವಗೆ ಕೌರವನಂತದಕ್ಕೆ ನೀಮೆಲ್ಲಂ ದಾ ॥
ಯಿಗತನಮನಿಲ್ಲಿ ತೋಱಲ್ ।
ತಗದೀತಂ ಮುನ್ನಮೆನಗೆ ದೊರೆಯಾಗಿರ್ದಂ ॥೬೩॥

ಎಂಬುದುಂ ಕುರುಕುಲಾಚಲಪ್ರಳಯಕಾಲವಜ್ರಧರನೆನಿಸಿದ ಮಾರುತಿಗಂ ಪಾಂಚಾಲೀಕುಂಚಿತಕೇಶಪಾಶಾಕೃಷ್ಟಿಪಾತಕಪ್ರಧಾನನಿಹಿತಹಿತನೆನಿಸಿದ ಫಣಿರಾಜಕೇತನಂಗಂ ಧರ್ಮನಂದನಾದಿಗಳಿರ್ದು ಧರ್ಮಯುದ್ಧಮನೆ ಸಮಕಟ್ಟಿದಾಗಳ್ -

ವ॥ ಹೀಗೆ ಹೊಗಳಿ,ಚಕ್ರವರ್ತಿಯ ಸಹಜ ಶೌರ್ಯಕ್ಕೆ ಆಶ್ಚರ್ಯಪಟ್ಟು ಬೇರೆ ಯಾವ ಮಾತನ್ನೂ ಆಡಲರಿಯದೆ, ಧರ್ಮಾದಿಗಳ ಮುಖವನ್ನು ನೋಡಿ - "ನಿಮ್ಮ ಐವರಲ್ಲಿ ಯಾರಾದರೂ ಒಬ್ಬರು ದುರ್ಯೋಧನನೊಡನೆ ಯುದ್ಧ ಮಾಡಲಿ. ಯುದ್ಧದಲ್ಲಿ ಗೆದ್ದ ಬಳಿಕ ದುರ್ಯೋಧನನು ರಾಜ್ಯವಾಳಲಿ. ಉಳಿದ ನಾಲ್ವರು ಆತನಿಗೆ ಅಧೀನರಾಗಿ ಸೇವೆ ಮಾಡುತ್ತ ಬಾಳುವರು" ಎಂದನು. ಆಗ ಭೀಮಸೇನನು ಎದುರಿಗೆ ಬಂದು -

೬೨. "ಧರ್ಮರಾಜ, ಅರ್ಜುನ, ನಕುಲ, ಸಹದೇವ ಇವರಾರೂ ಬೇಡ. ಈ ದುಷ್ಟವೈರಿಯನ್ನು ಸೋಲಿಸುವುದಕ್ಕೆ ನಾನು ಸಿದ್ಧನಾಗಿದ್ದೇನೆ. ಬಲರಾಮಾ, ಕೌರವನನ್ನು ನನ್ನೊಡನೆ ಕಾಳಗಕ್ಕೆ ಬಿಡು."

ವ॥ ಎಂದು ನುಡಿದು, ದ್ವಂದ್ವಯುದ್ಧಕ್ಕೆ (ಅನುಮತಿ ಬೇಡಲು) ಧರ್ಮರಾಜಾದಿಗಳ ಮುಖ ನೋಡಿ -

೬೩. "ಶತ್ರುತ್ವಕ್ಕೆ ಮೊದಲ ಕಾರಣವಾದವನು ನಾನು. ನನಗೆ ಬದ್ಧ ವೈರಿ ಕೌರವನು. ಆದುದರಿಂದ ನೀವೆಲ್ಲ ಇಲ್ಲಿ ದಾಯಾದಿತನವನ್ನು ತೋರುವುದು ಯೋಗ್ಯವಲ್ಲ. ನನಗೆ ಈತನು ಮೊದಲಿಂದಲೂ ಸಮಜೋಡಿ."

ವ॥ ಎನ್ನಲಾಗಿ ಕೌರವವಂಶಪರ್ವತಕ್ಕೆ ಪ್ರಳಯಕಾಲದ ಇಂದ್ರನೆನಿಸಿದ

ಕ್ರಮಗಣನೆಗೆ ತಾನುಂ ಮ ।
ಧ್ಯಮಪಾಂಡವನಾದನಹಿತನೊಳ್ ತೊಟ್ಟ ಮಹಾ ॥
ಸಮರಕ್ಕೆ ನರಾಗ್ರಜನ ।
ಗ್ರಿಮಪಾಂಡವನಲ್ತೆ ಪಗೆಗೆ ಮೊದಲಪ್ಪುದಱಿಂ ॥೬೪॥

ವನರುಹನಾಭನ ಬಲದೇ ।
ವನ ಸಾಕ್ಷಿಯೊಳಿರ್ದು ಕೌರವೇಶ್ವರನಾ ಭೀ ॥
ಮನ ಕಯ್ವೊಯ್ದೊಡೆ ತದ್ದೇ ।
ವನಿಕಾಯಂ ಪೊಗಟ್ದುರದಟುಮಂ ಕುರುಪತಿಯಾ ॥೬೫॥

ಅಂತು ಧರ್ಮಯುದ್ಧಕ್ಕೆ ಕಯ್ವೊಯ್ದಾಗಳ್ -

ಎನಿತು ಕುರುಕ್ಷೇತ್ರದೊಳೆಡೆ ।
ಯನಿತುಂ ಬಱಿದಿಲ್ಲದಂತು ಶವಶತದಿಂ ತೆ ॥
ಕ್ಕನೆ ತೀವೆ ರಣೋತ್ಸವದಿಂ ।
ದನಿಲಸುತಂ ತಾನೆ ಸಮೆಱಿದಂ ಕೊಳ್ಗುಳಮಂ ॥೬೬॥

ರಥಮಿಲ್ಲದೆಯುಂ ಜಂಘಾ ।
ರಥದಿಂದೆ ಸಹಾಯರಿಲ್ಲದಿರ್ದೊಡಮುರ್ವೀ ॥
ಪ್ರಥಿತಭುಜಬಲಸಹಾಯದೆ ।
ಪೃಥಿವೀಪತಿ ತಾನೆ ಕಾದಲುದ್ಯುತನಾದಂ ॥೬೭॥

ಭೀಮನಿಗೂ, ದ್ರೌಪದಿಯ ಮುಡಿಗೆ ಅವಮಾನ ಮಾಡಿದ ಪಾತಕಿಯ ಪರಮಪ್ರಿಯನೆನಿಸಿದ ದುರ್ಯೋಧನನಿಗೂ ಪಾಂಡವರು ಧರ್ಮಯುದ್ಧವನ್ನು ನಿಶ್ಚಯಿಸಿದರು.

೬೪. ಜನ್ಮಕ್ರಮದಿಂದ ಕುಂತಿಯ ಮಕ್ಕಳಲ್ಲಿ ಭೀಮನು ನಡುವಿನವನಾದರೂ, ಶತ್ರುತ್ವಕ್ಕೆ ತಾನೇ ಮೊದಲಿಗನಾದುದರಿಂದ, ವೈರಿಯೊಡನೆ ಆರಂಭಿಸಿದ ಮಹಾಯುದ್ಧಕ್ಕೆ ಭೀಮನೆ ಹಿರಿಯ ಪಾಂಡವನಲ್ಲವೆ?

೬೫. ಕೃಷ್ಣ ಬಲರಾಮರ ಸಾಕ್ಷಿಯಾಗಿ ಕೌರವರಾಜನು (ಯುದ್ಧಾಹ್ವಾನದ ಚಿಹ್ನೆಯಾಗಿ) ಭೀಮಸೇನನ ಕೈಹೊಯ್ದನು. ದೇವತೆಗಳೆಲ್ಲ ಆತನ ಪರಾಕ್ರಮವನ್ನು ಹೊಗಳಿದರು.

ವ॥ ಹೀಗೆ ಧರ್ಮಯುದ್ಧಕ್ಕೆ ಕೈಹೊಯ್ದಾಗ -

೬೬. ಕುರುಕ್ಷೇತ್ರದಲ್ಲಿ ಎಲ್ಲೆಲ್ಲಿಯೂ ತೆರಪಿಲ್ಲದಂತೆ ನೂರಾರು ಹೆಣಗಳು ತುಂಬಿಕೊಂಡುದನ್ನು ನೋಡಿ, ಯುದ್ಧೋತ್ಸಾಹದಿಂದ ಭೀಮನು ಅವುಗಳನ್ನು ತಾನೇ ಸವರಿ ಕಾಳಗದ ಕಣವನ್ನು ಸಿದ್ಧಪಡಿಸಿದನು.

೬೭. ರಥವಿಲ್ಲದಿದ್ದರೂ ತನ್ನ ಕಾಲುಗಳೆ ರಥವೆಂದುಕೊಂಡು, ಸಹಾಯಕರಿಲ್ಲದಿದ್ದರೂ ಜಗತ್ಪ್ರಸಿದ್ಧವಾದ ತನ್ನ ತೋಳ್ಬಲದ ಸಹಾಯದಿಂದ, ಕೌರವರಾಜನು ಕಾಳಗಕ್ಕೆ ಅಣಿಯಾದನು.

ಸುರರಾಜಂಬೆರಸಷ್ಟದಿಕ್ಪತಿಗಳುಂ ಮೂವತ್ತುಮೂದೇವರುಂ ।
ಪರಮಬ್ರಹ್ಮನುಮಷ್ಟನಾಗಕುಲರುಂ ಚಂದ್ರಾರ್ಕರುಂ ಪಾರ್ವತೀ ॥
ಶ್ವರನುಂ ಷಣ್ಮುಖನುಂ ಗಜೇಂದ್ರಮುಖನುಂ ವಿದ್ಯಾಧರಾಧೀಶರುಂ ।
ನೆರೆದಿರ್ದರ್ ನಭದೊಳ್ ಕುತೂಹಲಯುತರ್ ನೋಡಲ್ ಗದಾ
ಯುದ್ಧಮಂ ॥೬೮॥

ಪುದುವೆತ್ತೆಕ್ಕಟಿಗಾಳೆಗಂ ಸಮನಿಸಿತ್ತೆಮ್ಮೀ ಗದಾಯುದ್ಧಮಂ ।
ತ್ರಿದಶರ್ ನೋಡಲೆ ಕೌತುಕಂಬೆರಸಿ ಬಂದಿರ್ದರ್ ನಭೋಭಾಗದೊಳ್ ॥
ಮದವದ್ವೈರಿಯನಿಕ್ಕಿ ಭೂವಳಯಮಂ ನಿಷ್ಕಂಟಕಂ ಮಾಳ್ಪೆನೆಂ ।
ಬುದನೆಂದಾಹವಲಂಪಟಂ ಮಸಗಿದಂ ಚಾಳುಕ್ಯಕಂಠೀರವಂ ॥೬೯॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯ ಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀ ಸಾಹಸಭೀಮ ವಿಜಯದೊಳ್ ಭೀಮಸುಯೋಧನಗದಾಯುದ್ಧವರ್ಣನಂ ಸಪ್ತಮಾಶ್ವಾಸಂ ಸಂಪೂರ್ಣಂ

೬೮. ಇಂದ್ರನೇ ಮೊದಲಾದ ಅಷ್ಟದಿಕ್ಪಾಲಕರೂ, ಮೂವತ್ತುಮೂವರು ದೇವತೆಗಳೂ, ಪರಮಬ್ರಹ್ಮನೂ, ಅಷ್ಟನಾಗೇಂದ್ರರೂ, ಸೂರ್ಯಚಂದ್ರರೂ, ಶಿವನೂ, ಷಣ್ಮುಖನೂ, ಗಣೇಶನೂ, ವಿದ್ಯಾಧರರಾಜರೂ (ಇವರಿಬ್ಬರ) ಗದಾಯುದ್ಧವನ್ನು ನೋಡುವ ಉತ್ಸಾಹದಿಂದ ಆಕಾಶದಲ್ಲಿ ನೆರೆದರು.

೬೯. "ಸರಿಜೋಡಿಯ ದ್ವಂದ್ವಯುದ್ಧ ಬಂದೊದಗಿದೆ. ನಮ್ಮ ಈ ಗದಾಯುದ್ಧವನ್ನು ನೋಡಲು ಉತ್ಸುಕರಾಗಿ ದೇವತೆಗಳು ಆಕಾಶದಲ್ಲಿ ಬಂದು ನಿಂತಿದ್ದಾರೆ. ನನ್ನ ವೈರಿಯನ್ನು ಹೊಡೆದು ಕೊಂದು, ಭೂಮಿಯೆಲ್ಲಾ ನಿಷ್ಕಂಟಕವಾಗುವಂತೆ (ದುಷ್ಟರ ಉಪದ್ರವವಿಲ್ಲದೆ ನೆಮ್ಮದಿಯಾಗಿರುವಂತೆ) ಮಾಡುವೆನು" ಎಂದು ಯುದ್ಧಪ್ರಿಯನಾದ ಭೀಮಸೇನನು ವಿಜೃಂಭಿಸಿದನು.

# ಅಷ್ಟಮಾಶ್ವಾಸಂ

ಶ್ರೀರಮಣಿಗೆ ನೆಲೆ ತನ್ನಯ ।
ಪೇರುರಮಂ ಮಾೞ್ಪೆನೆಂಬ ಬಗೆ ಮಿಗೆ ಸಮರ ॥
ಪ್ರಾರಂಭದೆ ಪೂಣ್ದಿರ್ದಂ ।
ಕೌರವಕುಲವಿಲಯಕೇತು ಸಾಹಸಭೀಮಂ ॥೧॥

ಅಂತು ಸಮರೋತ್ಸುಕಚಿತ್ತನಾಗಿ ಸಾಹಸಭೀಮಂ ದ್ರೋಣಾಚಾರ್ಯಂಗೆ ಮನದೊಳ್ ನಮಸ್ಕಾರಂಮಾಡಿ ದುರ್ಯೋಧನಂ ಬಲದೇವಂಗೆ ನಮಸ್ಕಾರಂಗೆಯ್ದು ಪಂಚಷಡಂಗುಲಾಯಾಮಮುಂ ಸಹಸ್ರಾಂಗುಲವಲಯನಿರ್ಮಿತಮುಮಷ್ಟಾಂಗುಲ ಸ್ಥೂಲಮೂಲಾಗ್ರಮುಮಪ್ಪುತ್ತಮಗದೆಯೊಳಂ ಚತುಃಷಡಂಗುಲಾಯಾಮಮುಂ ಶತಾಂಗುಲ ವಲಯಪರಿಮಿತಮುಂ ಚತುರಂಗುಲಾಗ್ರಮೂಲಮುಮಪ್ಪ ಮಧ್ಯಮಗದೆಯೊಳಂ ತ್ರಿಷಡಂಗುಲಾಯಾಮಮುಂ ಷಟ್ತ್ರಿಂಶದ್ವಲಯಾಂಗುಲಮುಂ ದ್ವ್ಯಂಗುಲಾಗ್ರಮೂಲಮು ಮಪ್ಪಧಮಗದೆಯೊಳಂ ತಾಮುತ್ತಮಪುರುಷರಪ್ಪುದಱಿಂ ತಮಗನುರೂಪಮಪ್ಪುತ್ತಮ ಗದೆಯೊಳಂ ದಶಾಂಗುಲಪರಿಣಾಹಾಗ್ರಕನತ್ಕನಕವಿಚಿತ್ರಾಲಂಕೃತಸ್ವರೂಪಸಮನ್ವಿತಂಗಳುಮಪ್ಪ ಗದೆಗಳುಮನಿರ್ವರುಮಾಯ್ದುಕೊಂಡು ಆಲೀಢಪ್ರತ್ಯಾಲೀಢಸಮಪಾದವೈಷ್ಣವಮಂಡಲಾಗ್ರ ಮುಮೆಂಬ ಪಂಚವಿಧಸ್ಥಾನಂಗಳೊಳಂ ವಾಮದಕ್ಷಿಣಬಾಹ್ಯಾಭ್ಯಂತರಾಸ್ಫಾಲನ ವಿಭೇದಂಗಳೊಳಂ ವಿಳಂಬಿತಮಾಕುಂಚಿತಮಾಸ್ಫೋಟಿತಮಾಕ್ಷಿಪ್ತಮುದ್ಭ್ರಾಮಿತಂದಿಗ್ಭ್ರಾಮಿತ ಮುಚಿತವಿರುದ್ಧಮಚಿಂತ್ಯಮುಮೆಂಬೆಣ್ಬುಂತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು –

೧. ಲಕ್ಷ್ಮಿಯನ್ನು ತನ್ನ ವಿಶಾಲವಾದ ಎದೆಯಲ್ಲಿ ನೆಲಸುವಂತೆ ಮಾಡುವೆನೆಂದು ಉತ್ಸಾಹದಿಂದ ಭೀಮಸೇನನು ಯುದ್ಧ ಪ್ರಾರಂಭದಲ್ಲಿಯೆ ಪ್ರತಿಜ್ಞೆ ಮಾಡಿಕೊಂಡಿದ್ದನು.

ವ॥ ಹೀಗೆ ರಣೋತ್ಸಾಹಿಯಾಗಿ ಭೀಮನು (ಗುರುಗಳಾದ) ದ್ರೋಣಾಚಾರ್ಯರಿಗೆ ಮನಸ್ಸಿನಲ್ಲಿಯೆ ನಮಸ್ಕಾರಮಾಡಿದನು. ದುರ್ಯೋಧನನು ಬಲರಾಮನಿಗೆ ನಮಸ್ಕರಿಸಿದನು. ಗದೆಗಳಲ್ಲಿ ಉತ್ತಮ, ಮಧ್ಯಮ ಮತ್ತು ಅಧಮ ಎಂದು ಮೂರು ವರ್ಗಗಳುಂಟು ; ಮೂವತ್ತು ಅಂಗುಲ ಉದ್ದವಾಗಿಯೂ, ಒಂದು ಸಾವಿರ ಅಂಗುಲ ಸುತ್ತಳತೆಯುಳ್ಳದಾಗಿಯೂ, ಎಂಟಂಗುಲ ಗಾತ್ರದ ತುದಿಯುಳ್ಳದು ಉತ್ತಮ ಗದೆ ; ಉದ್ದಳತೆ ಇಪ್ಪತ್ತುನಾಲ್ಕು ಅಂಗುಲ, ಸುತ್ತಳತೆ ನೂರಂಗುಲ ಹಾಗೂ ತುದಿ ನಾಲ್ಕಂಗುಲ ವಾಗಿರುವುದು ಮಧ್ಯಮ ಗದೆ ; ಉದ್ದಳತೆ ಹದಿನೆಂಟು ಅಂಗುಲ, ಸುತ್ತಳತೆ ಮೂವತ್ತಾರಂಗುಲ, ತುದಿ ಎರಡಂಗುಲವಾಗಿರುವುದು ಅಧಮ ಗದೆ. ಭೀಮ ದುರ್ಯೋಧನರು ಉತ್ತಮ ವೀರರಾದುದರಿಂದ ಹತ್ತಂಗುಲಗಳವರೆಗೆ ಮೇಲೆ ಚಿನ್ನದ ಕುಸುರಿ ಕೆಲಸದಿಂದ ಅಲಂಕೃತವಾದ ಉತ್ತಮ ಗದೆಗಳನ್ನು ತೆಗೆದುಕೊಂಡರು ; ಆಲೀಢ, ಪ್ರತ್ಯಾಲೀಢ, ಸಮಪಾದ, ವೈಷ್ಣವ, ಮಂಡಲಾಗ್ರ - ಎಂಬ ಐದು ಬಗೆಯ

ಸ್ಥಿರಬದ್ಧಮತ್ಸರರ್ ಭೀ ।
ಕರಬದ್ಧಭ್ರುಕುಟಿಘಟಿತತರದ್ಭುತರಟ್ಟಾ ॥
ಸುರರಧಿಕಕೋಪಪಾಟಲ ।
ಪರುಷೇಕ್ಷಣರೆನಿಸಿ ದೃಷ್ಟಿಯುದ್ಧಂಗೆಯ್ದರ್ ॥೨॥

ದೆಸೆದೇವತೆಗಳ್ಗೆ ಜಪಾ
ಪ್ರಸೂನಮಮಂ ರಕ್ತಬಲಿಯುಮಮಂ ತಾಂ ಕುಡುವಂ ॥
ತೆಸೆದಿರ್ದರ್ ಕಡೆಗಣ್ಣೊಳ್ ।
ಪಸರಿಸೆ ಕಡುಗೆಂಪು ಭೀಮದುರ್ಯೋಧನರಾ ॥೩॥

ಉರಿಯನುಗುಳ್ವಂತೆ ಬಿಸುನೆ ।
ತ್ತರನೆತ್ತಂ ಸೂಸುವಂತೆ ಬಿಚ್ಚನೆ ಬಿಟ್ಟ ॥
ರ್ದೆರಡುಂ ಕಣ್ಗಳೊಳವರೊ ।
ರ್ವರನೊರ್ವರ್ ನುಂಗುವಂತೆ ನೋಡಿದರೆನಸುಂ ॥೪॥

ಸ್ಥಾನಗಳಲ್ಲಿಯೂ[1] ವಾಮ, ದಕ್ಷಿಣ, ಬಾಹ್ಯ, ಅಭ್ಯಂತರ ಎಂಬ ಆಸ್ಫಾಲನ ಪ್ರಕಾರಗಳಲ್ಲಿಯೂ, ವಿಲಂಬಿತ, ಆಕುಂಚಿತ, ಆಸ್ಫೋಟಿತ, ಆಕ್ಷಿಪ್ತ, ಉದ್ಭ್ರಾಮಿತ, ದಿಗ್ಭ್ರಾಮಿತ, ಉಚಿತವಿರುದ್ಧ, ಅಚಿಂತ್ಯ ಎಂಬ ಎಂಟು ಬಗೆಯ ಪ್ರಹಾರಗಳಲ್ಲಿಯೂ ತುಂಬ ಪ್ರವೀಣರಾಗಿದ್ದ ಅವರು ವೈಶಾಖಸ್ಥಾನದಲ್ಲಿ[2] ನಿಂತು -

೨. ದೀರ್ಘಕಾಲದಿಂದ ಬಂದ ಮತ್ಸರದಿಂದ, ಅತ್ಯಂತ ಭೀಕರರಾಗಿ, ಭಯಾನಕ ವಾಗಿ ಹುಬ್ಬುಗಂಟಿಕ್ಕಿಕೊಂಡು, ಕೋಪಾಧಿಕ್ಯದಿಂದ ಕೆಂಪೇರಿದ ಕಠೋರದೃಷ್ಟಿಗಳಾಗಿ ದೃಷ್ಟಿಯುದ್ಧ ಮಾಡಿದರು.

೩. ದಿಗ್ದೇವತೆಗಳಿಗೆ ದಾಸವಾಳದ ಪುಷ್ಪಬಲಿಯನ್ನೂ, ರಕ್ತಬಲಿಯನ್ನೂ ಕಣ್ಣುಗಳಿಂದಲೆ ಸೂಸುತ್ತಿರುವರೊ ಏನೊ ಎಂಬಂತೆ ಭೀಮ ದುರ್ಯೋಧನರ ಕಣ್ಣುಗಳಲ್ಲಿ ವ್ಯಾಪಿಸಿದ ಕಡುಗೆಂಪು ಕಂಗೊಳಿಸಿತು.

೪. ಎತ್ತೆತ್ತಲೂ ಉರಿಯನ್ನು ಕಾರುವಂತೆ, ಬಿಸಿರಕ್ತವನ್ನು ಸೂಸುವಂತೆ ಅಗಲವಾಗಿ ಕಿಸಿದ ಕಣ್ಣುಗಳಿಂದ ಒಬ್ಬರನ್ನೊಬ್ಬರು ನುಂಗುವಂತೆ ನೋಡಿದರು.

---

೧. ನರ್ತನದಲ್ಲಿಯೂ, ಯುದ್ಧದಲ್ಲಿಯೂ ನಿಂತುಕೊಳ್ಳುವ ಐದು ಬಗೆಯ ರೀತಿಗಳಿಗೆ ಸ್ಥಾನ ಅಥವಾ ಸ್ಥಾನಕಗಳೆಂದು ಹೆಸರು. ಇವುಗಳಲ್ಲಿ 'ಆಲೀಢ'ವೆಂದರೆ ಬಲಗಾಲನ್ನು ಮುಂದೆ ಚಾಚಿ, ಎಡಗಾಲನ್ನು ಹಿಂದೆ ಮಣಿಸಿ ನಿಲ್ಲುವುದು. 'ಪ್ರತ್ಯಾಲೀಢ'ವೆಂದರೆ ಎಡಗಾಲನ್ನು ಮುಂದಕ್ಕೆ ಚಾಚಿ, ಬಲಗಾಲನ್ನು ಹಿಂದೆ ಮಣಿಸಿ ನಿಲ್ಲುವುದು. 'ಸಮಪಾದ'ವೆಂದರೆ ಎರಡೂ ಪಾದಗಳನ್ನು ಸಮವಾಗಿಟ್ಟು ಸಹಜವಾಗಿ ನಿಲ್ಲುವುದು. 'ವೈಷ್ಣವ'ವೆಂದರೆ ಒಂದು ಕಾಲನ್ನು ಸಮವಾಗಿರಿಸಿ ಅದರಿಂದ ಎರಡೂವರೆ ಗೇಣು ಅಂತರದಲ್ಲಿ ಇನ್ನೊಂದು ಕಾಲಿನ ಬೆರಳುಗಳನ್ನು ಪಾರ್ಶ್ವಕ್ಕೆ ಮಾಡಿ ನಿಲ್ಲುವುದು. 'ಮಂಡಲಾಗ್ರ' ವೆಂದರೆ ಕಾಲುಗಳನ್ನು ಒಂದು ಗೇಣಂತರವಿರುವಂತೆ ತ್ರಿಭಂಗಿಯಲ್ಲಿಟ್ಟು ಮೊಣಕಾಲನ್ನು ಎರಡೂವರೆ ಗೇಣು ಮೇಲಕ್ಕೆತ್ತಿ ಸೊಂಟಕ್ಕೆ ಸಮಮಾಡಿ ನಿಲ್ಲುವುದು.

೨. ವೈಶಾಖಸ್ಥಾನಕ : ಎರಡೂ ಪಾದಗಳ ನಡುವೆ ಒಂದು ಗೇಣಂತರವಿರುವಂತೆ ನಿಂತು ಕೊಳ್ಳುವುದು.

ಖಳದುಶ್ಶಾಸನಲೋಹಿತ ।
ಜಳಮಂ ಕುಡಿದೆನಸುಮಳ್ಕಿಸಲ್ಕಾಱದೆ ಕ ॥
ಣ್ಣೊಳೆ ಕಾಱುವಂತೆ ಕೌರವ ।
ಕುಳಾಂತಕಂ ತರಳತಾಮ್ರಲೋಚನನಾದಂ ॥೫॥

ಉದಯಾದ್ರಿಯುಮಸ್ತಾದ್ರಿಯು ।
ಮುದಗ್ರಕೋಪೋತ್ಕರಂಗಳಿರ್ಪಂತಿರೆ ನೀ ॥
ಳ್ದೊದವಿದರುನ್ನತಮೂರ್ತಿಗ ।
ಳೊದವಿ ಗದಾಯುಧದೆ ಭೀಮಭುಜಗಧ್ವಜರುಂ ॥೬॥

ಅಂತೊದವಿ –

ಕಿಱಿಕಿಱಿದೆ ಮೆಟ್ಟಿ ಮುಂದಂ ।
ಕಿಱಿಕಿಱಿದನೆ ಸಾರ್ಚಿ ತಮ್ಮ ಗದೆಗಳನಾಗಳ್ ॥
ಕಿಱಿಕಿಱಿದೆ ತಿರುಪಿ ಮಾಣದೆ ।
ಕಿಱಿಕಿಱಿದನೆ ತೂಂಕಿ ತೂಂಕಿ ನೂಂಕಿದರೆನಸುಂ ॥೭॥

ಎಡದಡಿಯಂ ಪುಗಿಸುವ ಬಲ ।
ದಡಿಯಂ ಪೊಱಗಿಡುವ ದಂಡೆಯಂ ನಿಟ್ಟಿಸುವ ಕಯ್ ॥
ನಡುಗದೆ ಗದೆಯಂ ಬೀಸುವ ।
ಬೆಡಂಗು ರಂಜಿಸಿತು ಭೀಮದುರ್ಯೋಧನರಾ ॥೮॥

೫. ದುಷ್ಟ ದುಶ್ಶಾಸನನ ರಕ್ತವನ್ನು ಕುಡಿದು ಅದನ್ನು ಜೀರ್ಣಿಸಿಕೊಳ್ಳಲಾಗದೆ ಕಣ್ಣಲ್ಲಿಯೆ ಕಾರುವನೊ ಏನೊ ಎಂಬಂತೆ ಕೌರವಕುಲನಾಶಕನಾದ ಭೀಮನ ಕಣ್ಣುಗಳು ಕಡುಗೆಂಪಾಗಿದ್ದುವು.

೬. ಉದಯಾದ್ರಿ ಅಸ್ತಾದ್ರಿಗಳು ಪ್ರಚಂಡ ಕ್ರೋಧದಿಂದ ಒಂದನ್ನೊಂದು ಎದುರಿಸಿದಂತೆ ಗದಾಯುದ್ಧಸನ್ನದ್ಧರಾಗಿ ಉನ್ನತಾಕಾರದ ಭೀಮಸೇನ ದುರ್ಯೋಧನರು ಎದುರೆದುರಾಗಿ ನಿಂತರು.

ವ॥ ಹಾಗೆ ಸಿದ್ಧರಾಗಿ -

೭. ಸ್ವಲ್ಪ ಸ್ವಲ್ಪವಾಗಿ ಮುಂದೆ ಹೆಜ್ಜೆಯಿಟ್ಟು, ಸ್ವಲ್ಪ ಸ್ವಲ್ಪವಾಗಿ ಗದೆಗಳನ್ನು ಚಾಚಿ, ನಸುನಸುವೆ ತಿರುಗಿಸಿ, ನಸುನಸುವೆ ಮುನ್ನುಗ್ಗಿದರು.

೮. ಎಡಪಾದವನ್ನು ಒಳಗಿಡುವ, ಬಲಪಾದವನ್ನು ಹೊರಗಿಡುವ, ಮುಷ್ಟಿಯಲ್ಲಿ ಗದೆ ಹಿಡಿದು ಎತ್ತಿ ನೀಡುವ, ಕೈ ನಡುಗದೆ ಗದೆಯನ್ನು ಬೀಸುವ ಭೀಮ ದುರ್ಯೋಧನರ ಬೆಡಗು ಕಂಗೊಳಿಸಿತು.

ಕಡುಕೆಯ್ದು ಕುತ್ತೆ ವಂಚಿಸಿ ।
ಬಿಡೆ ಬೀಸಿದೊಡೊಡನೆ ಬೀಸಿ ನಿಮಿರ್ದಡಿ ಕಾಲಿ ॥
ಟ್ಟಡಿಗಿಡೆ ನಿಘಾತದಿಂ ಪೊ ।
ಯ್ದೊಡಾಂಕೆಗೊಂಡಣ್ಮಿ ಕಾದಿದರ್ ಕಡುಗಲಿಗಳ್ ॥೯॥

ಪದಘಾತಕ್ಕವನೀತಳಂ ಕಟಿಲೆ ಪಾತಾಳಾಬ್ಧಿ ತಳ್ಳಂಕಗೊಂ ।
ಡುದದೇಕೆಂದನಲೂರ್ಧ್ವಲೋಕದೊಳಮಾಯ್ತತ್ಯದ್ಭುತಭ್ರಾಂತಿಯೆಂ ॥
ಬುದನೆಂಬನ್ನೆಗಮಂತದೇಂ ಭುವನಮಂ ಪರ್ಯಾಕುಲಂ ಮಾಡಲಾ ।
ದುದೊ ದುರ್ಯೋಧನಭೀಮಸೇನರ ಗದಾಯುದ್ಧಂ ಕುರುಕ್ಷೇತ್ರದೊಳ್ ॥೧೦॥

ಧಪ್ಪರಿ ಧಟ್ಟುಂ ಪೊಟ್ಟೆನೆ ।
ಧೊಪ್ಪಧೊಗಪ್ಪೆನೆ ದಿಧಿಲ್‌ಬುಧಿಲ್ಲೆನೆ ಮೆಯ್ಗಳ್ ॥
ಸೊಪ್ಪುಸೊವಡಪ್ಪಿನಂ ಸೂಟಿ್ ।
ತಪ್ಪದೆ ಕಡುಕೆಯ್ದು ಪೊಯ್ದರೊರ್ವರನೊರ್ವರ್ ॥೧೧॥

ಪಗಲುಳ್ಕಮುಳ್ಕುವಂದದಿ ।
ನೊಗೆವ ಗದಾಶಲ್ಕಮುಳ್ಕೆ ಕಣ್ಣಂ ಮುಚ್ಚಲ್ ॥
ಬಗೆಯೆ ದಿವಿಜರ್ ಗದಾಹವ ।
ಮಗುರ್ವುಮದ್ಭುತಮುಮಾಯ್ತು ಕುರುಪಾಂಡವರಾ ॥೧೨॥

೯. ರಭಸದಿಂದ ಪ್ರಹಾರ ಮಾಡಲಾಗಿ, ಅದರಿಂದ ತಪ್ಪಿಸಿಕೊಂಡು, ಗದೆಯನ್ನು ಬೀಸಿದೊಡನೆ ಪ್ರತಿಯಾಗಿ ಬೀಸುತ್ತ ನಿಮಿರಿ ನಿಂತ ಕಾಲಿಗೆ ಹೊಡೆಯಲಾಗಿ, ಅದನ್ನು ಆತುಕೊಂಡು, ಪರಾಕ್ರಮದಿಂದ ಆ ವೀರರು ಹೋರಾಡಿದರು.

೧೦. ಹೆಜ್ಜೆಯ ಘಟ್ಟಣೆಗೆ ಭೂಮಿ ನಡುಗಿತು ; ಪಾತಾಳದ ಸಮುದ್ರ ಅಲ್ಲೋಲಕಲ್ಲೋಲವಾಯಿತು ; ಅಷ್ಟೇ ಅಲ್ಲದೆ, ಊರ್ಧ್ವಲೋಕದಲ್ಲಿಯೂ ಅದ್ಭುತವಾದ ಗಾಬರಿಯುಂಟಾಯಿತು. ಹೀಗೆ ಕುರುಕ್ಷೇತ್ರದಲ್ಲಿ ನಡೆಯುವ ಭೀಮ ದುರ್ಯೋಧನರ ಗದಾಯುದ್ಧವು ಮೂರುಲೋಕಗಳನ್ನು ಉದ್ವಿಗ್ನಗೊಳಿಸಿತು.

೧೧. ಧಪ್ಪೆಂದು, ಪೊಟ್ಟೆಂದು, ಧಪ್ಪಧೊಗಪ್ಪೆಂದು, ದಿಧಿಲ್‌ಬೊಧಿಲ್ಲೆಂದು ಮೈಗಳು ನುಗ್ಗುನುಗ್ಗಾಗುವಂತೆ ಒಬ್ಬರನ್ನೊಬ್ಬರು ಆವೇಶದಿಂದ ಹೊಡೆದರು.

೧೨. ಹಗಲು ಹೊತ್ತಿನಲ್ಲಿಯೆ ಉಲ್ಕೆಗಳು ಹೊಮ್ಮಿದಂತೆ ಗದೆಗಳಿಂದ ಚಕ್ಕೆಗಳು ಚಿಮ್ಮಲಾಗಿ (ನೋಡಲು ಬಂದು ಆಕಾಶದಲ್ಲಿ ನೆರೆದ) ದೇವತೆಗಳು ಗಾಬರಿಯಾಗಿ ಕಣ್ಣು ಮುಚ್ಚಲೆಳಸಿದರು. ಹೀಗೆ ಅವರಿಬ್ಬರ ಗದಾಯುದ್ಧವು ಭಯಾನಕವೂ ಅದ್ಭುತವೂ ಆಯಿತು.

ಗದೆ ಗದೆಯಂ ಘಟ್ಟಿಸೆ ಪು ।
ಟ್ಟಿದ ಕೆಂಡದ ಕಿಡಿಯ [ತಂಡ] ವೆಣ್ಬುಂ ದೆಸೆಯಂ ॥
ಪುದಿಯೆ ಪದಧೂಳಿ ಗಗನದೊ ।
ಳೊದವೆ ಸುರರ್ ಬೆದಱೆ ಕಾದಿದರ್ ಕಡುಗಲಿಗಳ್ ॥೧೩॥

ಕುರುಭೂಮಿಯೆ ಖಟ್ಗಡಿಗಳ್ ।
ಸುರಿಯೆ ಗಳಜ್ಯೋದರಾಗಿಳಿಗಳ್ ಕೊಟಕರಾ ॥
ಗಿರೆ ಮುಂಬುಗಳೆದು ಕಾದಿದ ।
ರರಿಬಿರುದರ್ ಕಾದುವಂತೆ ಕುರುಪಾಂಡುಸುತರ್[೩] ॥೧೪॥

ಅಡಿಯಂ ಕಿಱುದೊಡೆಯಂ ಪೆ ।
ರ್ದೊಡೆಯಂ ಪೊಱವಾಱನುಡಿಯನುರಮಂ ಮುಯ್ವಂ ।
ಮುಡುಪಂ ಬೆನ್ನಂ ಕೊರಲಂ ।
ನಡುನೆತ್ತಿಯನೆತ್ತಿ ಪೊಯ್ದರೊರ್ವರನೊರ್ವರ್ ॥೧೫॥

ತಡದಿಂ ಕಿತ್ತಡಿಯೆಂ[ತ್ತಡಮೆಂ]ಬುದ ।
ದಡಿಗಿಡೆ ಪೊಕ್ಕೊಳಗು ಪೊಱಗು ಬಲನೆಡನೆಂಬೀ ॥
ಯೆಡೆಯಱೆದು ಮೆಯ್ಗಳಂ ಸೂಟ್ ।
ತಡಮಾಡದೆ ಕಾಯ್ದು ಪೊಯ್ದರೊರ್ವರನೊರ್ವರ್ ॥೧೬॥

೧೩. ಗದೆಗೆ ಗದೆ ಅಪ್ಪಳಿಸಲಾಗಿ ಹುಟ್ಟಿದ ಕೆಂಡದ ಕಿಡಿಗಳು ಎಂಟೂ ದಿಕ್ಕುಗಳನ್ನು ತುಂಬಿ, ಅವರ ಕಾಲಿಂದೆದ್ದ ದೂಳಿ ಆಕಾಶಕ್ಕೇರಲಾಗಿ ದೇವತೆಗಳು ಬೆದರುವಂತೆ ಆ ವೀರರು ಕಾದಿದರು.

೧೪. ಕುರುಭೂಮಿಯಲ್ಲಿ ಕಿಡಿಗಳು ಸುರಿಯುತ್ತಿರಲಾಗಿ ಬಲರಾಮ - ಕೃಷ್ಣ ಮೊದಲಾದವರೆ ನೋಟಕರಾಗಿರಲಾಗಿ, ಬಿರುದಿನ ಕಲಿಗಳು ಕಾದಾಡುವಂತೆ ಭೀಮದುರ್ಯೋಧನರು ನಿಖರವಾಗಿ ಕಾದಿದರು.

೧೫. ಪಾದ, ಕಿರುದೊಡೆ, ತೊಡೆ, ನಿತಂಬ, ಸೊಂಟ, ಎದೆ, ಹೆಗಲು, ಭುಜ, ಬೆನ್ನು, ಕೊರಳು, ನಡುನೆತ್ತಿ - ಹೀಗೆ ಎಲ್ಲದರ ಮೇಲೆ ಒಬ್ಬರನ್ನೊಬ್ಬರು ಗದೆಯೆತ್ತಿ ಹೊಡೆದರು.

೧೬. 'ತಡ'ವೆಂಬ ವಿಧಿಯಿಂದ 'ಕಿತ್ತಡ', ಎಂಬ ಗತಿಯನ್ನು ಭೇದಿಸಿ ಹೊಕ್ಕು ಒಳಗು, ಹೊರಗು, ಬಲ ಮತ್ತು ಎಡ ಎಂಬ ಎಡೆಗಳನ್ನು ಅರಿತು ಕೋಪಾವೇಶದಿಂದ ಕ್ರಮತಪ್ಪದೆ ಒಬ್ಬರು ಇನ್ನೊಬ್ಬರ ಮೈಯನ್ನು ಹೊಯ್ದರು.

---

೩. ಈ ಪದ್ಯದ ಮೊದಲೆರಡು ಚರಣಗಳನ್ನು ಹೀಗೆ ತಿದ್ದಿಕೊಳ್ಳಬಹುದೆ ?

ಕುರುಭೂಮಿಯೊಳೊಳ್ಗಿಡಿಗಳ್ ।
ಸುರಿಯೆ ಬಳಾಚ್ಯೋದರಾದಿಗಳ್ನೋಟಕರಾ ॥

ವಾರಣರಕ್ತಸಿಕ್ತಮೃಗರಾಜಯುಗಕ್ಕೆ ನವಪ್ರಸೂನರಾ ।
ಗಾರುಣಕಿಂಶುಕದ್ರುಮಯುಗಕ್ಕೆ ಸಧಾತುಕುಭೃದ್ಯುಗಕ್ಕೆ ಸಿಂ ॥
ದೂರಿತಗಂಧಸಿಂಧುರಯುಗಕ್ಕೆಣೆಯೆಂಬಿನಮಣ್ಮಿ ಕಾದಿದರ್ ।
ಕೌರವರಾಜನುಂ ಕುರುಕುಲಾಂತಕನುಂ ರುಧಿರಾಕ್ತಮೂರ್ತಿಗಳ್ ॥೧೭॥

ಕರಿಯಂ ನುಂಗಿ ಕಳಿಂಗನಂ ನೊಣೆದ ದರ್ಪಕ್ಕೊಂದುಗೊಳ್ ಮತ್ಸಹೋ ।
ದರರಂ ಕೋಪದೆ ತಿಂದುದರ್ಕೆರಡುಗೊಳ್ ದುಶ್ಶಾಸನೋರಸ್ಸ್ಥಳ ॥
ಕ್ಷರದಸ್ರಾಂಬುವನಾರ್ದು ಪೀರ್ದ ಮುಳಿಸಿಂಗಂ ಮೂಱುಗೊಳ್ಳೆಂದು ಮ ।
ಚ್ಚರದಿಂದೋವದೆ ಪೊಯ್ದನೆತ್ತಿ ಗದೆಯಂ ದುರ್ಯೋಧನಂ ಭೀಮನಂ ॥೧೮॥

ಎಂದು ಮುಟ್ಟ ಮೂದಲಿಸೆ -

ಇದು ಲಾಕ್ಷಾಗೇಹದಾಹಕ್ಕಿದು ವಿಷಮವಿಷಾನ್ನಕ್ಕಿದಾ ನಾಡ ಜೂದಿಂ ।
ಗಿದು ಪಾಂಚಾಲೀಪ್ರಪಂಚಕ್ಕಿದು ಕೃತಕಸಭಾಲೋಕನಭ್ರಾಂತಿಗೆಂದೋ ॥
ವದೆ ಪೊಯ್ದಂ ಕಾಲ್ಗಳಂ ತೋಳ್ಗಳನಗಲುರಮಂ ಕೆನ್ನೆಯಂ ನೆತ್ತಿಯಂ ಕೋ ।
ಪದೊಳಯ್ದುಂ ದುರ್ಣಯಕ್ಕಯ್ದೆಡೆಯನುರುಗದಾದಂಡದಿಂ ಭೀಮಸೇನಂ ॥೧೯॥

ಅಂತು ಪೊಯ್ದೊಂದುಮಂ ಬಗೆಯದೆ -

೧೭. ಆನೆಯ ರಕ್ತ ಮೆತ್ತಿಕೊಂಡ ಸಿಂಹಗಳಿಗೆ, ಹೊಸ ಹೂಗಳಿಂದ ಕೆಂಪಡರಿದ ಮುತ್ತುಗದ ಮರಗಳಿಗೆ ಜಾಜುಗಲ್ಲಿನ ಹುಡಿಯಿಂದ ತುಂಬಿದ ಬೆಟ್ಟಗಳಿಗೆ, ಸಿಂದೂರ (ಕುಂಕುಮ) ದಿಂದ ಅಲಂಕೃತವಾದ ಗಂಧಗಜಗಳಿಗೆ ಸದೃಶರೆಂಬಂತೆ ಮೈಯೆಲ್ಲ ರಕ್ತವಾದ ಭೀಮದುರ್ಯೋಧನರು ಕಾದಿದರು.

೧೮. 'ಆನೆಯ ಪಡೆಯನ್ನು ನುಂಗಿ ಕಳಿಂಗರಾಜನನ್ನು ಕೊಂದ ದರ್ಪಕ್ಕೆ ಇಕೊ ಒಂದು ಪ್ರಹಾರ ; ಕ್ರೋಧದಿಂದ ನನ್ನ ತಮ್ಮಂದಿರನ್ನು ತಿಂದುದಕ್ಕೆ ಹಿಡಿ, ಈ ಎರಡನೆಯ ಪ್ರಹಾರ ; ದುಶ್ಶಾಸನನ ಎದೆಯ ರಕ್ತವನ್ನು ಆರ್ಭಟಿಸಿ ಹೀರಿದ ಕೋಪಕ್ಕೆ ಇದೊ, ಈ ಮೂರನೆಯ ಹೊಡೆತ - ಎಂದು ನಿಷ್ಕರುಣವಾಗಿ ಗದೆಯನ್ನು ಎತ್ತೆತ್ತಿ ದುರ್ಯೋಧನನು ಭೀಮನನ್ನು ಹೊಡೆದನು.

ವ॥ ಹೀಗೆ ಹಂಗಿಸಿ ನುಡಿಯಲಾಗಿ -

೧೯. "ಇದು ಅರಗಿನ ಮನೆಯ ಬೆಂಕಿಗಾಗಿ, ಇದು ಘೋರವಾದ ವಿಷಾನ್ನಕ್ಕೆ, ಇದು ಆ ಮೋಸದ ಜೂಜಿಗೆ, ಇದು ದ್ರೌಪದಿಯ ಅವಮಾನಕ್ಕೆ, ಇದು ಸಭಾಲೋಕನದ ಕಪಟತಂತ್ರಕ್ಕೆ" ಎಂದು ಕ್ರೂರವಾಗಿ ಕಾಲುಗಳನ್ನೂ, ತೋಳುಗಳನ್ನೂ,ಎದೆಯನ್ನೂ, ಕೆನ್ನೆಯನ್ನೂ, ನೆತ್ತಿಯನ್ನೂ - ಐದು ದುಷ್ಕೃತ್ಯಗಳಿಗೆಂದು ದೇಹದ ಐದು ಸ್ಥಳಗಳನ್ನು ಭೀಮನು ತನ್ನ ಪ್ರಚಂಡ ಗದೆಯಿಂದ ಹೊಯ್ದನು.

ವ॥ ಹೀಗೆ ಬಿದ್ದ ಪ್ರಹಾರಗಳನ್ನೆಷ್ಟೂ ಗಮನಿಸದೆ -

ಚರಣಾಕ್ರಾಂತಂ ಮಹೀಮಂಡಲಮದಿರೆ ಭುಜಾಕ್ರಾಂತಮಾಶಾಗಜೇಂದ್ರೋ
ತ್ಕರಮಾಶಾಭಿತ್ತಿಯಿಂದಂ ಪೆಱದೆಗೆಯೆ ಗದಾಕ್ರಾಂತಮುದ್ಭ್ರಾಂತವಿದ್ಯಾ ॥
ಧರಚಕ್ರಂ ಗೆಂಟುಗೆಂಟಾಗಿರಿಸೆ ನಿಜವಿಮಾನಂಗಳಂ ಭೈರವಾಡಂ
ಬರಮಾಕಲ್ಪಾಂತಕಾಲಂ ನೆಗೞ್ದುದು ಸಮರಂ ಭೀಮದುರ್ಯೋಧನೀಯಂ॥೨೦॥

ಅಂತಿರ್ವರ ಗದಾಪಟ್ಟಸಪರಿಘಸಂಘಟ್ಟನದಿಂದೊಗೆದು ನೆಗಬ್ವ ಕಿಡಿಯ ಕೆಂಡಂಗಳ [ತಂ]ಡಂಗಳನೊಳಕೊಂಡು ಗಗನಮಂಡಲದೊಳ್ ಪೊಗೆ ನೆಗೆದು ಮಹೋತ್ಪಾತಕೇತು ಚಕ್ರದಂತೆ ಸುಟ್ಟುಱಿಗಾಳಿಯೊಳ್ ಸುಟೆಗೊಂಡು ತಱಗೆಲೆಗಳ್ ಪಾಱುವಂತೆ ದೆಸೆದೆಸೆಗೆ ಪಾಱುವ ಘನಾಘನಚಕ್ರದಿಂದುಳ್ಕುಲ್ಕಾಕಾರಮಾಗೆ ಚಕ್ರಾಕಾರದಿನೊಗೆವ ದಿಶಾಚಕ್ರದಿಂ ಆ ಸಕಲಕುಲಾಚಲಚಕ್ರದೊಳಗೆ ಕುರುರವಚಕ್ರದಿಂದಂ ತಿಱನೆ ತಿರುಗುವ ಧರಾಚಕ್ರ ಭ್ರಾಂತಿಯೊಳ್ ತಮಗೆ ಚಿತ್ತಭ್ರಾಂತಿಯಾಗೆ ದೀರ್ಘೋಷ್ಣ ಪೂತ್ಕಾರಂಗೆಯ್ವ ನಾಗರಾಜಚಕ್ರದಿಂ ಪುಷ್ಟಮಾದ ಸಪ್ತಸಾಗರಸಲಿಲದೊಳ್ ಮಲಮಲನೆ ಮಱುಗುವ ಜಲವಿಚರಚಕ್ರ ದಿನತಿಭಯಂಕರಮುಮದ್ಭುತಮುಮಾಗೆ ಕಾದುತ್ತಿರ್ಪಲ್ಲಿ -

ಅನುಸಮಮಾಯ್ತೆನೆ ದುರ್ಯೋ ।
ಧನಶಬ್ದಂ ಭೀಮಶಬ್ದಮನ್ವರ್ಥಂ ಭೀ ॥
ಮನೆ ಗಡ ದುರ್ಯೋಧನನೆಂ ।
ದೆನೆ ಕೌರವಭೀಮಸೇನರೇಂ ಸಮಬಲರೋ ॥೨೧॥

೨೦. ಪಾದಘಟ್ಟನೆಗೆ ಒಳಗಾಗಿ ಭೂಮಂಡಲ ಗದಗುಟ್ಟಿತು ; ತೋಳುಗಳ ಬೀಸಾಟಕ್ಕೆ ಹೆದರಿ ದಿಗ್ಗಜಗಳು ಹಿಮ್ಮೆಟ್ಟಿದವು ; ಗದೆ ತಿರುಗುವ ರಭಸಕ್ಕೆ ಗಾಬರಿಗೊಂಡ ವಿದ್ಯಾಧರರು ತಮ್ಮ ವಿಮಾನಗಳನ್ನು ದೂರ ದೂರಕ್ಕೆ ತಳ್ಳಿಕೊಂಡು ಹೋದರು. ಹೀಗೆ ಭೀಮ ದುರ್ಯೋಧನರ ಯುದ್ಧವು ಭೀಕರವಾಗಿ ಪ್ರಳಯಸದೃಶವಾಗಿ ಬಹುದೀರ್ಘಕಾಲ ನಡೆಯಿತು.

ವ॥ ಹೀಗೆ ಇಬ್ಬರ ಗದೆಗಳ ಪರಸ್ಪರ ಸಂಘಟ್ಟನದಿಂದ ಹುಟ್ಟಿ ಸಿಡಿಯುವ ಕಿಡಿಯ ಕೆಂಡಗಳನ್ನೊಳಗೊಂಡು, ಆಕಾಶದಲ್ಲೆಲ್ಲ ಹೊಗೆಯೆದ್ದು, ಉತ್ಪಾತಸೂಚಕವಾದ ಕೇತುಸದೃಶವಾಗಿ, ಸುಂಟರಗಾಳಿಗೆ ಸಿಕ್ಕಿದ ತರಗೆಲೆಗಳು ಹಾರುವಂತೆ ದಿಕ್ಕುದಿಕ್ಕಿಗೆ ಹಾರುತ್ತ ಉಲ್ಕೆಯಂತೆ ವರ್ತುಲಾಕಾರವಾಗಿ ಸುತ್ತುವ ಮೋಡಗಳ ಹಿಂಡಿನಿಂದ ದಿಕ್ಕುಗಳು ತುಂಬಲಾಗಿ, ಪರ್ವತಗಳಲ್ಲೆಲ್ಲ ಎದ್ದ ಕೋಲಾಹಲ ಧ್ವನಿಯಿಂದ ಭೂಮಿಯೆ ತಿರುಗುತ್ತಿದೆಯೆಂಬ ಭ್ರಾಂತಿಯಿಂದ ಸರ್ಪಗಳು ದೀರ್ಘವಾಗಿ ಬಿಸಿಯುಸಿರಿಂದ ಬುಸುಗುಟ್ಟಲಾಗಿ, ಕುದಿಯೆದ್ದ ಏಳೂ ಸಮುದ್ರಗಳ ನೀರಿನಲ್ಲಿ ಜಲಚರಗಳು ಕತಕತನೆ ಬೇಯಲಾಗಿ ; ಅತ್ಯಂತ ಭಯಾನಕವಾಗಿಯೂ, ಅದ್ಭುತವಾಗಿಯೂ, ಇವರು ಕಾದಾಡುತ್ತಿದ್ದರು.

೨೧. ದುರ್ಯೋಧನನೆಂಬ ಹೆಸರು ಸಾರ್ಥಕವಾಯಿತು, ಭೀಮನೆಂಬ ಹೆಸರು ಅನ್ವರ್ಥವಾಯಿತು. ಎಂಬಂತೆ ಇಬ್ಬರೂ ಸಮಾನಬಲರಾಗಿ ಕಾದಿದರು.

ಸಮಕಾಯರ್ ಸಮಸತ್ತ್ವರ್ ।
ಸಮವಿದ್ಯರ್ ಸಮರದೊಳ್ ಪರಸ್ಪರಭುಜವಿ ॥
ಕ್ರಮುದವರಿವರೆನೆ ಚಕ್ರ ।
ಭ್ರಮಣದಿನನ್ಯೋನ್ಯಜಯಮನಾಜಿರೆ ತೋಱಲ್ ॥೨೨॥

ನೆಲಸಿದ ಬಿನ್ನಣಂ ಸೆಣಸಿ ಬಿನ್ನಣಮಂ ಗೆಲೆ ಕಾಣ್ಕೆ ಕಾಣ್ಕೆಯಂ ।
ಗೆಲೆ ಜವಮಂ ಜವಂ ಗೆಲೆ ಬಲಂ ಬಲಮಂ ಗೆಲೆ ದಂಡೆ ದಂಡೆಯಂ ॥
ಗೆಲೆ ಮುಳಿಸುಣ್ಮೆ ಪೊಣ್ಮೆ ಮುಳಿಸಂ ಗೆಲೆ ಸತ್ತ್ವದಳುರ್ಕೆ ಸತ್ತ್ವಮಂ ।
ಗೆಲೆ ಗೆಲಲಾರ್ತರಿಲ್ಲ ಕುರುಪಾಂಡುತನೂಭವರೊರ್ವರೊರ್ವರಂ ॥೨೩॥

ಅಂತು ನೆಬಿಲೊಳ್ ಪೋರ್ಕುಳಿಯಾಡುವಂತೊರ್ವರೊರ್ವರಂ ಗೆಲಲ್ ನೆಱೆಯದಿರೆ ದುರ್ಯೋಧನಂ ಕರಂ ಮುಳಿದು -

ಕುರುರಾಜಂ ವಿದ್ಯಾಧರ ।
ಕರಣದೆ ನೆಗೆದಂಬರಕ್ಕೆ ಗದೆಯಂ ಕ್ರಮದಿಂ ॥
ತಿರುಪೆ ಧರಾಚಕ್ರಂ ಕೋ ।
ವರ ಚಕ್ರಂ ತಿರಿವ ತೆಱದೆ ತಿರಿದತ್ತೆನಸುಂ ॥೨೪॥

ಚಿತ್ರಾಕಾರದ ಗದೆಯಂ ।
ಛತ್ರವಿಡಂಬದೊ[ಳೆ] ಬೀಸೆ ಗಗನದೊಳೇಕ ॥
ಚ್ಛತ್ರಂ ಗಡಮೆಂದು ಮರು ।
ತ್ಪುತ್ರಂಗಱಪುವವೊಲಿರ್ದನಾ ಕುರುಪುತ್ರಂ ॥೨೫॥

೨೨. ಸಮಾನ ದೇಹದವರು, ಸಮಾನ ಶಕ್ತಿವಂತರು, ಸಮಾನ ವಿದ್ಯಾಸಂಪನ್ನರು, ಸಮಾನ ಭುಜಬಲಶಾಲಿಗಳು, ಯುದ್ಧದಲ್ಲಿ ಸಮಪರಾಕ್ರಮಿಗಳು ಆದ ಇವರಿಬ್ಬರ ಚಕ್ರಾಕಾರದ ಯುದ್ಧಗತಿಯಲ್ಲಿ ಯಾರಿಗೆ ಜಯವೆಂದು ಹೇಳಲು ಸಾಧ್ಯವಿರಲಿಲ್ಲ.

೨೩. ಅರಗಿಸಿಕೊಂಡ ಯುದ್ಧವಿದ್ಯೆ, ನೋಟದ ತೀಕ್ಷ್ಣತೆ, ವೇಗ, ಸಾಮರ್ಥ್ಯ, ಮುಷ್ಟಿಯ ಹಿಡಿತ, ಉಕ್ಕುತ್ತಿರುವ ಕ್ರೋಧಾವೇಶ, ಸತ್ತ್ವದ ಅತಿಶಯ - ಇವೆಲ್ಲವುಗಳಲ್ಲಿ ಪರಸ್ಪರ ಇಬ್ಬರೂ ಮಿಗಿಲಾದುದರಿಂದ, ಒಬ್ಬರನ್ನೊಬ್ಬರು ಗೆಲ್ಲಲಾಗಲಿಲ್ಲ.

ವ॥ ಹೀಗೆ ನೆರಳಿನ ಸಂಗಡ ಹೋರಾಡಿದಂತಾಗಿ ಇಬ್ಬರಲ್ಲಿ ಒಬ್ಬರೂ ಗೆಲ್ಲಲಾಗದಿರಲು, ದುರ್ಯೋಧನನು ಅತ್ಯಂತ ಕೋಪದಿಂದ -

೨೪. ವಿದ್ಯಾಧರಗತಿಯಿಂದ ಆಕಾಶಕ್ಕೆ ನೆಗೆದು ಗದೆಯನ್ನು ತಿರುಗಿಸಲಾಗಿ ಭೂಮಂಡಲವು ಕುಂಬಾರನ ತಿಗುರಿಯಂತೆ ಗಿರಗಿರನೆ ತಿರುಗಿತು.

೨೫. ಚಿತ್ರಾಕಾರದ ಗದೆಯನ್ನು ಕೊಡೆಯಾಕಾರ ಮೂಡುವಂತೆ ಆಕಾಶದಲ್ಲಿ ಗರಗರನೆ ತಿರುಗಿಸಲಾಗಿ ಈ ಭೂಮಿಯೆಲ್ಲವೂ ಭೀಮನಿಗೆ ಇನ್ನು ಏಕಚ್ಛತ್ರವಾಗಿರುವುದೆಂದು ದುರ್ಯೋಧನನು ಸೂಚಿಸುವನೊ ಏನೊ ಎಂಬಂತೆ ತೋರಿತು.

ಅಂತು ಮೂದಲಿಸದೆ ಇಱಿವುದು ತುಱಿಲಾಳಾಯ್ತಮಲ್ಲೆಂದು ಮುಟ್ಟ ಮೂದಲಿಸಿ -

ತೆಱಪಂ ನಿಟ್ಟಿಸಿ ಕುರುಪತಿ ।
ಬಱಿಸಿಡಿಲೆಱಿಗುವವೊಲೆಱಿಗಿ ಪೊಯ್ಯಲೊಡಂ ಮೆ ॥
ಯ್ಮಱಿದು ಪವನಜನುಮೇನೆಂ ।
ದಱಿಯದೆ ಮತಿವಿಕಳನಾಗಿ ಮೂರ್ಛೆಗೆ ಸಂದಂ ॥೨೬॥

ಅಂತು ಕುಲಿಶಾಭಿಘಾತದಿಂ ನೀಲಾಚಲಮೆ ಕೆಡೆವಂತೆ ಕೆಡೆದು ಮೂರ್ಛಾಗತ ನಾಗಿರ್ದ ಭೀಮಸೇನನಿರವಂ ಕಂಡು ಗಾಂಡೀವಿ ಕೋಪಾತುರಾಟೋಪಮಂ ತಾಳ್ದಿ -

ಎಲ್ಲಿಯ ಬಲದೇವಂ ಮ ।
ತ್ತೆಲ್ಲಿಯ ಸತ್ಯವ್ಯವಸ್ಥೆ ದುರ್ಯೋಧನನಂ ॥
ಕೊಲ್ಲದಿರೆನೆಂದು ಭಾರತ ।
ಮಲ್ಲಂ ಗಾಂಡಿವಕೆ ನೀಡಿದಂ ಕರತಳಮಂ ॥೨೭॥

ಮುಳಿದೇವಂ ಹಲಿ ಕೃಷ್ಣಂ ।
ಮುಳಿದೇವಂ ಧರ್ಮನಂದನಂ ಮುಳಿದೇವಂ ॥
ಮುಳಿದರನಿಕ್ಕುವೆವೆಂದು ।
ಮ್ಮಳಿಸಿದರಿಱಿಯಲ್ಕೆ ನಕುಲಸಹದೇವರ್ಕಳ್ ॥೨೮॥

ವ॥ ಮೂದಲಿಕೆಯ ಮಾತಿಲ್ಲದೆ ಪ್ರಹಾರ ಮಾಡುವುದು ವೀರವೃತ್ತಿಯಲ್ಲವೆಂದು ಮರ್ಮಾಘಾತವಾಗುವಂತೆ ಮೂದಲಿಸಿ -

೨೬. ಸರಿಯಾದ ಅವಕಾಶವನ್ನು ನೋಡಿಕೊಂಡು ದುರ್ಯೋಧನನು ಬರಸಿಡಿಲಂತೆ ಮೇಲೆರಗಿ ಹೊಡೆದನು. ಅದೇನೆಂದು ಅರಿಯದೆ ಭೀಮನು ಎಚ್ಚರ ತಪ್ಪಿ ಬಿದ್ದನು.

ವ॥ ಹೀಗೆ ವಜ್ರಾಯುಧಪ್ರಹಾರದಿಂದ ನೀಲಪರ್ವತವೆ ಕಡಿದುಕೊಂಡು ಬಿದ್ದಂತೆ ಬಿದ್ದು ಮೂರ್ಛೆಹೋದ ಭೀಮಸೇನನ ಸ್ಥಿತಿಯನ್ನು ಕಂಡು ಅರ್ಜುನನು ಕೋಪಾವಿಷ್ಟನಾಗಿ -

೨೭. "ಎಲ್ಲಿಯ ಬಲರಾಮ? ಎಲ್ಲಿಯ ಧರ್ಮಯುದ್ಧ? ದುರ್ಯೋಧನನನ್ನು ಕೊಲ್ಲದೆ ಬಿಡೆನು?" ಎಂದು ಗಾಂಡೀವ ಧನುಸ್ಸಿಗೆ ಕೈ ನೀಡಿದನು.

೨೮. "ಮುನಿದುಕೊಂಡು ಬಲರಾಮನು ಮಾಡುವುದೇನು? ಕೃಷ್ಣನು ಮಾಡುವುದೇನು? ಧರ್ಮರಾಜನಾದರೂ ಮಾಡುವುದೇನು? ಮುನಿದು ಬಂದವರನ್ನು ಕೊಂದಿಕ್ಕುವೆವು" ಎಂದು ನಕುಲ ಸಹದೇವರು ಕುದಿದೆದ್ದರು.

ಅರಿಗಿಂಬಾಯ್ತುಟಿವಾದುದು ।
ಮರುತ್ಸುತಂಗರ್ಜುನಾದಿಗಳ್ ಮುಳಿದರ್ ಮೂ ॥
ವರುಮೆನ್ನ ನನ್ನಿಗೀಗಳೆ ।
ಪರಿಭವಮಾಯ್ತೆಂದು ಧರ್ಮಜಂ ಚಿಂತಿಸಿದಂ ॥೨೯॥

ಅಲರ್ದ ಹಲಧರನ ಮೊಗಮಂ ।
ತಲೆಯಂ ಬಾಗಿರ್ದ ಧರ್ಮತನಯನ ಮೊಗಮಂ ॥
ಜಲರುಹನಾಭಂ ಕಂಡೆರ್ದೆ ।
ಕಲಂಕಿ ಕಣ್ಸನ್ನೆಯೊಳ್ ಜ[ರ್ಝಿ]ದಂ ಗಾಂಡಿವಿಯಂ ॥೩೦॥

ಆ ಪ್ರಸ್ತಾವದೊಳ್ ಧಾತುನಿರ್ಜರಗಿರಿ ಕೆಡೆವಂತು ಕೆಡೆದಿರ್ದ ಪಗೆಯಂ ನೋಡಿ -

ಕೆಡೆದೊಡೆ ಪವನಜನಾಹವ ।
ದೆಡೆಯೊಳ್ ಬಟ್ಟವನನಿಱಿಯಲಾಗದುವೆಂಬರ್ ॥
ಗಡಮೆಂದಂಬರತಳದೊಳ್ ।
ಪೊಡವೀಶಂ ಗದೆಯನೆತ್ತಿ ತಿರಿಪಿದನಾಗಳ್ ॥೩೧॥

ಆ ಪ್ರಸ್ತಾವದೊಳ್ ಧರ್ಮಯುದ್ಧಮಂ ನೆನೆದು -

ಇಱಿಯೆಂ ಬಟ್ಟನನೆಂಬೀ ।
ಬಱುಬಿಂದಂ ಬೀಸೆ ಗದೆಯ ಗಾಳಿಯ ಕೋೞ್ ॥
ಟ್ಟೆಱೆಸಿದುದು ಭೀಮನಂ ಮೆ ।
ಯ್ಮಱೆದವನಂ ತಂದೆ ಸುತರ್ಗೆ ಕೂರದರೊಳರೇ ॥೩೨॥

೨೯. "ಶತ್ರುವಿಗೆ ಅನುಕೂಲವಾಯಿತು. ಭೀಮನಿಗೆ ಘಾತವಾಯಿತು. ಅರ್ಜುನಾದಿಯಾಗಿ ಮೂವರು ತಮ್ಮಂದಿರೂ ಕೋಪಕ್ಕೆ ಈಡಾದರು. ನನ್ನ ಸತ್ಯಕ್ಕೆ ಸೋಲುಂಟಾಯಿತು" ಎಂದು ಧರ್ಮರಾಜನು ಚಿಂತೆಗೊಳಗಾದನು.

೩೦. (ಸಂತೋಷದಿಂದ) ಅರಳಿದ ಬಲರಾಮನ ಮುಖವನ್ನೂ, ತಲೆ ತಗ್ಗಿಸಿದ ಧರ್ಮರಾಯನ ಮುಖವನ್ನೂ ನೋಡಿ ಕೃಷ್ಣನು ಮನದೊಳಗೆ ಕಳವಳಿಸಿ ಕಣ್ಣಿಂದಲೆ ಅರ್ಜುನನನ್ನು ಗದರಿಸಿದನು.

ವ॥ ಆ ಸಮಯದಲ್ಲಿ ಜಾಜುಗಲ್ಲಿನಿಂದ ಕೂಡಿದ ಮೇರುಪರ್ವತ ಬಿದ್ದಂತೆ (ನೆತ್ತರು ಬಳಿದು) ಬಿದ್ದ ವೈರಿಯನ್ನು ನೋಡಿ -

೩೧. "ಯುದ್ಧರಂಗದಲ್ಲಿ ಭೀಮನು ಬಿದ್ದಿದ್ದಾನೆ. ಬಿದ್ದವನನ್ನು ಹೊಡೆಯಲಾಗದೆಂದು ಹೇಳುತ್ತಾರೆ" ಎಂದು ದುರ್ಯೋಧನನು ಗದೆಯನ್ನೆತ್ತಿ ಆಕಾಶದಲ್ಲಿ ತಿರುಗಿಸಿದನು.

ವ॥ ಆ ಸಮಯದಲ್ಲಿ ಧರ್ಮಯುದ್ಧವನ್ನು ಅನುಲಕ್ಷಿಸಿ -

೩೨. "ಬಿದ್ದವನನ್ನು ಹೊಡೆಯೆನು" ಎಂದು ರಭಸದಿಂದ ಗದೆಯನ್ನು ಬೀಸಲಾಗಿ, ಆ ಗಾಳಿಯ ತಂಪು ಮೂರ್ಛಾಗತನಾಗಿದ್ದ ಭೀಮನನ್ನು ಎಚ್ಚರಿಸಿತು. ಮಕ್ಕಳ ಮೇಲೆ

ದಾನಿಯುಮಮಂ ಶೂರನುಮಮಂ ।
ತಾನೆಬ್ಬಿಱಿಕುಂ ಗದಾನಿಲಂ ಮೂರ್ಛಿತನಂ ॥
ದೀನನುಮಮಂ ಪಂದೆಯುಮಮಂ ।
[ಪೇನಿಯನೆಬ್ಬಿಱಿಕುಮಬ್ಜವೀಜನ] ಪವನಂ ॥೩೩॥

ಜ್ವಳನಸಖಸುತನ ಮೂರ್ಛೆಯೆ ।
ತಿಳಿದುಂ ಮುಂ ತಿಳಿಯಲಿಲ್ಲ ಕಣ್ಗಳೊಳಂತ ॥
ವ್ವಳಿಪ ಕಡುಗೆಂಪು ಕೌರವ ।
ಕುಳಂಗೆ ಕಡುಮುಳಿದ ಜವನ ಕಣ್ಬೇಡಿನವೊಲ್ ॥೩೪॥

ಅಂತು ಮೂರ್ಛೆಯಿಂ ಮಾರುತಿಯೆಚ್ಚತ್ತಾಗಳ್ -

ಪೊಡೆಯಲರಾತಂ ರಾಗದೆ ।
ತೊಡೆಯಂ ಪೊಯ್ದಾರ್ವ ನೆವದೆ ನೆಱನೀತಂಗೀ ॥
ಯೆಡೆಯೆಂದು ತೋಱಿಕುಡೆ ಪೊಲ ।
[ಗಿಡ]ದಱಿದಂ ಪರಮಪಂಡಿತಂ ಪವನಸುತಂ ॥೩೫॥

ತಿಳಿದಾಗಳ್ ನೆನೆದಿಂತುಟೆಂದು ನೆಲನಂ ಮಾಱುದ್ದಿ ಕಯ್ಯಂ ಧರಾ ।
ತಳದೊಳ್ ಸೂಸಿದ ತನ್ನ ಚಿತ್ರಗದೆಯಂ ಕಂಡೆತ್ತಿಕೊಂಡಂಬರ ।
ಸ್ಥಳದಿಂದಂ ಸಿಡಿಲೇಟ್ಗೆಯಿಂದೆಱಗಿ ಪೊಯ್ವಾಗಳ್ ಗದಾದಂಡದಿಂ ।
ಮುಳಿದಿಟ್ಟಂ ಕಲಿ ಸತ್ತಿಗಂ ಕುರುಕುಭೃಚ್ಚಂಡೋರುದಂಡಂಗಳಂ ॥೩೬॥

ಪ್ರೀತಿಯಿಲ್ಲದ ತಂದೆಗಳುಂಟೆ? (ವಾಯು ಭೀಮನ ತಂದೆಯಾದುದರಿಂದ, ಆತನೆ ಪ್ರೀತಿಯಿಂದ ಮಗನನ್ನು ಎಚ್ಚರಿಸಿದನು).

೩೩. ಮೂರ್ಛಿತನಾದ ದಾನಿಯನ್ನೂ, ಶೂರನನ್ನೂ ಗದೆಯ ಗಾಳಿ ಎಚ್ಚರಿಸುತ್ತದೆ. ಆದರೆ ದೀನನನ್ನೂ ಹೇಡಿಯನ್ನೂ ಎಚ್ಚರಿಸುವುದಕ್ಕೆ ಬೀಸಣಿಕೆಯ ಗಾಳಿ ಬೇಕು.

೩೪. ಭೀಮನು ಮೂರ್ಛೆಯಿಂದ ಎಚ್ಚತ್ತರೂ ಅವನ ಕಣ್ಣುಗಳಲ್ಲಿ ತುಂಬಿಕೊಂಡ ಕಡುಗೆಂಪು, ಕುರುರಾಜನ ಮೇಲೆ ಕ್ರುದ್ಧನಾದ ಯಮನ ಕಣ್ಗೆಂಪಿನಂತೆ ಇನ್ನೂ ಕುಗ್ಗಿರಲಿಲ್ಲ.

ವ॥ ಹೀಗೆ ಭೀಮನು ಮೂರ್ಛೆಯಿಂದ ಎಚ್ಚತ್ತಾಗ -

೩೫. ಕೃಷ್ಣನು ಉತ್ಸಾಹದಿಂದ ತೊಡೆತಟ್ಟಿಕೊಂಡು ಅಬ್ಬರಿಸುವ ನೆವದಿಂದ ದುರ್ಯೋಧನನಿಗೆ ಇದೇ ಮರ್ಮಸ್ಥಾನವೆಂದು ಸೂಚಿಸಿದನು. ಬಲುಜಾಣನಾದ ಭೀಮನು ಅದನ್ನು ಕೂಡಲೆ ಅರಿತುಕೊಂಡನು.

೩೬. ಹೀಗೆಂದು ತಿಳಿದುಕೊಂಡು ನೆಲಕ್ಕೆ ಕೈಗುದ್ದಿ, ಆಚೆಗೆ ಬಿದ್ದಿದ್ದ ತನ್ನ ಗದೆಯನ್ನು ಎತ್ತಿಕೊಂಡು ಆಕಾಶಸ್ಥಳದಿಂದ ಸಿಡಿಲೆರಗುವಂತೆ ಎರಗಿ ಪರಾಕ್ರಮಿ ಭೀಮಸೇನನು ಕೌರವನ ತೋರತೊಡೆಗಳನ್ನು ಗದೆಯಿಂದ ಹೊಡೆದನು.

ಇದೆ ತೊಡೆಯನುಡಿದು ನೆಟ್ಟನೆ ।
ಕೆಡೆಯುತ್ತುಂ ಕರ್ಚಿ ನೆಲನನಾನಿದನೆಂತುಂ ॥
ಬಿಡೆನೆಂಬ ತೆಱದೆ ಕುಲಗಿರಿ ॥
ಕೆಡೆವಂದದೆ ಕೌರವೇಂದ್ರನಾಗಳ್ ಕೆಡೆದಂ ॥೩೭॥

ಅಂತು ದಿಕ್ಕರಿವರಕರಾನುಕಾರಿಗಳಪ್ಪ ನಿಜಭುಜಸ್ತಂಭಂಗಳಿಂ ಕುರುಕುಲಮಹೀಶನ ಬಾಳಕದಳೀಸ್ತಂಭಂಗಳನನುಕರಿಸುವ ತೊಡೆಗಳನುಡಿದು ಅಶ್ರಮದೊಳ್ ಪುಡಿಯೊಳ್ ಪೊರಳ್ಚಿ ತನ್ನ ಮುನ್ನೆ ನುಡಿದೂರುಭಂಗಪ್ರತಿಜ್ಞೆಯಂ ತೀರ್ಚಿ ಮಕುಟಭಂಗಪ್ರತಿಜ್ಞೆಯಂ ತೀರ್ಚಲೆಂದು ಕುರುಕುಲಾಂತಕಂ ಮಾಮಸಕಂ ಮಸಗಿ –

ಇದು ಭುವನಾಧಿಪತ್ಯಸವನೋದಕದಿಂ ಗಡ ಪೂತಮಾದುದಿಂ ।
ತಿದು ಧವಳಾತಪತ್ರದ ನೆಟಿಲ್ಗೆ ಗಡಂ ಗುಜೆಯಾದುದಾರ್ಗಮಿಂ ॥
ತಿದು ಗಡ ಬಾಗದೀ ತಲೆಗೆ ತಕ್ಕುದನೀಗಳೆ ಮಾಚ್ಪೆನೆಂದು ಕೋ ।
ಪದಿನೊದೆಯಲ್ಕೆ ಸಾರ್ತರೆ ಸಪತ್ನ ಹ[ತೋರು] ಕಿರೀಟಶೃಂಗಮಂ ॥೩೮॥

ಬಲದೇವಾದಿಗಳಾಗದಾಗದೊದೆಯಲ್ಕೇಕಾದಶಾಕ್ಷೋಹಿಣೀ ।
ಬಲಲಕ್ಷ್ಮೀಪತಿಯಂ ಪರಾಭವಿಸದಿರ್ ಛಃ ತಕ್ಕುದಲ್ಲೆಂದು ಮಾ ॥
ರ್ಕೊಳೆಯುಂ ಮಾಣದೆ ಭೀಮಸೇನನೊದೆದಂ ವಾಮಾಂಘ್ರಿಯಿಂ ರತ್ನಮಂ ।
ಡಲರಶ್ಮಿಪ್ರಕಟಜ್ವಲನ್ಮಕುಟಮಂ ಕೌರವ್ಯರಾಜೇಂದ್ರನಾ ॥೩೯॥

ಒದೆದ ಭರದಿಂದಮುಚ್ಚಳಿ ।
ಸಿದ ದುರ್ಯೋಧನನ ಮಕುಟಮಣಿಗಳವೆತ್ತಂ ॥
ಕೆದಱಿದುವಿಱಿವಬೆಡಂಗನ ।
ಪೊದಬ್ದ ಕೋಪಾಗ್ನಿದಹನದಾಳ್ಕಿಡಿಗಳವೋಲ್ ॥೪೦॥

೩೭. ಹೀಗೆ ಭೀಮನು ತೊಡೆಗಳನ್ನು ಮುರಿದಿಡಲಾಗಿ ಕುರುರಾಜನು ಕುಲ ಪರ್ವತದಂತೆ ದೊಪ್ಪನೆ ಬಿದ್ದು, ಏನಾದರೂ ನಾನು ಇದನ್ನು ಬಿಡೆನೆಂಬಂತೆ ನೆಲವನ್ನು ಕಚ್ಚಿಕೊಂಡನು.

ವ॥ ದಿಗ್ಗಜದ ಸೊಂಡಿಲಂತಿರುವ ತನ್ನ ತೋಳುಗಳಿಂದ ಭೀಮನು ಬಾಳೆಕಂಬ ಗಳಂತಿದ್ದ (ದುರ್ಯೋಧನನ) ತೊಡೆಗಳನ್ನು ಮುರಿದು, ಸಲೀಲವಾಗಿ ಹುಡಿಯಲ್ಲಿ ಹೊರ ಳಾಡಿಸಿ, ತಾನು ಈ ಪೂರ್ವದಲ್ಲಿ ಮಾಡಿದ್ದ ಊರುಭಂಗ ಪ್ರತಿಜ್ಞೆಯನ್ನು ನೆರವೇರಿಸಿದನು. ಕಿರೀಟಭಂಗ ಪ್ರತಿಜ್ಞೆಯನ್ನು ಈಡೇರಿಸಲೆಂದು ಅತ್ಯಂತ ಕೋಪಾವೇಶದಿಂದ –

೩೮. "ಇದು ಚಕ್ರಾಧಿಪತ್ಯದ ಅಭಿಷೇಕಜಲದಿಂದ ಪವಿತ್ರವಾದುದಂತೆ! ಶ್ವೇತಚ್ಛತ್ರದ ನೆಳಲಲ್ಲೆ ಇದ್ದುದಂತೆ ! ಇದು ಯಾರಿಗೂ ಬಾಗುವುದಿಲ್ಲವಂತೆ ! ಅಲ್ಲವೆ ? ಈ ತಲೆಗೆ ತಕ್ಕುದನ್ನು ಈಗಲೆ ಮಾಡುವೆನು" ಎಂದು ಕೋಪದಿಂದ ಅದನ್ನು ಒದೆಯಲು ಮುಂದೆ ಬಂದನು.

೩೯. "ಛೇ ! ಕೂಡದು. ಒದೆಯಕೂಡದು. ಹನ್ನೊಂದಕ್ಷೌಹಿಣೀ ಸೈನ್ಯಾಧಿ ಪತಿಯಾದ ರಾಜನನ್ನು ಅವಮಾನಗೊಳಿಸಬೇಡ. ಛೀ. ಅದು ಯೋಗ್ಯವಲ್ಲ" ಎಂದು ಬಲರಾಮನೆ ಮೊದಲಾದವರು ಪ್ರತಿಭಟಿಸಿದರೂ ಹಿಂದೆಗೆಯದೆ ಭೀಮಸೇನನು ರತ್ನಕಾಂತಿಯಿಂದ ಥಳಥಳಿಸುವ ಕುರುರಾಜ ಕಿರೀಟವನ್ನು ಎಡಗಾಲಿಂದ ಒದೆದನು.

೪೦. ಒದೆದ ರಭಸಕ್ಕೆ ದುರ್ಯೋಧನನ ಕಿರೀಟದ ರತ್ನಗಳೆಲ್ಲವೂ, ಭೀಮಸೇನನ ಪ್ರಜ್ವಲ ಕೋಪಾಗ್ನಿಯ ಕಿಡಿಗಳಂತೆ ಎತ್ತೆತ್ತಲೂ ಹರಡಿದವು.

ಅಂತು ಗುಣರತ್ನಾರ್ಣವಂ ಪ್ರತಿಜ್ಞಾಪೂರ್ಣನುಮಾಗೆ -

ತ್ರಿದಶೇಂದ್ರಂ ಜಂಭನೊಳ್ ತಟ್ಟೆಱೆದ ಸಮರಮಂ ನೋಡಿದೆಂ ರಾಮಚಂದ್ರಂ ।
ತ್ರಿದಶೇಂದ್ರಾರಾತಿಯೊಳ್ ತಟ್ಟೆಱೆದ ಸಮರಮಂ ನೋಡಿದೆಂ ಕಂಡೆ[ವಿ]ಲ್ಲಂ ॥
ಕದ ಗಂಡಂ ಸಾಹಸಾಂಕಂ ಸುಭಟರ ಜವನಿಂ ಮುನ್ನಮೆಂದುಂ ನಭೋಭಾ ।
ಗದೊಳಂ ತದ್ದೇವತೂರ್ಯಸ್ವನಘನರವದಿಂದಾಡಿದರ್ ನಾರದಾದ್ಯರ್ ॥೪೧॥

ಸುರತರುಕುಸುಮೋತ್ಕರಮಂ ।
ಸುರಿಯೆ ಸುರಾಂಗನೆಯರುಲಿಯೆ ಸುರದುಂದುಭಿಗಳ್ ॥
ಪರಮಾಶೀರ್ವಚನಪರಂ ।
ಪರೆಯಿಂದಂ ಮೆಚ್ಚಿ ಪರಸಿದರ್ ಸತ್ತಿಗನಂ ॥೪೨॥

ಬಲದೇವಂ ಭೀಮನಭುಜ ।
ಬಲದೇವಂ ಮನಮನಲೆಯೆ ಕುರುಪತಿಯಂ ಮಾ ॥
ರ್ಕೊಳೆಯುಂ ಪರಿಭವಿಸಿದನೆಂ ।
ದಳವಲ್ಲದೆ ಮುಳಿದು ಕೆಳರ್ದು ನೋಡುತ್ತಿರ್ದಂ ॥೪೩॥

ಅಂತು ಮುಳಿದಿರ್ದುಂ ತನ್ನ ತಮ್ಮನ ಮನಮಂ ನೋಯಿಸಲಾಱದೆಯುಂ ದುರ್ಯೋಧನಂಗಾದವಸ್ಥೆಯಂ ನೋಡಲಾಱದೆಯುಂ ಬಲದೇವಂ ದ್ವಾರಾವತಿಗೆ ಪೋದನನ್ನೆಗಮಿತ್ತಲ್ -

ವ॥ ಹೀಗೆ ಗುಣಸಮುದ್ರನಾದ ಭೀಮನು ಪ್ರತಿಜ್ಞೆಯನ್ನು ಪೂರೈಸಿದಾಗ -

೪೧. "ದೇವೇಂದ್ರನು ಜಂಭಾಸುರನೊಡನೆ ಮಾಡಿದ ಯುದ್ಧವನ್ನು ನೋಡಿದ್ದೆವು. ರಾಮಚಂದ್ರನು ರಾವಣಾಸುರನೊಡನೆ ಆಡಿದ ಯುದ್ಧವನ್ನೂ ನೋಡಿದ್ದೆವು. ಆದರೆ ಮಹಾವೀರನಾದ, ಮಹಾವೀರರಿಗೆ ಯಮನಾದ ಈ ಭೀಮನಂತೆ ಯುದ್ಧಮಾಡಿದವರನ್ನು ಈ ಮೊದಲು ನಾವೆಲ್ಲಿಯೂ ಕಂಡಿರಲಿಲ್ಲ" ಎಂದು ನಾರದಾದಿಗಳು ದೇವದುಂದುಭಿಗಳ ಧ್ವನಿಯೊಡನೆ ಕುಣಿದಾಡಿದರು.

೪೨. ದೇವತೆಗಳಿಂದ ದೇವಲೋಕದ ಪುಷ್ಪವೃಷ್ಟಿಯಾಯಿತು ; ದೇವ ದುಂದುಭಿಗಳು ಮೊರೆದುವು ; ಎಲ್ಲರೂ ತುಂಬ ಮೆಚ್ಚಿಕೊಂಡು ಭೀಮನನ್ನು ಆಶೀರ್ವದಿಸಿದರು.

೪೩. ಭೀಮನ ತೋಳ್ಬಲವುಂಟುಮಾಡಿದ ವ್ಯಥೆಯಿಂದ ಮನನೊಂದು, ಬೇಡವೆಂದು ಪ್ರತಿಭಟಿಸಿದರೂ ಇವನು ಕುರುರಾಜನನ್ನು ಅವಮಾನಿಸಿದನೆಂದು ಅತ್ಯಂತವಾಗಿ ಮುನಿದುಕೊಂಡು ಬಲರಾಮನು ಕೆಕ್ಕರಿಸಿ ನೋಡುತ್ತಲಿದ್ದು -

ವ॥ ತನ್ನ ತಮ್ಮನ ಮನಸ್ಸನ್ನು ನೋಯಿಸಲಾರದೆಯೂ, ದುರ್ಯೋಧನನಿಗೆ ಒದಗಿದ ದುರವಸ್ಥೆಯನ್ನು ನೋಡಲಾರದೆಯೂ ದ್ವಾರಕಾಪುರಕ್ಕೆ ಹೊರಟುಹೋದನು. ಇತ್ತ -

ಧಾತ್ರೀಪತಿಗಜೆಪಿ ಮರು ।
ತ್ಪುತ್ರಂ ಬಟೆಯಟ್ಟ ಕರೆಸಿ ತೋಱಲ್ಕೇಕ ॥
ಚ್ಛತ್ರೀಕೃತಜಗದಹಿತ ।
ಕ್ಷತ್ರಿಯಕುಳಕಾಳರಾತ್ರಿಯಂ ದ್ರೌಪದಿಯಂ ॥೪೪॥

ಮುಳಿಸಿಂ ನಂಜಿಕ್ಕಿ ಕೊಲ್ವಂದಿನ ಜತುಗೃಹದೊಳ್ ಸುಟ್ಟು ಕೊಲ್ವಂದಿನುರ್ವೀ ।
ತಳಮಂ ಜೂದಾಡಿ ಗೆಲ್ವಂದಿನ ನಿಜಕಬರೀಬಂಧಮಂ ತನ್ನ ಸತ್ತ್ರೋ್ವೀ ॥
ಜ್ಜ್ವಳದಿಂದಂ ತಮ್ಮನಿಂದಂ ತೆಗೆಯಿಸಿ ನಡೆದಾ ನೀಚನಾ ದ್ರೋಹನಾ ಸಂ ।
ಚಳನಾ ಚಂಡಾಲನಾ ಪಾತಕನಿರವನಿದಂ ನೋಡು ಪಂಕೇಜವಕ್ತ್ರೇ ॥೪೫॥

ಅರಸಂ ದೀಕ್ಷಿತನಿಲ್ಲಿ ಋತ್ವಿಜರುಮೆಮ್ಮೀ ನಾಲ್ವರುಂ ಸಂಗರಾ ।
ಧ್ವರದೊಳ್ ತಾನುಪದೇಶಕಂ ಮುರಹರಂ ನೀನುಂ ಗೃಹೀತವ್ರತಾ ॥
ಚರಣವ್ಯಾಪಿಕೆಯುಂ ಭವತ್ಪರಿಭವಂ ಸಂಚಾರಕಂ ಕೌರವೇ ।
ಶ್ವರನೀತಂ ಪಶುವಾಗೆ ಬೇಳ್ದೆನಿವನಂ ಕೋಪಾಗ್ನಿಯಿಂದಗ್ನಿಜೇ ॥೪೬॥

ಸುಹುತಂ ಕೌರವ್ಯಕ್ರ ।
ವ್ಯಹವ್ಯದಿಂದೆನ್ನ ಕೋಪಹವ್ಯವಹಂ ದು ॥
ರ್ವಹದುರ್ಯೋಧನದೇಹ ।
ಪ್ರಹರಣಲೋಹಿತದಿನಾದುದವಭೃಥಸವನಂ ॥೪೭॥

೪೪. ರಾಜನಾದ ಧರ್ಮರಾಯನಿಗೆ ತಿಳಿಸಿ, ಚಕ್ರವರ್ತಿಯಾಗಿದ್ದ ಕುರುರಾಜನ ವಂಶಕ್ಕೆ ಕಾಳರಾತ್ರಿಯೆನಿಸಿದ ದ್ರೌಪದಿಗೆ ಹೇಳಿಕಳುಹಿಸಿ ಬರಮಾಡಿಕೊಂಡು, ಭೀಮಸೇನನು -

೪೫. "ಎಲೌ ಕಮಲಮುಖೀ ನೋಡು, ಕೋಪದಿಂದ ನನ್ನನ್ನು ನಂಜಿಕ್ಕಿ ಕೊಲ್ಲಬಯಸಿದವನ, ಅರಗಿನ ಮನೆಯಲ್ಲಿಟ್ಟು ನಮ್ಮನ್ನು ಸುಟ್ಟುಹಾಕಲು ಹವಣಿಸಿದವನ, ಜೂಜಾಟದಲ್ಲಿ ಭೂಮಿಯನ್ನೆಲ್ಲ ಗೆದ್ದುಕೊಂಡಿದ್ದವನ, ಬಲುದರ್ಪವೇರಿ ನಿನ್ನ ಮುಡಿಯನ್ನು ತನ್ನ ತಮ್ಮನಿಂದ ಹಿಡಿದೆಳೆಯಿಸಿದ ನೀಚ, ದ್ರೋಹಿ, ಚಂಚಲ, ಚಾಂಡಾಲ ಪಾತಕಿ ಹೊಂದಿರುವ ಈ ಅವಸ್ಥೆಯನ್ನು ನೋಡು.

೪೬. ಎಲೌ ಅಗ್ನಿಪುತ್ರಿಯೆ, ಧರ್ಮರಾಜನೇ ಯಜಮಾನನಾಗಿ, (ತಮ್ಮಂದಿರಾದ) ನಾವು ನಾಲ್ವರೂ ಋತ್ವಿಜರಾಗಿ, ಶ್ರೀಕೃಷ್ಣನು ಉಪದೇಶಕನಾಗಿ ನೀನು ವ್ರತಧಾರಿಣಿಯಾಗಿ, ನಿನಗಾಗಿದ್ದ ಅವಮಾನವೆ ಪ್ರೇರಕವಾಗಿ, ನನ್ನ ಕೋಪಾಗ್ನಿಯೆ ಬೆಂಕಿಯಾಗಿ, ಯುದ್ಧವೆಂಬ ಯಜ್ಞದಲ್ಲಿ ಕುರುರಾಜನೆಂಬ ಈ ಯಜ್ಞಪಶುವನ್ನು ಬಲಿಕೊಟ್ಟೆನು.

೪೭. ಕೌರವನ ಮಾಂಸಾಹುತಿಯಿಂದ ನನ್ನ ಕೋಪಾಗ್ನಿಗೆ ತೃಪ್ತಿಯಾಯಿತು. ದುಸ್ಸಾಧ್ಯನಾದ ದುರ್ಯೋಧನನ ದೇಹವನ್ನು ಹೊಡೆದು ಚಿಮ್ಮಿಸಿದ ರಕ್ತದಿಂದ ನನಗೆ ಅವಭೃತಸ್ನಾನವಾಯಿತು".

ಎಂದು ಭೀಮಸೇನಂ ಯಾಜ್ಞಸೇನಿಗಾದಿತ್ಯನ ಸಾರಥಿಯಿರ್ಪಂತೆ ನಿಜೋರು ಯುಗಳವಿಕಳನಾಗಿರ್ದ ದುರ್ಯೋಧನನಂ ತೋಱಿ -

ಪಗೆ ಮಡಿದುದು ಮುಡಿಯೆನೆ ನಗೆ ।
ಮೊಗದಿಂ ಪಾಂಚಾಲೆ ಮಱೆದೆನಾಂ ಪಲಕಾಲಂ ॥
ವಿಗತಾಭ್ಯಾಸದೆ ಸತ್ತಿಗ ।
ಪಗೆಯಂ ಮಡಿಯಿಸಿದೆ ನೀನೆ ಮುಡಿಯಲ್ವೇೞ್ಕುಂ ॥೪೮॥

ಎಂದು ತನ್ನ ಕಯ್ಯಂ ಪಿಡಿದು ತೆಗೆವುದಮಂತೆಗೆಯ್ವೆನೆಂದುಮಾಕೆಯ ವೇಣೀ ಸಂಹಾರಮಂ ತಾನೆ ಮಾಡಿ -

ಇದಱೊಳ್ ಬಾಹಾಬಳಾಗ್ರ್ಯರ್ ಮಣಿಮಕುಟಧರರ್ ಕೃಷ್ಣೆ ಮೂರ್ಧಾಭಿಷಿಕ್ತರ್।
ಕದನಪ್ರೋಚ್ಚಂಡದಂಡಕ್ರಮವಿಜಿತರಿಪುಕ್ಷತ್ರಿಯರ್ ವೀರಲಕ್ಷ್ಮೀ ॥
ಸದನರ್ ಸೋಮಾಮೃತಾಸ್ವಾದನ ಶುಭವಚನರ್ ಮುನ್ನಮೞ್ದಾಡಿದರ್ ನೋ ।
ಡಿದು ನಿನ್ನೀ ಕೇಶಪಾಶಂ ಕುರುಕುಲಪತಿಗಾಯ್ತಲ್ತೆ ಕೀನಾಶಪಾಶಂ ॥೪೯॥

ಎಂದು ಪೊಗೞ್ದು ಮಾಂಗಲ್ಯಮಾಲಾಲಂಕೃತಂಮಾಡೆ -

ವ॥ ಎಂದು ಕಾಲುಮುರಿದುಕೊಂಡು ಸೂರ್ಯಸಾರಥಿ ಅರುಣನಂತಾಗಿದ್ದ ದುರ್ಯೋಧನನನ್ನು ದ್ರೌಪದಿಗೆ ತೋರಿ -

೪೮. "ಶತ್ರು ಸಂಹಾರವಾಯಿತು. ಇನ್ನು ಮುಡಿ ಕಟ್ಟಿಕೊ" ಎಂದು ನುಡಿದನು. ದ್ರೌಪದಿಯು ನಗುಮೊಗದಿಂದ, "ಸತ್ಯಾಶ್ರಯನೆ, ಮುಡಿ ಕಟ್ಟಿಕೊಳ್ಳುವ ಅಭ್ಯಾಸವು ಹಲವಾರು ವರ್ಷಗಳಿಂದ ತಪ್ಪಿಹೋಗಿರುವುದರಿಂದ ಹೇಗೆ ಕಟ್ಟುವುದೆಂಬುದೆ ಮರೆತುಹೋಗಿದೆ. ಆದುದರಿಂದ ಶತ್ರುವನ್ನು ಸಂಹರಿಸಿದ ನೀನೇ ನನ್ನ ಮುಡಿಯನ್ನು ಕಟ್ಟು."

ವ॥ ಎಂದು ನುಡಿದು ಅವನ ಕೈಯ್ಯನ್ನು ಹಿಡಿದೆತ್ತಲಾಗಿ, "ಆಗಲಿ ಹಾಗೆಯೆ ಮಾಡುವೆನು" ಎಂದ ಭೀಮನು ಆಕೆಯ ಕೂದಲನ್ನು ಹೆಣೆದು ಕಟ್ಟಿ -

೪೯. "ತೋಳ್ಬಲದಲ್ಲಿ ಮಿಗಿಲಾದವರು, ರತ್ನಕಿರೀಟಧಾರಿಗಳು, ಪಟ್ಟಾಭಿಷಿಕ್ತರು, ಯುದ್ಧದಲ್ಲಿ ಪ್ರಚಂಡವಾಗಿ ಹೋರಾಡಿ ಶತ್ರುಗಳನ್ನು ಗೆದ್ದ ಕ್ಷತ್ರಿಯರು, ವಿಜಯಶ್ರೀಗೆ ನೆಲೆಯಾದವರು, (ಯಜ್ಞಮಾಡಿ) ಸೋಮರಸಪಾನದಿಂದ ಪವಿತ್ರರಾದವರು - ಈ ಎಲ್ಲರೂ ಇದರಲ್ಲಿ ನಿರ್ನಾಮವಾಗಿ ಹೋದರು. ಕಂಡೆಯಾ, ನಿನ್ನ ಈ ಕೇಶಪಾಶವು ಕುರುರಾಜನಿಗೆ ಯಮಪಾಶವಾಯಿತಲ್ಲವೆ ?"

ವ॥ ಎಂದು ಹೊಗಳಿ ಅವಳ ಮುಡಿಯನ್ನು ಮಂಗಳವಾದ ಮಾಲೆಯಿಂದ ಅಲಂಕರಿಸಲಾಗಿ -

ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳಾ ಶೃಂಗಾರಮಾ ಭಾವಮಾ ।
ಪರಿಜಾ ವಿಭ್ರಮಮಾ ಬೆಡಂಗು ನೆಗಟ್ದಾ ಸೌಂದರ್ಯಮಾ ಬಿಂಕಮಾ ।
ತರಳಾಪಾಂಗವಿಲಾಸಮಾ ಲಟಹಮಾ ಲಾವಣ್ಯಮಾ ಪುಣ್ಯಮಾ ।
ದರಹಾಸಾಮೃತಮೇಂ ಮನಂಗೊಳಿಸಿತೋ ಚಾಳುಕ್ಯಕಂದರ್ಪನಾ ॥೫೦॥

ಅಡಿ ಕಿಱುದೊಡೆ ಪೆರ್ದೊಡೆ ಕಟ ।
ನಡು ಮೊಲೆ ತೋಳ್ ನೀಳ್ದ ಬೆರಲುಗುರ್ ಕೊರಲಂದಂ ॥
ಬಡೆದ ಮೊಗಂ ಸುಟೆಗುರುಳ್ಗೋ ।
ರ್ಮುಡಿ ನೋಡಲ್ ನಾಡೆ ಸೊಗಯಿಕುಂ ದ್ರೌಪದಿಯಾ ॥೫೧॥

ಗಳರೇಖಾಕೃತಿ ಭೂಮಿರೇಖೆ ದಶನಂ ವಜ್ರಂ ವಿಲೋಲೇಕ್ಷಣಂ ।
ದಳಮುದ್ಭ್ರೂಲತೆ ಕರ್ಣಿಕಾವಿಳಸನಂ ನಾಸಾಪುಟಂ ಸಂಪುಟಂ ॥
ಗಳನಾದಾಕ್ಷರಮಕ್ಷರಂಗಳೆನೆ ಕಾಶ್ಮೀರಾದಿಲಿಪ್ತಂ ಮನಂ ।
ಗೊಳೆ ಕಂದರ್ಪನ ವಶ್ಯಯಂತ್ರಮೆನಿಸಿತ್ತಾಸ್ಯಂ ಸರೋಜಾಸ್ಯೆಯಾ ॥೫೨॥

ತಿಂಗಳ ಪಡಿಚಂದ್ರಂ ಕಮ ।
ಲಂಗಳ ಮಱುವಕ್ಕಮಚ್ಚತಿಳಿಗೊಳನಾ ಚೆ ।
ಲ್ವಿಂಗಿದೆ ದಾಯಿಗಮೆನೆ ಲಲಿ ।
ತಾಂಗಿಯ ನಗೆಮೊಗದ ಪೋಲ್ವೆಗೆಣೆ ಪೆಱವೊಳವೇ ॥೫೩॥

೫೦. ಮನ್ಮಥನಿಗೆ ಸಂಜೀವನವಾದ ದ್ರೌಪದಿಯು ಹೂ ಮುಡಿದುಕೊಂಡಳು. ಆಗ ಆಕೆಯ ಶೃಂಗಾರ, ಆ ಭಾವ, ಆ ರೂಪ, ಆ ವಿಭ್ರಮ, ಆ ಬೆಡಗು, ಅತಿಶಯವಾದ ಆ ಸೌಂದರ್ಯ, ಆ ಬಿಂಕ, ಚಂಚಲವಾದ ಆ ಕುಡಿನೋಟ, ಆ ವಿಲಾಸ, ಆ ಸೊಬಗು, ಆ ಲಾವಣ್ಯ, ಆ ಪುಣ್ಯ, ಆ ಮಂದಹಾಸದ ಅಮೃತ - ಇವು ಒಂದೊಂದೂ ಭೀಮನಿಗೆ ಎಷ್ಟೊಂದು ಆನಂದವನ್ನು ಉಂಟುಮಾಡಿದುವು !

೫೧. ದ್ರೌಪದಿಯ ಪಾದ, ಜಂಘೆ, ತೊಡೆ, ನಿತಂಬ, ನಡು, ಮೊಲೆ, ತೋಳು, ನೀಳವಾದ ಬೆರಳು, ಉಗುರು, ಕೊರಳು, ಅಂದವಾದ ಮುಖ, ಸುಳಿಗೂದಲು ಸಡಿಲವಾಗಿ ಹೆಣೆದ ಮುಡಿ - ಇವೆಲ್ಲವೂ ತುಂಬ ಸೊಗಸಾಗಿ ಶೋಭಿಸಿದವು.

೫೨. ಕೊರಳ ಮೇಲಿನ ಗೆರೆಗಳೇ ತಳರೇಖೆ, ಹಲ್ಲುಗಳೆ ವಜ್ರ, ಚಂಚಲವಾದ ಕಣ್ಣುಗಳೆ ಎಸಳು, ನೀಳವಾದ ಹುಬ್ಬುಗಳೆ ಕರ್ಣಿಕೆ, ಮೂಗೇ ಕರಡಿಗೆ, ಕಂಠನಾದವೆ ಮಂತ್ರಾಕ್ಷರಗಳಾಗಲು ಕುಂಕುಮಕೇಶರಾದಿಗಳನ್ನು ಲೇಪಿಸಿಕೊಂಡ ದ್ರೌಪದಿಯ ಮುಖಕಮಲವು ಮನ್ಮಥನ ವಶೀಕರಣಯಂತ್ರವೊ ಏನೊ ಎಂಬಂತೆ ತೋರಿತು.

೫೩. ದ್ರೌಪದಿಯ ನಗೆಮೊಗವು ಚಂದ್ರನಿಗೆ ಪ್ರತಿಚಂದ್ರ, ಕಮಲಗಳ ಪ್ರತಿಸ್ಪರ್ಧಿ, ಸ್ವಚ್ಛವಾದ ಸರೋವರದ ಚೆಲುವಿಗೆ ದಾಯಾದಿ. ಎಂದಮೇಲೆ ಆ ಕೋಮಲಾಂಗಿಯ ಮುಖದ ಹೋಲಿಕೆಗೆ ಸಮನಾದ ಉಪಮಾನಗಳು ಬೇರೆ ಉಂಟೆ ?

ನಗೆಗಣ್ಗಳೊ[ಳಗೆ ಮೆಲ್ಪಗೆ]
ಸೊಗಯಿಸೆ ಕರಚರಣತಳದ ಮೆಲ್ಪೆಸೆಯೆ ಮನಂ ॥
ಬುಗುವಳ್ ಪೂಗಣೆ[ವೊಲ್] ತಾಂ ।
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ॥೫೪॥

ತರಳಂಗಳ್ ತರಳಾಯತಂಗಳತಿತೀಕ್ಷ್ಣಂಗಳ್ ಚಕೋರೇಕ್ಷಣ ।
ಸ್ಫುರಿತಂಗಳ್ ಮದನಾಯುಧಾಕೃತಿಗಳಾಕರ್ಣಾಂತರಂಗಳ್ ಮನೋ ॥
ಹರವರ್ಣಾಕೃತಿಗಳ್ ವಿಭಾಸಿಗಳತಿಸ್ನಿಗ್ಧಂಗಳಂಭೋಜಭ ।
ನ್ನರುಚಿಸ್ಪರ್ಧಿಗಳಕ್ಷಿಗಳ್ ಬಹುಳಪಕ್ಷ್ಮಂಗಳ್ ಕುರಂಗಾಕ್ಷಿಯಾ ॥೫೫॥

ಅತಿನಿಬಿಡಂಗಳ್ ವೃತ್ತೋ ।
ನ್ನತಂಗಳತಿಪೀವರಂಗಳತಿಕಠಿಣಂಗಳ್ ॥
ರತಿರಮಣಕುಂಭಿಕುಂಭಾ ।
ಕೃತಿಗಳ್ ಕಳಶೋಪಮಂಗಳವಳ ಕುಚಂಗಳ್ ॥೫೬॥

ತಾರಕನಖಂ ನವಸರೋರುಹದಳಾಂಘ್ರಿ[ವರ] ಚಾರುಘನನಾಭಿ[ಪುಳಿನ]
ಸ್ಥಳನಿತಂಬಂ ।
ಹಾರಲತಿಕಾಕೃತಿವಿಹಾರನಿಬಿಡಸ್ತನಸರೋರುಹಯುಗಂ ಮದನ ಪಂಚಶರ ಹಸ್ತಂ॥
ಸ್ಮೇರವದನಂ ಚಳಚಕೋರನಯನಂ ಚತುರಹಾರಮೃದುಕುಂತಳಕಳಾಪ
ಮಳಿಕೇಶಂ ।
ಚಾರುರುಚಿಸೂತ್ರಸುಕುಮಾರಮೆಸೆಗುಂ ಹೃದಯಹಾ[ರಿ] ಪೊಗಟಲ್ಕ[ಜೆಯೆನಾ]
ಸತಿಯ ರೂಪಂ ॥೫೭॥

೫೪. ನಗೆಗಣ್ಣುಗಳ ಸೊಗಸು ಶೋಭಿಸಲಾಗಿ, ಅಂಗೈ ಅಂಗಾಲುಗಳ ಮಾರ್ದವ ಮನೋಹರವಾಗಿರಲಾಗಿ, ದ್ರೌಪದಿ ಹೂಬಾಣಕ್ಕಿಂತ ಇಮ್ಮಡಿ, ಮೂವಡಿ, ನಾಲ್ಮಡಿ, ಐವಡಿಯಾಗಿ ಮನವನ್ನು ಹೊಗುವಳು.

೫೫. ದ್ರೌಪದಿಯ ಕಣ್ಣುಗಳು ಚಂಚಲ ಹಾಗು ವಿಶಾಲವಾಗಿ, ಚಕೋರ ನೇತ್ರಗಳಂತೆ ಹೊಳಪುಳ್ಳವಾಗಿ, ಮನ್ಮಥನ ಬಾಣಗಳಂತಿದ್ದು, ಕಿವಿಯವರೆಗೆ ಚಾಚಿಕೊಂಡು, ಮನೋಹರವಾದ ಬಣ್ಣ ಹಾಗು ಆಕಾರವುಳ್ಳುವಾಗಿ, ಅತ್ಯಂತ ಅನುರಾಗಪೂರ್ಣವಾಗಿ, ಶೋಭಿಸುತ್ತ, ಕಮಲದ ಕಾಂತಿಯೊಂದಿಗೆ ಸ್ಪರ್ಧಿಸುತ್ತ, ದಟ್ಟವಾದ ರೆಪ್ಪೆಗಳನ್ನು ಹೊಂದಿ ಕಂಗೊಳಿಸಿದುವು.

೫೬. ದ್ರೌಪದಿಯ ಮೊಲೆಗಳು ಅತ್ಯಂತ ದಟ್ಟವಾಗಿ ವೃತ್ತಾಕಾರವಾಗಿ ಉನ್ನತವಾಗಿ ತೋರವಾಗಿ ಅತಿಕಠಿನವಾಗಿ, ಮನ್ಮಥನಾನೆಯ ಕುಂಭಸ್ಥಳದಂತೆಯೂ, ಕಳಶಗಳಂತೆಯೂ ಇದ್ದುವು.

೫೭. ಆಕೆಯ ಉಗುರು ನಕ್ಷತ್ರಗಳಂತೆ; ಪಾದಗಳು ಹೊಸ ತಾವರೆಗಳಂತೆ; ಹೊಕ್ಕುಳು ಆಳವಾಗಿ ಚೆಲುವಾದುದು; ನಿತಂಬ ಮರಳುದಿನ್ನೆಯಂತೆ; ದೇಹ ಮನೋಹರವಾದ ಬಳ್ಳಿಯಂತೆ; ತೋರಮೊಲೆಗಳು ತಾವರೆಗಳಂತೆ; ಕೈಗಳು ಮನ್ಮಥನ

ಸ್ತನಕುಂಭಂ ಪೂರ್ಣಕುಂಭಕ್ಕೆಣೆಯೆನೆ ವಳಿರೇಖಾತ್ರಯಂ ರೇಖೆಗೊಂಡ ।
ತ್ತೆನೆ ನಾಭೀಮಂಡಲಂ ಮಂಡಲದೊಳನುಗತಂ ಬರ್ಹಿರೋಮಾವಳೀಕಾಂ ॥
ಚನಕಾಂಚೀದಾಮಪಾತ್ರಂ ಜಘನಜಗತಿಯೊಳ್ ಶೋಭಿಸಲ್ ಕಾಮಸಮ್ಮೋ ।
ಹನಮೋಹಂಗೆಯ್ವನಂಗೋದ್ಭವನೆನೆ ವನಿತಾರೂಪಮಾಶ್ಚರ್ಯರೂಪಂ ॥೫೮॥

ಚಳದಳಕಪ್ರತಾನವನದುರ್ಗಮನೆಯ್ದಿ ಬೃಹನ್ನಿತಂಬಮಂ ।
ಡಳಜಲದುರ್ಗದೊಳ್ ಸುಳಿದು ತುಂಗಕುಚದ್ವಯಶೈಲದುರ್ಗಮಂ ॥
ತಳೆದಡರ್ದೇಱಿದಂಗಜನುಮಾ ಹರಭೀತಿಯನಿರ್ಪವೊಲ್ ಪ್ರಿಯಂ ।
ಗೆಳೆಯಳ ರೂಪು ಭಾವಿಪೊಡೆಯಂಗಜರಾಜನ ದುರ್ಗಮೆನ್ನಿರೇ ॥೫೯॥

ಬೆಳರ್ವಾಯಿಂತಾಗವೇಡಾ ಬಿಗಿದೊಗೆವ ಕುಚದ್ವಂದ್ವವಿಂತಾಗವೇಡಾ ।
ನಳಿತೋಳಿಂತಾಗವೇಡಾ ತೊಳಪ ತೊಡೆಗಳಿಂತಾಗವೇಡಾ ನಿತಂಬ ।
ಸ್ಥಳದೊಳ್ಪಿಂತಾಗವೇಡಾ ಸೊಗಯಿಪ ನಗೆಗಣ್ನೋಟವಿಂತಾಗವೇಡಾ ।
ಕೊಳದಿಂದಂ ಬಂದ ಲಕ್ಷ್ಮೀವಧುವೆನಿಸುವ ಪೆಣ್ಭಾವವಿಂತಾಗವೇಡಾ ॥೬೦॥

ಬಾಣಗಳಂತೆ; ಮುಖ ನಗುಮುಖ; ಕಣ್ಣು ಚಕೋರ ನೇತ್ರಗಳಂತೆ; ಸೊಗಸಾದ ಮೆದುಕೂದಲುಗಳು ದುಂಬಿಗಳಂತೆ - ಇವುಗಳನ್ನೊಳಗೊಂಡ ಕೋಮಲವೂ ಕಾಂತಿಮಯವೂ ಆದ ಆ ಚೆಲುವೆಯ ರೂಪವನ್ನು ನಾನು ಹೊಗಳಿ ಮುಗಿಸಲಾರೆನು.

೫೮. ಕುಂಭಕುಚಗಳು ಪೂರ್ಣಕುಂಭಗಳಿಗೆ ಸಮಾನವಾಗಿ, ಒಡಲ ಮೇಲಿನ ತ್ರಿವಳಿಗಳೆ ರೇಖೆ ಬರೆದಂತಿರಲು, ಹೊಕ್ಕುಳ ಸುಳಿಯೆ ಮಂಡಲವನ್ನು ಅನುಕರಿಸಲಾಗಿ, ಜಘನವೆಂಬ ಜಗಲಿಯ ಮೇಲೆ ಚಿನ್ನದ ಕಟಿಸೂತ್ರವೆಂಬ ನವಿಲ್ಗರಿಗಳು ಶೋಭಿಸಲಾಗಿ, ಮನ್ಮಥನು ಕಾಮಸಮ್ಮೋಹನಕ್ಕಾಗಿ ಮಾಟ ಮಾಡುತ್ತಿರುವನೊ ಏನೊ ಎಂಬಂತೆ ಆ ರಮಣಿಯ ರೂಪವು ಆಶ್ಚರ್ಯಕರವಾಗಿತ್ತು.

೫೯. ಶಿವನ ಭಯದಿಂದ ಅಡಗಿಕೊಳ್ಳಲೆಂದು ಚಂಚಲವಾದ ಮುಂಗುರುಳುಗಳ ವನದುರ್ಗವನ್ನು ಹೊಕ್ಕು, ತೋರವಾದ ನಿತಂಬವೆಂಬ ಜಲುದುರ್ಗದಲ್ಲಿ ಸುಳಿದು, ಉನ್ನತವಾದ ಮೊಲೆಗಳೆಂಬ ಗಿರಿದುರ್ಗಗಳನ್ನು ಕಾಮನು ಏರಿ ಕುಳಿತಿರುವನೊ ಏನೊ ! ಹೀಗೆ ಆ ತರುಣಿಯ ರೂಪವು ಮನ್ಮಥರಾಜನ ದುರ್ಗವೆನಿಸಿತು.

೬೦. ಕಾಂತಿಯುಕ್ತವಾದ ಬಾಯಿ ಹೀಗಿರಬೇಕಲ್ಲವೆ? ಬಿಗಿದೆದ್ದ ಮೊಲೆಗಳೆರಡೂ ಹೀಗಿರಬೇಕಲ್ಲವೆ? ಕೋಮಲವಾದ ತೋಳುಗಳು ಹೀಗಿರಬೇಕಷ್ಟೆ? ತೊಳಗುವ ತೊಡೆಗಳು ಹೀಗಿರಬೇಕು ತಾನೆ? ನಿತಂಬದ ಶೋಭೆ ಹೀಗೆಯೆ ಅಲ್ಲವೆ? ಸೊಗಸಾದ ನಗೆಗಣ್ಣುಗಳ ನೋಟ ಹೀಗೆ ತಾನೆ? ಜಲಾಶಯದಿಂದ ಎದ್ದು ಬಂದ ಲಕ್ಷ್ಮಿಯೆನಿಸುವ ಸ್ತ್ರೀಯ ಭಾವ ಹೀಗೆಯೆ ಇರಬೇಕಲ್ಲವೆ?

ಪನ್ನೆರಡು ಬರಿಸಮಲಸದೆ ।
ಬನ್ನದ ಕೂೞುಂಡು ಬರ್ದಬಿಲ್ ಪಿಂಗಲೊಡಂ ॥
ತನ್ನಿಂ ಕಾಳಿಕೆ ಪಿಂಗಿದ ।
ಪೊನ್ನಿನ ತೆಱನಂತೆ ಕಾಂತೆ ಕರಮೆಸೆದಿರ್ದಳ್ ॥೬೧॥

ಅಂತಿರ್ದ ಜಾತವೇದೋಜಾತೆಯ ಪಾರಿಜಾತಪಲ್ಲವೋಲ್ಲಸಿತನಿಕಾಮ ಕೋಮಲ ಕರತಳಸ್ಪರ್ಶನದೊಳಂ ಕರ್ಣಾಂತವಿಶ್ರಾಂತವಿಕಚಸುಂದರೇಂದೀವರಕುಸುಮಮಾಲಾನುಕಾರಿ ಕಟಾಕ್ಷಚ್ಛಟಾಚ್ಛೋಟನದೊಳಂ ಅಪಗತಸಮರಪರಿಶ್ರಮನಾಗಿ –

ಕೃತಕರಿಪುಧಾರ್ತರಾಷ್ಟ್ರ ।
ಪ್ರತಿಜ್ಞೆಯುಂ ತೀರ್ಚಿ ದ್ರುಪದಜಾ[ಕಚ] ಕೃತಸು ॥
ಪ್ರ[ತಿಕಾರಂ] ಸಂದು[ದಱಿಂ] ।
ಕೃತಕೃತ್ಯಂ ಸಿದ್ಧಸಾಧ್ಯನಿಜೆವಬೆಡಂಗಂ ॥೬೨॥

ಗುರುಪಾದಾಂಬುರುಹಕ್ಕೆ ಮಗ್ಗಿ ಪೊಡೆವಟ್ಟೆಂಗುಂ ಭುಜಂಗೇಂದ್ರಭೀ ॥
ಕರಬಾಹುಭ್ರಮಿತಾಭ್ರವಿಭ್ರಮಗದಾನಿರ್ಘಾತನಿಷ್ಪಿಷ್ಟಸಿಂ ॥
ಧುರಮೇದೋಸ್ರರಸಾರ್ದ್ರಮಾರಣರಣಕ್ಷೋಣೀತಳಂ ಕೌರವೇ ।
ಶ್ವರಚೂಡಾಮಣಿಚೂರ್ಣಕಲ್ಕಕುಲದಿಕ್ಚಕ್ರಂ ಹಿಡಿಂಬಾಂತಕಂ ॥೬೩॥

೬೧. ಹನ್ನೆರಡು ವರ್ಷ ಬೇಸರದೆ ಭಂಗಪಟ್ಟು ಬಾಳಿದ ಪರಿತಾಪವೆಲ್ಲ ಈಗ ಹಿಂಗಿಹೋಗಲಾಗಿ, ಕಶ್ಮಲ ಕರಗಿಹೋದ ಅಪರಂಜಿ ಚಿನ್ನದಂತೆ ಆಕೆ ಸಹಜ ಸೌಂದರ್ಯದಿಂದ ಶೋಭಿಸಿದಳು.

ವ॥ ಹೀಗಿರುವ ಅಗ್ನಿಪುತ್ರಿಯ ಪಾರಿಜಾತದ ಚಿಗುರಿನಂತೆ ಕೋಮಲವಾದ ಕೈಯ ಸ್ಪರ್ಶದಿಂದಲೂ ಕಿವಿಯವರೆಗೆ ಚಾಚಿಕೊಂಡಿರುವ, ಅರಳಿದ ತಾವರೆಗಳ ಮಾಲೆಯಂತೆ ಸುಂದರವಾದ ಕಡೆಗಣ್ಣೋಟದಿಂದಲೂ ಭೀಮನ ಶ್ರಮ ಪರಿಹಾರ ವಾಯಿತು.

೬೨. ಕೌರವರನ್ನು ಕೊಲ್ಲುವೆನೆಂಬ ಪ್ರತಿಜ್ಞೆಯನ್ನು ನೆರವೇರಿಸಿ, ದ್ರೌಪದಿಯ ಮುಡಿಕಟ್ಟುವ ಪ್ರತಿಜ್ಞೆಯನ್ನು ತೀರಿಸಿದುದರಿಂದ ಭೀಮನು ಸಾಧಿಸಬೇಕಾದುದನ್ನೆಲ್ಲ ಸಾಧಿಸಿದವನಾಗಿ ಕೃತಕೃತ್ಯನಾದನು.

೬೩. ನಾಗೇಂದ್ರನಂತೆ ಭೀಕರವಾದ ತನ್ನ ತೋಳಿನಿಂದ ಮೋಡಗಳು ತಿರ್‍ರನೆ ತಿರುಗುವಂತೆ ಗದೆಯನ್ನು ಬೀಸಿಬೀಸಿ, (ಶತ್ರುಗಳ) ಆನೆಗಳನ್ನು ಹೊಡೆದು ಅವುಗಳ ನೆತ್ತರು ನೆಣಗಳಿಂದ ಕುರುಕ್ಷೇತ್ರವನ್ನು ಕೆಸರಾಗಿಸಿ, ಕುರುರಾಜನ ಕಿರೀಟವನ್ನು ಹುಡಿಗಟ್ಟಿ ದಿಕ್ಕುದಿಕ್ಕಿಗೆ ಅದರ ಚೂರುಗಳನ್ನು ಚೆದರಿಸಿದ ಭೀಮಸೇನನು ಹಿರಿಯನಾದ ಅಣ್ಣನ ಪಾದಗಳಿಗೆ ನಮಸ್ಕರಿಸಿ ಹೀಗೆಂದನು –

ಹರಿ ಕೇಳ್ ಧರ್ಮಜ ಕೇಳ್ ಸುರೇಂದ್ರಸುತ ಕೇಳ್ ಮಾದ್ರೀಸುತರ್ ಕೇಳಿಮಿ ।
ರ್ವರುಮಿಂತೆಯ್ದಿದುದದಲ್ತೆ ಕೌರವಹತಿವ್ಯಾಪಾರದೊಳ್ ದ್ರೋಹದು ॥
ರ್ಧರದುಶ್ಯಾಸನರಕ್ತಪಾನವಿಧಿ ಪಾಂಚಾಲೀಕಚೋತ್ತಂಸನಂ ।
ಕುರುರಾಜೋರು ಕಿರೀಟಭಂಗಮಿನಿತುಂ ಭೀಮಪ್ರತಿಜ್ಞಾಕ್ಷರಂ ॥೬೪॥

ಎಂದು ಭೇರಿಯಂ ತಾಟಿಸಿದಂತೆ ಗಂಭೀರಧ್ವನಿಯಿಂ ಗರ್ಜಿಸೆ -

ಹರಿಯುಂ ಧರ್ಮಜನುಂ ಸುರೇಂದ್ರಸುತನುಂ ಮಾದ್ರೀಜರುಂ ಕೃಷ್ಣೆಯುಂ ।
ಪರಮಾನಂದದೆ ಕರ್ಚಿ ತೀರ್ಥಜಲದಿಂ ಕಸ್ತೂರಿಕಾಚಂದನಾ ।
ಗುರುಕಾಶ್ಮೀರಜಪಂಕದಿಂ ತೊಡೆದು ಕೇಯೂರಾದಿಯಂ ಭೂಷಣೋ ।
ತ್ಕರಮಂ ನೇರ್ಪಡೆ ಕಟ್ಟಿ ಪೂಜಿಸಿದರಾ ದೋರ್ದಂಡಮಂ ಭೀಮನಾ ॥೬೫॥

ಆ ಪ್ರಸ್ತಾವದೊಳ್ -

ಅಸುಹೃನ್ಮಾಂಸದಿನಸ್ರರಕ್ತಮಧುವಿಂ ವಿದ್ವಿಟ್ಶಿರೋಬ್ಜಂಗಳಿಂ ।
ದಸಮಾಮಿತ್ರಕಠೋರದಂತಕುಲದಿಂ ರೌದ್ರಾರ್ಚನಾದ್ರವ್ಯದಿಂ ॥
ದೊಸೆದಾಗಳ್ ಬಲವಂದು ಮಗ್ಗಿ ಪೊಡೆವಟ್ಟುತ್ಸಾಹದಿಂ ತಾನೆ ಪೂ ।
ಜಿಸಿದಂ ಸಾಹಸಭೀಮನಾಹವಜಯೋದ್ದಂಡಂ ಗದಾದಂಡಮಂ ॥೬೬॥

ಅಂತು ಭುಜದಂಡಮುಮಂ ಗದಾದಂಡಮುಮಂ ಪೂಜಿಸಿ -

೬೪. "ಕೃಷ್ಣಾ ಕೇಳು, ಧರ್ಮರಾಜಾ ಕೇಳು, ಅರ್ಜುನಾ ಕೇಳು, ನಕುಲ ಸಹದೇವರೇ ನೀವೂ ಕೇಳಿ. ಮಹಾದ್ರೋಹಿಯಾದ ದುಶ್ಯಾಸನನ ರಕ್ತವನ್ನು ಕುಡಿಯುವ, ದ್ರೌಪದಿಯ ಮುಡಿಕಟ್ಟುವ ಹಾಗೂ ದುರ್ಯೋಧನನ ಕಿರೀಟವನ್ನು ಭಂಗಿಸುವ - ಈ ಮೂರೂ ಭೀಮಪ್ರತಿಜ್ಞೆಗಳು ಕೌರವ ಸಂಹಾರದೊಂದಿಗೆ ಪೂರೈಸಿದುವಲ್ಲವೆ ?"

ವ॥ ಹೀಗೆ ಭೇರಿ ಹೊಯ್ದಂತೆ ಗಂಭೀರಧ್ವನಿಯಿಂದ ಗರ್ಜಿಸಲಾಗಿ -

೬೫. ಕೃಷ್ಣನೂ, ಧರ್ಮರಾಯನೂ, ಅರ್ಜುನನೂ, ನಕುಲಸಹದೇವರೂ, ದ್ರೌಪದಿಯೂ ಅತ್ಯಾನಂದದೊಡನೆ ಸೇರಿ ಭೀಮನ ಬಲಿಷ್ಠವಾದ ತೋಳುಗಳನ್ನು ತೀರ್ಥಜಲದಿಂದ ತೊಳೆದು, ಕಸ್ತೂರಿ, ಚಂದನ, ಅಗುರು, ಅಗಿಲುಗಂಧ, ಕುಂಕುಮ ಮೊದಲಾದ ದ್ರವ್ಯಗಳನ್ನು ಲೇಪಿಸಿ ಕೇಯೂರವೇ ಮೊದಲಾದ ಆಭರಣಗಳನ್ನು ಅಂದವಾಗಿ ತೊಡಿಸಿ ಪೂಜಿಸಿದರು.

ವ॥ ಆ ಸಮಯದಲ್ಲಿ -

೬೬. ಶತ್ರುಗಳ ಮಾಂಸ, ರಕ್ತ, (ಕತ್ತರಿಸಿದ) ಶಿರಸ್ಸು, ಹಲ್ಲುಗಳು - ಮೊದಲಾದ ಭಯಾನಕವಾದ ಪೂಜಾದ್ರವ್ಯಗಳನ್ನು ತಂದು, ಉತ್ಸಾಹದಿಂದ ಪ್ರದಕ್ಷಿಣೆ ಹಾಕಿ ನಮಸ್ಕರಿಸಿ, ರಣವಿಜಯಿಯಾದ ಭೀಮನು ತನ್ನ ಗದಾಯುಧವನ್ನು ಪೂಜಿಸಿದನು.

ವ॥ ಹೀಗೆ ಬಾಹು ಮತ್ತು ಗದೆಗಳ ಪೂಜೆಯಾದ ಬಳಿಕ -

ವಿವಿಧಾತೋದ್ಯರವಂ ಪೊದಱ್ದಖಿಳದಿಕ್ಚಕ್ರಂಬರಂ ಕೂಡೆ ಪೊ ।
ಣ್ಮುವಿನಂ ಮಂಗಳಗೀತ ಮಂಗಳರವಂ ಕರ್ಣಾಮೃತಸ್ಯಂದಿಯು ॥
ಣ್ಮುವಿನಂ ದೇವನಿನಾದಮುಣ್ಮುವಿನಮತ್ಯುತ್ಸಾಹದಿಂ ಪೊಕ್ಕನು ।
ತ್ಸವಬದ್ಧಸ್ವನರಮ್ಯತಚ್ಛಿಬಿರಮಂ ಚಾಳುಕ್ಯಕಂಠೀರವಂ ॥೬೭॥

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀ ಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯಕುಲತಿಲಕಂ ಶ್ರೀಮದಾಹವಮಲ್ಲದೇವ ಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀಸಾಹಸಭೀಮವಿಜಯದೊಳ್ ದುರ್ಯೋಧನಮಕುಟೋರುಭಂಗವರ್ಣನಂ ಅಷ್ಟಮಾಶ್ವಾಸಂ ಸಂಪೂರ್ಣಂ ॥

೬೭. ನಾನಾ ವಿಧವಾದ ವಾದ್ಯಧ್ವನಿ ದಿಕ್ಕುಗಳನ್ನು ವ್ಯಾಪಿಸುತ್ತಿರಲು, ಕಿವಿಗೆ ಅಮೃತೋಪಮವಾಗಿ ಹೊಮ್ಮುವ ಮಂಗಳಗೀತೆಗಳ ನಾದವೂ ದೇವತೆಗಳ ಧ್ವನಿಗಳೂ ಕೇಳುತ್ತಿರಲಾಗಿ ಉತ್ಸವ ಕೋಲಾಹಲದಿಂದ ತುಂಬಿದ ತನ್ನ ಶಿಬಿರವನ್ನು ಅತ್ಯಂತ ಸಂತೋಷದಿಂದ ಭೀಮಸೇನನು ಹೊಕ್ಕನು.

# ನವಮಾಶ್ವಾಸಂ

ಶ್ರೀ ಸೋಮವಂಶಕಮಲೋ ।
ದ್ಭಾಸಿಸರೋಹಂಸನಗ್ರಜಾನುಜಸಹಿತಂ ॥
ಶ್ರೀಸತ್ಯನಿಲಯನಧಿಕವಿ ।
ಳಾಸಂ ಸುಖಮಿರ್ದನಲ್ತೆ ಸಾಹಸಭೀಮಂ ॥೧॥

ಅಂತಿರ್ಪನ್ನೆಗಂ ಚಕ್ರಿ ತಾಂ ಕಾಲಚಕ್ರವರ್ತಿಯಪ್ಪುದಱಿಂದಸಮಸಾಹಸೋದ್ದಾಮನಪ್ಪಶ್ವತ್ಥಾಮನ ಬರವನಱಿದನಾಗತಬಾಧಾಪರಿಚ್ಛೇದಮಂ ಮಾಡಲೆಂದು ಧೃಷ್ಟದ್ಯುಮ್ನಶಿಖಂಡಿಚೇಕಿತಾನಯುಧಾಮನ್ಯೂತ್ತಮೌಜರುಮಂ ಶ್ರುತಸೋಮಕಪ್ರಮುಖರಪ್ಪ ಪಾಂಡವಸೂನುಗಳಪ್ಪ ಪಂಚಪಾಂಡವರುಮಂ ಬೀಡಿಂಗೆ ಕಾಪುವೇೞ್ದು ಹಸ್ತ್ಯಶ್ವರಥಪದಾತಿ ಬಲಂಬೆರಸು ಹಸ್ತಿನಾಪುರಕ್ಕೆ ಕಳಿಪಿ ಪಾಂಡವರಯ್ವರುಮನೊಡಂಗೊಂಡು ಸಕಲ ವನಚರಜಲಚರಕಂಜಕುಮುದೇಂದೀವರಮಾಳಾನಿಳಯಮಪ್ಪ ನೀಳಾಚಳಕ್ಕೆ ನೀಲಾಂಗಂ ಪೋದನನ್ನೆಗಮಿತ್ತ ಗಾಂಗೇಯನಱಿಪೆ ಕೌರವೇಶ್ವರನಿರ್ದೆಡೆಯನಶ್ವತ್ಥಾಮನಱಿದು -

ಕೊರಲ ಕಱೆ ಶಿರದ ಪೆಱೆ ನೊಸ ।
ಲುರಿಗಣ್ ಧೃತಚಾಪಹಸ್ತಶಾಕ್ವರಚಿಹ್ನಂ ।
ವಿರಚಿಸೆ ಕೃಪಕೃತವರ್ಮರ್ ।
ಬೆರಸಾಗಳ್ ಮುಳಿದು ಬಂದನಶ್ವತ್ಥಾಮಂ ॥೨॥

೧. ಸೋಮವಂಶವೆಂಬ ಕಮಲ ಸರೋವರದಲ್ಲಿಯ ಹಂಸನಾದ ಸತ್ಯಾಶ್ರಯನೂ, ಸಾಹಸಿಯೂ ಆದ ಭೀಮಸೇನನು ಅಣ್ಣತಮ್ಮಂದಿರೊಡನೆ ಸುಖದಿಂದಿದ್ದನು.

ವ॥ ಹಾಗೆ ಸುಖದಿಂದಿರುವಾಗ ಕೃಷ್ಣನು ಕಾಲಾಧಿಪತಿಯೂ ಆದುದರಿಂದ ಮಹಾಸಾಹಸಿಯಾದ ಅಶ್ವತ್ಥಾಮನು ಬರುವನೆಂದು ಅರಿತು, ಬರಲಿರುವ ಬಾಧೆಯನ್ನು ತಪ್ಪಿಸಬೇಕೆಂದು ಯೋಚಿಸಿ, ಧೃಷ್ಟದ್ಯುಮ್ನ, ಶಿಖಂಡಿ, ಚೇಕಿತಾನ, ಯುಧಾಮನ್ಯು, ಉತ್ತಮೌಜರನ್ನು, ಶ್ರುತಸೋಮಕರೆ ಮೊದಲಾದ ಐವರು ಪಾಂಡವಪುತ್ರರನ್ನೂ ಬೀಡಿಗೆ ಕಾವಲಾಗಿ ನಿಯಮಿಸಿ, ಆನೆ, ಕುದುರೆ, ರಥ, ಕಾಲಾಳುಗಳ ಸೈನ್ಯಸಹಿತವಾಗಿ (ಪರಿವಾರವನ್ನು) ಹಸ್ತಿನಾಪುರಕ್ಕೆ ಕಳಿಸಿದನು. ಮತ್ತು ಐವರು ಪಾಂಡವರನ್ನೊಳಗೊಂಡು ಎಲ್ಲ ಬಗೆಯ ವನಚರ, ಜಲಚರ, ಕೆಂದಾವರೆ, ಬೆಳ್ದಾವರೆಗಳ ಸಮೂಹಕ್ಕೆ ನೆಲೆಯಾದ ನೀಲಪರ್ವತಕ್ಕೆ ಹೋದನು. ಅಷ್ಟುಹೊತ್ತಿಗೆ ಇತ್ತ ಭೀಷ್ಮನಿಂದ ದುರ್ಯೋಧನನಿದ್ದ ಸ್ಥಳವನ್ನು ತಿಳಿದುಕೊಂಡು -

೨. ಕೊರಳಲ್ಲಿ ಕಪ್ಪು ಕಲೆ, ತಲೆಯಲ್ಲಿ ಚಂದ್ರ, ಹಣೆಯಲ್ಲಿ ಬೆಂಕಿಗಣ್ಣು, ನಂದಿಧ್ವಜ (ಎಂಬ ಶಿವನ ಲಕ್ಷಣ)ಗಳನ್ನು ತಾಳಿ ಕೈಯಲ್ಲಿ ಬಿಲ್ಲು ಹಿಡಿದುಕೊಂಡು ಕುಪಿತನಾದ ಅಶ್ವತ್ಥಾಮನು ಕೃಪ ಕೃತವರ್ಮರ ಜೊತೆಗೆ ಬಂದನು.

ಕನತ್ಕನಕಚಾಮರಂ ಧವಳಚಾಮರಂ ಕಯ್ಗಳೊಳ್ ।
ಮನಂ ಚಲಿಸೆ ಮಾಸಿ ತಾಱಿದ ಕುರುಳ್ಗಳುಂ ತನ್ನ ಬ ॥
ನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂ ।
ಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ ॥೩॥

ಅಂತು ಕುಂಭಸಂಭವಸಂಭವಂ ಕಮಲನಾಭನ ಹೃದಯಭವನಾಮೃತಾಬ್ಧಿಸಂಭವೆಯಂ ಕಂಡು–ನೀನಾರ್ಗೆ ಎತ್ತಣಿಂದಂ ಬಂದೆ ಎಲ್ಲಿಗೆ ಪೋದಪೆ ಎಂದು ಬೆಸಗೊಳೆ –

ಅಮೃತಪಯೋಧಿಮಂಥನದೆ ಪುಟ್ಟಿದೆನಬ್ಜವನಾಂತರಾಳದೊಳ್ ।
ರಮಿಯಿಸಿ ಪದ್ಮನಾಭನುರದೊಳ್ ನೆಲಸಿರ್ಪ ಮಹಾನುಭಾವೆಯಾಂ ॥
ಕಮಲೆಯೆನಿನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದೆನೀಗಳು ।
ತ್ತಮಪುರುಷೋತ್ತಮಂ ಬೆಸಸೆ ಪಾಂಡವರೊಳ್ ನೆಲಸಲ್ಕೆ ಪೋದಪೆಂ ॥೪॥

ಎಂಬುದುಂ ದ್ರೋಣನಂದನಂ ನಾರಾಯಣಂ ಬೆಸಸೆ ಪೋದಪೆನೆಂದ ಲಕ್ಷ್ಮಿಯ ಮಾತನವಧಾರಿಸಿ ಮುಗುಳ್ನಗೆನಕ್ಕು –

ಚಳಮತಿಯಾದೆ ನೀಂ ಜಡಧಿಸಂಭವೆಯಪ್ಪುದಱಿಂ ಸರೋಜಸಂ ।
ಕುಳರಜದಿಂದೆ ನೀಂ ಪೊರೆದು ರಾಜಸದೊಳ್ ನೆಲಸಿರ್ಪೆ ಗೋವುಗಾ ॥
ದಳವಟಿದಿರ್ದ ಕೃಷ್ಣನೊಡನಿರ್ದುದಱಿಂದಮೆ ಗೋವಿಯಾದೆಯ ।
ಗ್ಗಳದ ವಿವೇಕಮಿಲ್ಲ ನಿನಗೆತ್ತಱಿವಾ ಪುರುಷಾಂತರಂಗಳಾ ॥೫॥

೩. ಮಾಸಿದ ತಲೆಗೂದಲು, ಮ್ಲಾನವಾದ ಮುಖ ಹಾಗು ಕದಡಿದ ಚಿತ್ತವುಳ್ಳವಳಾಗಿ ವಿಲಾಸವನ್ನೆಲ್ಲ ಕಳೆದುಕೊಂಡು, ಹೊಳೆಯುವ ಚಿನ್ನದ ಚಾಮರವನ್ನು ಕೈಯಲ್ಲಿ ಹಿಡಿದುಕೊಂಡು ಬರುವ ಲಕ್ಷ್ಮಿಯನ್ನು ಅಶ್ವತ್ಥಾಮನು ಕಂಡನು.

ವ॥ ಹೀಗೆ ಲಕ್ಷ್ಮಿಯನ್ನು ಕಂಡು ಅವನು, "ನೀನಾರು ? ಎಲ್ಲಿಂದ ಬಂದೆ ? ಎಲ್ಲಿಗೆ ಹೋಗುವೆ ?" ಎಂದ ಕೇಳಲಾಗಿ -

೪. "ಅಮೃತ ಸಮುದ್ರವನ್ನು ಕಡೆದಾಗ ಹುಟ್ಟಿ, ಕಮಲವನದಲ್ಲಿ ಸುಖದಿಂದಿದ್ದು, ಆಮೇಲೆ ವಿಷ್ಣುವಿನ ಎದೆಯನ್ನು ಆಶ್ರಯಿಸಿದ ಮಹಾನುಭಾವೆ ಲಕ್ಷ್ಮಿ ನಾನು. ಈವರೆಗೆ ಕುರುರಾಜನಲ್ಲಿ ನೆಲಸಿದ್ದೆನು. ಈಗ ಪುರುಷೋತ್ತಮನಾದ ವಿಷ್ಣುವಿನ ಆಜ್ಞೆಯ ಮೇರೆಗೆ ಪಾಂಡವರಲ್ಲಿ ನೆಲಸಲು ಹೋಗುತ್ತಿದ್ದೇನೆ."

ವ॥ ಎಂದಳು. ವಿಷ್ಣು ಆಜ್ಞೆ ಮಾಡಿರುವುದರಿಂದ ಹೋಗುವೆನೆಂಬ ಲಕ್ಷ್ಮಿಯ ಮಾತನ್ನು ಕೇಳಿ ಅಶ್ವತ್ಥಾಮನು ಮುಗುಳ್ನಕ್ಕು ಹೀಗೆ ನುಡಿದನು -

೫. "ಸಮುದ್ರದಲ್ಲಿ ಹುಟ್ಟಿದ್ದರಿಂದ ನೀನು ಚಂಚಲಬುದ್ಧಿಯುವಳಾದೆ ; ಕಮಲವನದ 'ರಜ' (ಧೂಳು) ಲೇಪದಿಂದ ನಿನಗೆ ರಾಜಸಗುಣವುಂಟಾಯಿತು ; ದನಗಳನ್ನು ಕಾದು ಯೋಗ್ಯತೆಯನ್ನು ಕಳೆದುಕೊಂಡ ಕೃಷ್ಣನ ಸಹವಾಸದಿಂದ ನೀನು ಗೊಲ್ಲತಿಯಾದೆ. ಹೆಚ್ಚಿನ ವಿವೇಕವಿಲ್ಲ ನಿನಗೆ. ಪುರುಷರ ತಾರತಮ್ಯವನ್ನು ನೀನೇನು ಬಲ್ಲೆ ?

ಕಲಿ ಪಂದೆಯೆಂದು ಬಗೆಯದೆ ।
ಕುಲಜಂ ಕುಲಹೀನನೆಂದು ಬಗೆಯದೆ ತರುಣಂ ॥
ಸಲೆ ವೃದ್ಧನೆಂದು ಬಗೆಯದೆ ।
ನೆಲಸುವೆ ನಿನ್ನಿಂ ನಿಕೃಷ್ಟರೆಂಬರುಮೊಳರೇ ॥೬॥

ಇಱಿಯಿಸುವೆ ತಂದೆಮಕ್ಕಳ ।
ನಿಱಿಯಿಸುವಯ್ ಸೋದರರ್ಕಳಂ ತಮ್ಮೊಳ್ ತ ॥
ಟ್ಟಿಱಿಯಿಸುವಯ್ ಗುರುಶಿಷ್ಯರ ।
ನಱಿಗುಲಿ ನಿನ್ನಿಂ ನಿಕೃಷ್ಟರಾದರುಮೊಳರೇ ॥೭॥

ಅದಲ್ಲದೆಯುಮಮೃತಸಮುದ್ರಮಂಥನದೊಳ್ ಪುಟ್ಟುವಂದು ಐರಾವತದೊಡನೆ ಪುಟ್ಟಿದುದಱಿಂ ವಿಪರೀತವೃತ್ತಿಯುಂ ಚಂದ್ರನೊಡನೆ ಪುಟ್ಟಿದುದಱಿಂ ಕಳಂಕಸ್ವಭಾವಮುಂ ಕೌಸ್ತುಭದೊಡನೆ ಪುಟ್ಟಿದುದಱಿಂ ಕಠಿನತ್ವಮುಂ ವಾಗ್ದೇವಿಯೊಡನೆ ಪುಟ್ಟಿದುದಱಿಂ ವಾಚಾಳತೆಯುಂ ಅಮರವೈರಿಯೊಡನೆ ಪುಟ್ಟಿದುದಱಿಂ ಗ್ರಹಣಸಲ್ಲೇಖನಾಬುದ್ಧಿಯುಂ ವೈದ್ಯನೊಡನೆ ಪುಟ್ಟಿದುದಱಿಂ ವ್ರಣಶೂಲವೇದಿಯುಂ ನಾರದನೊಡನೆ ಪುಟ್ಟಿದುದಱಿಂ ಕಲಹಸ್ವಭಾವಮುಂ ಕಾಳಕೂಟದೊಡನೆ ಪುಟ್ಟಿದುದಱಿಂ ಕೊಲೆಯುಂ ಕಳ್ಳೊಡನೆ ಪುಟ್ಟಿದುದಱಿಂ ಸೊರ್ಕುಂ ಅಚ್ಚರಸಿಯರೊಡನೆ ಪುಟ್ಟಿದುದಱಿಂ ಪಾಱುಗೆಯ್ತಮುಂ ನಿನಗೆ ಸಹಜಮಾಗಿರ್ದುವು –

೬. ವೀರನಾರು, ಹೇಡಿಯಾರು ಎಂದು ವಿಚಾರಿಸದೆ, ಕುಲೀನನಾರು ಕುಲಹೀನನಾರು ಎಂದು ಯೋಚಿಸದೆ, ಚಿಕ್ಕವರು ದೊಡ್ಡವರು ಎಂಬ ಭೇದವರಿಯದೆ, ಯಾರಲ್ಲಾದರೂ ಹೋಗಿ ನೆಲಸುವೆ ನೀನು. ನಿನಗಿಂತ ತುಚ್ಛರಾದವರು ಉಂಟೆ?

೭. ತಂದೆ ಮಕ್ಕಳು, ಅಣ್ಣ ತಮ್ಮಂದಿರು, ಗುರುಶಿಷ್ಯರು, ಒಬ್ಬರನ್ನೊಬ್ಬರು ತಾಗಿ ಕೊಲ್ಲುವಂತೆ ಮಾಡುವ ಧರ್ಮಘಾತಕಿ ನೀನು. ನಿನಗಿಂತಲೂ ಹೀನರಾದವರು ಇನ್ನಾರಾದರೂ ಉಂಟೆ ?

ವ॥ ಅದಲ್ಲದೆ ಸಮುದ್ರಮಂಥನದಲ್ಲಿ ಹುಟ್ಟುವಾಗ ನೀನು ಐರಾವತದೊಡನೆ ಹುಟ್ಟಿದ್ದರಿಂದ ವಿಪರೀತ ವೃತ್ತಿಯೂ (ಪ್ರತಿಕೂಲವಾದ ನಡತೆಯೂ) ಚಂದ್ರನೊಡನೆ ಹುಟ್ಟಿದ್ದರಿಂದ ಕಲಂಕ ಸ್ವಭಾವವೂ, ಕೌಸ್ತುಭ ರತ್ನದೊಡನೆ ಹುಟ್ಟಿದ್ದರಿಂದ ಕಠೋರತೆಯೂ, ವಾಗ್ದೇವಿಯೊಡನೆ ಹುಟ್ಟಿದ್ದರಿಂದ ವಾಚಾಳತೆ (ಅತಿಯಾದ ಮಾತು)ಯೂ, (ರಾಹು ವೆಂಬ?) ರಾಕ್ಷಸನೊಡನೆ ಹುಟ್ಟಿದ್ದರಿಂದ ಗ್ರಹಣಸಲ್ಲೇಖನಾ ಬುದ್ಧಿಯೂ (ಹಿಡಿದುಕೊಳ್ಳುವ ಹಾಗು ಬಿಟ್ಟುಬಿಡುವ ಬುದ್ಧಿಯೂ), (ಧನ್ವಂತರಿಯೆಂಬ) ವೈದ್ಯನೊಡನೆ ಹುಟ್ಟಿದ್ದರಿಂದ ವ್ರಣಶೂಲವೇದಿಯೂ (?) ನಾರದನೊಡನೆ ಹುಟ್ಟಿದ್ದರಿಂದ ಕಲಹ ಸ್ವಭಾವವೂ, ಕಾಲಕೂಟ ವಿಷದೊಡನೆ ಹುಟ್ಟಿದ್ದರಿಂದ ಕೊಲೆಯೂ, ಮದ್ಯದೊಡನೆ ಹುಟ್ಟಿದ್ದರಿಂದ ಮತ್ತತೆಯೂ, ಅಪ್ಸರೆಯರೊಡನೆ ಹುಟ್ಟಿದ್ದರಿಂದ ವ್ಯಭಿಚಾರ ವೃತ್ತಿಯೂ ನಿನಗೆ ಸ್ವಾಭಾವಿಕವಾದುವು.

ಪೊಡೆವಡೆ ಪರಸದೆ ಬಿನ್ನವಿ ।
ಪೊಡೆ ಕೇಳದೆ ಮುಂದೆ ನಿಂದರಂ ಕಾಣದೆ ತ ॥
ಕ್ಕೆಡೆಯೊಳ್ ಕಡೆಗಣಿಸುವ ನೃಪ ।
ವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ ॥೮॥

ಗುಣಿಗಳ ನೆಱಿ ಪೊರ್ದದೆ ನಿ ।
ರ್ಗುಣರಂ ಪೊರ್ದುವೆ ವಿಶಿಷ್ಟರಂ ದುಷ್ಟರೊಳಂ ॥
ಗಣಿಯಿಸಿ ಸಮನೆಂಬವಗುಣ ।
ಗಣಂಗಳಿವು ಲಕ್ಷ್ಮಿ ನಿನ್ನ ದೂಸಱಿನಲ್ತೇ ॥೯॥

ಮಲಿನರನೆ ಪೊರ್ದುವಯ್ ನಿ ।
ರ್ಮಲರತ್ತಲ್ ಪೊರ್ದಲೊಲ್ಲೆ ನೀಂ ಕನ್ನಡಿಯೊಳ್ ॥
ಜಲಮಿರ್ಪ ದೆಸೆಯೊಳಿರ್ದಾ ।
ಕಿಲುಂಬುಗೊಂಡಿರ್ದ ದೆಸೆಯೊಳಿರ್ದುದೆ ಪೇೞ್ಗುಂ ॥೧೦॥

ಧವಳಾತಪತ್ರಮಡ್ಡಂ ।
ದಿವಸಕೆ ಸಲಲೀಯದಂತಿರಿರ್ಪುದು ವಿಚಳ ॥
ದ್ಧವಳಿಮಚಮರರುಹಂ ಬೀ ।
ಸುವ ನೆವದಿಂ ಪಾಱಿ ಬೀಸುವುದು ನೃಪಗುಣಮಂ ॥೧೧॥

ಜಳಬುದ್ಬುದಂಗಳತಿಸಂ ।
ಚಳವಿದ್ಯುದ್ವಿಲಸಿತಂಗಳಚಿರತೆಯಂ ಮುಂ ॥
ತಿಳಿಪಿದುವೊ ನಿನಗೆ ನಿನ್ನಿಂ ।
ತಿಳಿದುವೊ ಮೇಣಿವರೊಳಱಿಪುಗುಂ ಕೂರ್ಪವರೊಳ್ ॥೧೨॥

೮. ನಮಸ್ಕರಿಸಿದಾಗ ಆಶೀರ್ವಾದಮಾಡದೆ, ಬಿನ್ನವಿಸಿದಾಗ ಕಿವಿಗೊಡದೆ, ಮುಂದೆ ನಿಂತವರನ್ನು ನೋಡದೆ, ಯೋಗ್ಯವಾದುದನ್ನೆಲ್ಲ ಉಪೇಕ್ಷಿಸುವ - ಈ ವಿಡಂಬಗಳು ರಾಜರಿಗೆ ಬಂದುದು ನಿನ್ನಿಂದಲೆ ಅಲ್ಲವೆ ?

೯. ಗುಣವಂತರನ್ನು ಹೊಂದಿಕೊಳ್ಳದೆ ಗುಣಹೀನರನ್ನೆ ಆಶ್ರಯಿಸುವ, ಸಜ್ಜನರನ್ನು ದುಷ್ಟರಿಗೆ ಸಮನೆಂದೇ ಪರಿಗಣಿಸುವ ಈ ದುರ್ಗುಣಗಳು ಅರಸರಿಗೆ ಬಂದುದು ನಿನ್ನಿಂದಲೆ ಅಲ್ಲವೆ ?

೧೦. ಪಾಪಿಗಳ ಸಹವಾಸವನ್ನೆ ಮಾಡುವೆಯಲ್ಲದೆ ನೀನು ಪರಿಶುದ್ಧರಾದವರ ಬಳಿ ಸುಳಿಯುವುದಿಲ್ಲ. ಕನ್ನಡಿಯ ಮೇಲೆ ನೀರು ಎಲ್ಲಾದರೂ ನಿಂತುಕೊಂಡರೆ, ಅಲ್ಲಿ ಕಿಲುಬು ಹಿಡಿದಿದೆಯೆಂದೇ ಅರ್ಥ.

೧೧. ಶ್ವೇತಚ್ಛತ್ರವು ಹಗಲಿನ ಬೆಳಕು ಬಾರದಂತೆ ಅಡ್ಡಗಟ್ಟುತ್ತದೆ ; ಚಾಮರವು ಬೀಸುವ ನೆವದಿಂದ ರಾಜಗುಣವನ್ನು ಹಾರಿಸಿಬಿಡುತ್ತದೆ.

೧೨. ನೀರ ಮೇಲಿನ ಗುಳ್ಳೆಗಳೂ, ಬಹುಚಂಚಲವಾದ ಮಿಂಚಿನ ಹೊಳಪುಗಳೂ ಚಂಚಲತೆಯನ್ನು ಮೊದಲು ನಿನಗೆ ತಿಳಿಸಿದುವೊ ಅಥವಾ ತಾವೇ ನಿನ್ನಿಂದ ತಿಳಿದು ಕೊಂಡುವೊ ? ಪ್ರೀತಿಯಿದ್ದವರು ಒಬ್ಬರಿಗೊಬ್ಬರು ತಿಳಿಸಿಕೊಡುವುದುಂಟು"

ಎಂದು ಲಕ್ಷ್ಮಿಯಂ ವಿಡಂಬನಂಗೆಯ್ದುನಿತಱೊಳಂ ಮಾಣದೆ -

ಪೋ ಮಾಣ ಧರ್ಮಜಂ ಗಡ ।
ಭೀಮಂ ಗಡ ಫಲ್ಗುಣಂ ಗಡಮಳ್ಗಳ್ ಗಡ ಸಂ ॥
ಗ್ರಾಮದೊಳವಂದಿರಶ್ವ ।
ತ್ಥಾಮಂಗಾಪೋಶನಂಗೊಳಲ್ ನೆಱೆದಪರೇ ॥೧೩॥

ನಿನ್ನ ಮುರವೈರಿಯಳವುಮ ।
ನೆನ್ನಳವುಮನೆಲಗೆ ಕಾಣ್ಬೆ ಕುರುಪತಿಯಿಂದಂ ॥
ಮುನ್ನಂ ತ್ವತ್ಪತಿಯಿಂದಂ ।
ನಿನ್ನನಗಲ್ಚಲ್ಕೆ ಕಪಟಗೋಪಂ ಪ್ರಭುವೇ ॥೧೪॥

ಕುರುರಾಜಂ ರಾಜರಾಜಂ ಸಕಲವಸುಮತೀಕಾಂತನಿರ್ದಂತೆ ಯುದ್ಧಾ ।
[ತುರನಿನ್ನೀ] ಸಾಹಸಾಂಕಂ ಕುರುಕುಳಪತಿಯಿರ್ದಂತೆ ಮೆಲ್ಪಟ್ಟು ದಾಮೋ ॥
ದರನೆಂದೀ ಕಜ್ಜದೊಳ್ ನೀಂ ತೊಡರ್ದು ಮರುಳೆ ಬೆಂಡಾಗದಿರ್ ಪೋಗು ನೀಂ ಚೆ ।
ಚ್ಚರಮತ್ತಿನ್ನೆತ್ತವೋಪೌ ಪರಿಭವಿಸಿದಪೆಂ ನಿನ್ನನಿಂ ಕಾವನಾವೊಂ ॥೧೫॥

ಎಂದಶ್ವತ್ಥಾಮನುದ್ದಾಮಕೋಪಾಟೋಪಬದ್ಧಭ್ರುಕುಟಿಯುಂ ತರಳತಾಮ್ರಲೋಚನನುಮಾಗೆ -

ವ॥ ಹೀಗೆಂದು ಲಕ್ಷ್ಮಿಯನ್ನು ಪರಿಹಾಸ ಮಾಡಿ, ಅಷ್ಟಕ್ಕೇ ಬಿಡದೆ -

೧೩. ಹೋಗಲಿ ಬಿಡು. (ಇನ್ನು ನೀನು ಸೇರಬಯಸುವುದು ಪಾಂಡವರನ್ನಲ್ಲವೆ? ಅವರು ಯಾವ ಲೆಕ್ಕ ?) ಧರ್ಮಪುತ್ರನಂತೆ ? ಭೀಮನಂತೆ ! ಅರ್ಜುನನಂತೆ ! ನಕುಲಸಹದೇವರಂತೆ ! ಯುದ್ಧದಲ್ಲಿ ನನಗೆ ಇವರೆಲ್ಲ ಒಂದು ಆಪೋಶನಕ್ಕಾದರೂ ಸಾಲುವರೆ ?

೧೪. ನಿನ್ನ ಕೃಷ್ಣನ ಸಾಮರ್ಥ್ಯವನ್ನೂ, ನನ್ನ ಸಾಮರ್ಥ್ಯವನ್ನೂ ನೀನೇ ನೋಡುವೆಯಂತೆ. ನಿನ್ನ ಒಡೆಯನಾದ ದುರ್ಯೋಧನನಿಂದ ನಿನ್ನನ್ನು ಅಗಲಿಸುವುದಕ್ಕೆ ಆ ಕಪಟಗೊಲ್ಲನು ಯಾರು ? ಅವನೇನು ಎಲ್ಲಕ್ಕೂ ಒಡೆಯನೆ ?

೧೫. ಸಕಲ ಭೂಮಂಡಲಕ್ಕೆ ಒಡೆಯನೂ, ಚಕ್ರವರ್ತಿಯೂ ಆದ ಕುರುರಾಜನು ಇನ್ನೂ ಜೀವಂತನಾಗಿರುವಾಗ, ಸಾಹಸಿಯೆಂದು ಖ್ಯಾತನಾದ ಯುದ್ಧೋತ್ಸುಕನು ಇನ್ನೂ ಇರುವಾಗ, ಎಲೌ ಬುದ್ಧಿಹೀನೆಯೇ, ಕೃಷ್ಣನ ಮಾತಿಗೆ ಮರುಳಾಗಿ ಇಂತಹ (ಅಯೋಗ್ಯ) ಕಾರ್ಯಕ್ಕೆ ತೊಡಗಿ ನೀನು ನುಗ್ಗಾಗಬೇಡ. ಬೇಗನೆ ಮರಳಿ ನಡೆ. ಇನ್ನೆತ್ತ ಹೋಗುವೆ ? ನಾನು ತಡೆದು ನಿಲ್ಲಿಸುವೆನು. ನಿನ್ನನ್ನು ರಕ್ಷಿಸುವುದಕ್ಕೆ ಬರುವವನಾರು ?"

ವ॥ ಎಂದು ಅಶ್ವತ್ಥಾಮನು ಅತ್ಯಂತ ಕ್ರುದ್ಧನಾಗಿ ಹುಬ್ಬುಗಂಟಿಕ್ಕಿ ಕೆಂಗಣ್ಣುಗಳಿಂದ ನೋಡಲಾಗಿ -

ಅತ್ತಲಸುರಾರಿ ಬೆಸಸಿದ ।
ನಿತ್ತಲ್ ರುದ್ರಾವತಾರನೆೞೆದೊಯ್ದಪನಿಂ ॥
[ತ] ತ್ತ ಪುಲಿಯಿತ್ತ ದರಿಯೆಂ ।
ದತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್ ॥೧೬॥

ಅಂತು ತಳವೆಳಗಾದ ಲಕ್ಷ್ಮೀಕಾಂತೆಯ ಚಳದಳಿಕುಳವಿನೀಳಕುಟಿಲಕುಂತಲಂಗಳಂ ತಳಮಾಱೆ ತೆಗೆದು ಕುರುಕುಲಕುಟುಂಬನ ಘಟಚೇಟಿಯಂ ಕೊಂಡು ಪೋಪಂತೆ ಮಗುೞೆ ಕೊಂಡು ಪೋಗಿ ಭೀಮಸೇನನ ಗದಾಘಾತದೊಳೂರುಭಂಗಮುಂ ಪದಾಘಾತದೊಳ್ ಮಕುಟಭಂಗಮುಮಾಗೆ ಸುರಳ್ದು ತೆರಳ್ದು ಸುಯೋಧನನಿರೆ –

ನೆತ್ತಿಯ ಮಿದುಳೊಡೆದುಣ್ಮುವ ।
ನೆತ್ತರ ಧಾರೆಗಳೆ ತೀವೆ ತನ್ನಯ ಮುಖದೊಳ್ ॥
ನೆತ್ತರನೆ ಕಾಱೆ ಕುರುಪತಿ ।
ನೆತ್ತರ ಕಡಲೊಳಗೆ ತೇಂಕಿ ಮುೞುಗುತ್ತಿರ್ದಂ॥೧೭॥

ಕುಂತೀಸುತಭೀಮಗದಾ ।
ಭ್ರಾಂತಂ ಜಂಘಾವ್ಯಪೇತನುಣ್ಮುವ ರಕ್ತಾ ॥
ತ್ಯಂತಪ್ರವಾಹಸಹಿತಂ ।
ಶ್ರಾಂತಂ ರಾಗಿಯವೊಲಿರ್ದನಾ ಕುರುರಾಜಂ ॥೧೮॥

೧೬. "ಒಂದೆಡೆ ಕೃಷ್ಣನ ಆಜ್ಞೆ; ಇನ್ನೊಂದೆಡೆ ರುದ್ರಾವತಾರನಾದ ಅಶ್ವತ್ಥಾಮನು ಬಲಾತ್ಕಾರವಾಗಿ ನನ್ನನ್ನು ಎಳೆದೊಯ್ಯುತ್ತಿರುವನು. ಅತ್ತ ಹುಲಿ, ಇತ್ತ ಕಮರಿ. ಏನು ಮಾಡಲಿ ?" ಎಂದು ಲಕ್ಷ್ಮಿ ದಿಗ್ಭ್ರಾಂತಳಾಗಿ ಕಳವಳಿಸಿದಳು.

ವ॥ ಹೀಗೆ ದಿಗಿಲುಗೊಂಡ ಲಕ್ಷ್ಮಿಯ ಚಂಚಲವಾದ, ದುಂಬಿಗಳಂತೆ ಕಪ್ಪಾದ ಗುಂಗುರು ಕೂದಲುಗಳನ್ನು ಕಯ್ಯಾರೆ ಹಿಡಿದೆಳೆದು, ಕೌರವೇಂದ್ರನ ಘಟದಾಸಿಯನ್ನು ಎಳೆದೊಯ್ವಂತೆ ಅಶ್ವತ್ಥಾಮನು ಮರಳಿ ಹಿಡಿದುಕೊಂಡು ಬಂದನು. ಅಲ್ಲಿ ಭೀಮಸೇನನ ಗದಾಪ್ರಹಾರದಿಂದ ತೊಡೆ ಮುರಿದು, ಒದೆಯಿಂದ ಕಿರೀಟಭಂಗವಾಗಿ, ಹುಡಿಯಲ್ಲಿ ಹೊರಳಾಡಿ, ಮುದುರಿಕೊಂಡು ದುರ್ಯೋಧನನು ಬಿದ್ದಿದ್ದನು.

೧೭. ತಲೆಯೊಡೆದು, ಮೆದುಳು ಹೊರಸೂಸಿ, ಧಾರಾಕಾರವಾಗಿ ಸುರಿಯುವ ನೆತ್ತರು ಮುಖದಲ್ಲೆಲ್ಲ ತುಂಬಿರಲು, ನೆತ್ತರು ಕಾರುತ್ತ ದುರ್ಯೋಧನನು ರಕ್ತದ ಸಮುದ್ರದಲ್ಲಿ ಮುಳುಗಾಡುತ್ತಿದ್ದನು.

೧೮. ಭೀಮನ ಗದಾಪ್ರಹಾರದಿಂದ ಎಚ್ಚರತಪ್ಪಿ, ಅಗಲಿದ ಕಾಲುಳ್ಳವನಾಗಿ, ರಕ್ತಪ್ರವಾಹ ಸಹಿತನಾದ ದುರ್ಯೋಧನನು ಶ್ರಮದಿಂದ ಬಳಲಿದ ಪ್ರಣಯಿಯ (?) ಹಾಗೆ ಇದ್ದನು.

ಕುರುರಾಜಂ ತೊಡೆವೇನೆಗೆ ।
ನರಳನೆ ಕುಱುವಾದ ತೊಡೆಯ ಬೇನೆಗೆ ಕಂಡರ್ ॥
ನರಳ್ವಂತೆ ನರಳದರಸಂ ।
ವಿರೋಧಿಯಿಂದಾದ ಮಾನಹಾನಿಗೆ ನೊಂದಂ ॥೧೯॥

ಅಂತೆನಿಸಿದ ಕುರುರಾಜನಂದನನಂ ಗುರುನಂದನಂ ನೋಡಿ -

ಕುಳಿಕನ ಪಲ್ಗಳಂ ಮುಱಿಯೆ ಮೋದಿದರಾರ್ ಕುಡುಪಿಂದೆ ಸಿಂಹಮಂ ।
ಮುಳಿಯಿಸಿ ದಾಡೆಯಂ ಪಿಡಿದು ಕಿೞ್ತವರಾರ್ ಮದಹಸ್ತಿಯಂ ಭಯಂ ॥
ಗೊಳೆ ನೆಲಕಿಕ್ಕಿ ಕೋಡೆರಡುಮಂ ಕುಸಿಯೊತ್ತಿದರಾರ್ ಸುರಾದ್ರಿನಿ ।
ಶ್ಚಳನಿಬಿಡೋರುಮಂಡಲಮನಾರುಡಿದರ್ ಫಣಿರಾಜಕೇತನಾ ॥೨೦॥

ಎಂದಾಯಸಂಬಟ್ಟು ಕಾಲ ಮೇಲೆ ಕವಿದು ಬಿೞ್ದು -

ಹಾ ಕುರುಕುಲಚೂಡಾಮಣಿ ।
ಹಾ ಕೌರವಚಕ್ರವರ್ತಿ ಹಾ ಸಕಲಧರಿ ॥
ಶ್ರೀಕಾಂತ ನಿನ್ನುಮಂ ಪರ ।
ಲೋಕಕ್ಕಟ್ಟಿದನೆ ಕಾಯ್ದುಮಾಯ್ದು ವಿಧಾತ್ರಂ ॥೨೧॥

ಹಾ ಕುರುವಂಶಮಹಾಕಮ ।
ಲಾಕರಕಲಹಂಸ ಹಾ ಸಮುದ್ರಾಂತಧರಿ ॥
ಶ್ರೀಕಾಂತ ಹಾ ಫಣೀಂದ್ರಪ ।
ತಾಕಾ ವಿಧಿವಶದೆ ನಿನಗಮೀ ಪರಿಯಾಯ್ತೇ ॥೨೨॥

೧೯. ಕುರುರಾಜನು ತೊಡೆಗಳ ನೋವಿನಿಂದ ನರಳಲಿಲ್ಲ ; ತೊಡೆಗೊಂದು ಕುರುವಾದರೆ ನರಳುವ ನಾಡಾಡಿಯಂತೆ ನರಳದೆ, ಶತ್ರುವಿನಿಂದಾದ ಅಪಮಾನಕ್ಕಾಗಿ, ನೊಂದುಕೊಂಡಿದ್ದನು.

ವ॥ ಹೀಗಿರುವ ದುರ್ಯೋಧನನನ್ನು ಅಶ್ವತ್ಥಾಮನು ನೋಡಿ -

೨೦. "ಕುಳಿಕ ಸರ್ಪನನ್ನು ಹಲ್ಲು ಮುರಿಯುವಂತೆ ಹೊಡೆದವರು ಯಾರು ? ಸಿಂಹವನ್ನು ಕೆರಳಿಸಿ ಉತ್ಸಾಹದಿಂದ ಅದರ ಕೋರೆದಾಡೆಯನ್ನು ಹಿಡಿದು ಕಿತ್ತವರಾರು? ಮದದಾನೆಯನ್ನು ಭೀಕರವಾಗಿ ನೆಲಕ್ಕುರುಳಿಸಿ ಕೋರೆಗಳೆರಡನ್ನೂ ಕುಸಿಬೀಳುವಂತೆ ಒತ್ತಿದವರಾರು ? ದುರ್ಯೋಧನಾ, ಮೇರುಗಿರಿಯಂತೆ ಸ್ಥಿರವಾದ, ಸ್ಥೂಲವಾದ ನಿನ್ನ ತೊಡೆಗಳನ್ನು ಮುರಿದವರು ಯಾರು ?"

ವ॥ ಎಂದು ಕಳವಳಿಸಿ, ಕಾಲ ಮೇಲೆ ಬಿದ್ದು -

೨೧. ಅಯ್ಯೋ ಕುರುವಂಶ ಶಿರೋಮಣಿಯೆ! ಅಯ್ಯೋ ಕೌರವ ಚಕ್ರವರ್ತೀ ! ಹಾ ಸಮಸ್ತ ಭೂಮಂಡಲಾಧಿಪತೀ, ಆ ಉಗ್ರನಾದ ದುಷ್ಟವಿಧಿ ನಿನ್ನನ್ನೂ ಪರಲೋಕಕ್ಕೆ ಕಳಿಸಿದನೆ ?

೨೨. ಕುರುವಂಶ ಮಹಾಸರೋವರಕ್ಕೆ ಹಂಸನಾದವನೆ, ಸಮುದ್ರಮುದ್ರಿತ ಧರಾಮಂಡಲಕ್ಕೆಲ್ಲ ಅಧಿಪತಿಯಾದವನೆ, ಸರ್ಪಧ್ವಜನೆ, ಅಯ್ಯೋ ನಿನಗೂ ಇಂತಹ ಗತಿಯೊದಗಿತೆ ?"

ಎಂದು ಗುರುನಂದನಂ ವಿಪ್ರಳಾಪಂಗೆಯ್ದು ತನ್ನ ಮೇಲುದಱ ಸೆಱಂಗಿಂದಾತನ ತಲೆಯ ಮೇಲೆ ಕೆದಱೆರ್ದ ಭೀಮಸೇನನ ಚರಣರಜಮಂ ತೊಡೆದು ಕಳೆದು -

ಸ್ಥಿರಮೂಲಪತ್ರಶತಕರ ।
ಕರಶಾಖಂ ದ್ವಿಜವಿಲಾಸ ಸುಖದಂ ಕುರುಭೂ ॥
ವರನೆಂದೆಸೆದಿರ್ದ ಮಹಾ ।
ತರು ಕೆಡೆದುದು ಭೀಮಗಜದ ಚರಣಾಹತಿಯಿಂ ॥೨೩॥

ಎಂದು ನುಡಿದು ಮನದೊಳ್ ಕಟ್ಟು ಕಡೆದು -

ಎನ್ನಂ ವಂಚಿಸಿ ಬಂದುದ ।
ಱೆನ್ನಿನಗಿನಿತಾಯ್ತವಸ್ಥೆ ಕುರು [ರಾಜಾ] ನೀ ॥
ನಿನ್ನುಂ ಪತಿಕಾರ್ಯಮನಱೆ ।
[ತೆನ್ನಂ] ನೋಡೆನ್ನ ಶಕ್ತಿಯಂ ಭಕ್ತಿಯುಮಂ ॥೨೪॥

ಎಂದು ನುಡಿದ ಭಾರದ್ವಾಜತನೂಜನ ನುಡಿಗೆ ರಾಜರಾಜನವಧಾರಿಸಿ -

ಹತದೈವಂ ಪ್ರಾರಂಭಂ ।
ಪ್ರತಿಕಾರಂ ದೀರ್ಘ ಸೂತ್ರತತ್ಪ್ರತಿಕಾರಂ ।
ಶತಮಾದೊಡಂತು ಮೋಕ್ಷಂ ।
ಹತೋರುಗೆನಗಾವುದಿಂ ಗಡ ಪ್ರತಿಕಾರಂ ॥೨೫॥

ವ॥ ಎಂದು ಪ್ರಲಾಪಿಸಿ, ಆತನ ತಲೆಯ ಮೇಲೆ ಹರಡಿ ಬಿದ್ದ ಭೀಮಸೇನನ ಪಾದಧೂಳಿಯನ್ನು ತನ್ನ ಉತ್ತರೀಯದ ಸೆರಗಿನಿಂದ ಒರಸಿ ತೆಗೆದು -

೨೩. (ಭದ್ರವಾದ ಬೇರುಗಳನ್ನು ಹೊಂದಿ ನೂರು ಕೊಂಬೆಗಳನ್ನು ಪಡೆದು, ಪಕ್ಷಿಗಳಿಗೆ ಸುಖ ಕೊಡುವ ಮರವು ಭೀಕರವಾದ ಆನೆಯ ತುಳಿತದಿಂದ ಮುರಿದು ಬೀಳುವಂತೆ) ಬಹುಕಾಲದಿಂದ ನಡೆದು ಬಂದ ವಂಶದಲ್ಲಿ ಹುಟ್ಟಿ, ನೂರು ಶಾಖೆಗಳನ್ನು (ಮಕ್ಕಳನ್ನು) ಪಡೆದು ಬ್ರಾಹ್ಮಣರಿಗೆ ಸಂತೋಷವೀಯುವ ಮಹಾಪುರುಷ ವೃಕ್ಷವು ಭೀಮನೆಂಬಾನೆಯ ಪದಾಘಾತದಿಂದ ಮುರಿದುಬಿದ್ದಿತು.

ವ॥ ಎಂದು ನುಡಿದು ಮನನೊಂದು -

೨೪. "ನನ್ನನ್ನು ಮರೆಮಾಚಿ ಬಂದುದರಿಂದ ನಿನಗೆ ಇಂತಹ ಅವಸ್ಥೆ ಒದಗಿತು. ಕುರುರಾಜಾ, ಇನ್ನು ಮೇಲಾದರೂ ಸ್ವಾಮಿಕಾರ್ಯವನ್ನು ಅರಿತು ನಾನು ತೋರುವ ಶಕ್ತಿಯನ್ನೂ ಭಕ್ತಿಯನ್ನೂ ನೋಡು."

ವ॥ ಹೀಗೆಂದ ದ್ರೋಣಪುತ್ರನ ಮಾತನ್ನು ಆಲಿಸಿ -

೨೫. ಮೊದಲಿಂದಲೂ ನಾನು ದೈವಹೀನನು. (ನೀನು ಮಾಡುವೆನೆಂಬ) ಪ್ರತಿಕಾರಕ್ಕೆ ತುಂಬ ತಡವಾಯಿತು. ಅದರಿಂದೇನಾದರೂ ಫಲವುಂಟೆ ? ತೊಡೆಗಳನ್ನು

ಎಂದು ಪರಮನಿರ್ವೇದಪರಾಯಣನಾಗಿ ನುಡಿದು -

ಹತದೇಹಹತಭುಜದ್ವಯ ।
ಹತೋರುಹತಜೀವಹತಕಿರೀಟಂ ಹತಹೃ ॥
ತ್ಕೃತಿಕಾರಮೆಂಬುದುಂಟೇ ।
ಗತಿಯಂ ಸಾಧಿಸುವುದಲ್ತೆ ತಾಂ ಪ್ರತಿಕಾರಂ ॥೨೬॥

ಅರಿಚರಣಪಾಂಸು ಪತ್ತಿರೆ ।
ಶರೀರಮಂ ತೊಡೆದು ಕಳೆದೆ ವಸ್ತ್ರಾಂಚಲದಿಂ ॥
ಗುರುನಂದನ ನೀನೆನ್ನೀ ।
ಪರಿಭವಪಾಂಸುವನದೆಂತು ಪೇೞ್ ಕಳೆದಪೆಯೋ ॥೨೭॥

ಎಂದು ನುಡಿದ ಸುಯೋಧನಂಗೆ -

ಹರಿಯ ಬಲದಿಂದೆ ಪಾಂಡವ ।
ರರಿಯರ್ ಗೆಲಲೀಶ್ವರಾಂಗನಶ್ವತ್ಥಾಮಂ ॥
ಪರಬಲನಜೇಯನೆಂದಂ ।
ತರಮಂ ನೃಪನಂತರಂಗದೊಳ್ ಚಿಂತಿಸಿದಂ ॥೨೮॥

ಎಂದು ಚಿಂತಿಸಿ -

ಕಳೆದುಕೊಂಡ ನನಗೆ ಇನ್ನು ಪ್ರತೀಕಾರದಿಂದಾಗುವುದಾದರೂ ಏನು ? [ಪದ್ಯದ ಪಾಠ ಕ್ಲಿಷ್ಟವಾಗಿದೆ. ಒಟ್ಟು ಭಾವವನ್ನು ಊಹಿಸಿ ಬರೆದಿದೆ.]

ವ॥ ಎಂದು ತುಂಬ ನಿರುತ್ಸಾಹದಿಂದ ನುಡಿದು -

೨೬. ನನ್ನ ದೇಹ, ಬಾಹು, ತೊಡೆ, ಜೀವ, ಕಿರೀಟ - ಎಲ್ಲವೂ ಘಾಸಿಯಾಗಿವೆ. ಹೃದಯ ಕೂಡ ಹತವಾಗಿದೆ. ಇದಕ್ಕಿನ್ನು ಪ್ರತಿಕಾರವೆಂಬುದು ಉಂಟೆ ? ಪರಲೋಕದಲ್ಲಿ ಸದ್ಗತಿಯನ್ನು ದೊರಕಿಸಿಕೊಳ್ಳುವುದೊಂದೇ ನನಗಿರುವ ಕಾರ್ಯ. ಅದೇ ಪ್ರತಿಕಾರ.

೨೭. ದ್ರೋಣಪುತ್ರಾ, ನನ್ನ ಮೈಗೆ ಅಂಟಿದ್ದ ಭೀಮನ ಕಾಲ ಧೂಳನ್ನು ನಿನ್ನ ಸೆರಗಿನಿಂದ ಒರಸಿ ತೆಗೆದೆ. ಆದರೆ ನನಗಾದ ಅವಮಾನದ ಕಳಂಕವನ್ನು ಅದು ಹೇಗೆ ಕಳೆಯಬಲ್ಲೆ ನೀನು ? ಹೇಳು.

ವ॥ ಹೀಗೆಂದ ದುರ್ಯೋಧನನು -

೨೮. "ಕೃಷ್ಣನ ಬೆಂಬಲವಿರುವುದರಿಂದ ಪಾಂಡವರನ್ನು ಜಯಿಸುವುದು ಅಸಾಧ್ಯವೇ. ಆದರೆ ಅಶ್ವತ್ಥಾಮನು ರುದ್ರಾಂಶನು, ಮಹಾಶಕ್ತಿಶಾಲಿ, ಯಾರಿಗೂ ಸೋಲುವವನಲ್ಲ." ಎಂದು ಎರಡೂ ಬಲಗಳ ತಾರತಮ್ಯವನ್ನು ಮನದಲ್ಲಿ ಯೋಚಿಸಿ ನೋಡಿದನು.

ಇದುವಂ ನೋಡುವೆನಿನ್ನುಮೆನ್ನೊಡಲೊಳೆನ್ನೀ ಪ್ರಾಣಮುಳ್ಳನ್ನಮೋ ।
ವದೆ ಕೌಂತೇಯರನಿಕ್ಕಿ ಪಂದಲೆಗಳಂ ತಂದೆನ್ನ ಮುಂದಿಕ್ಕು ಕೂ ॥
ರದ ದಾಯಾದರ ಮಿಕ್ಕ ಪಂದಲೆಗಳಂ ಕಣ್ಣಾಱೆ ಕಂಡೆನ್ನ ಚಿ ।
ತ್ತದೊಳೊಂದುಂ ತೊದಳಿಲ್ಲದೆನ್ನ ಸುಗುಣಕ್ಕುತ್ಕ್ರಾಂತಿಯಂ ಮಾಡುವೆಂ ॥೨೯॥

ಎಂಬುದುಮದಾವ ಗಹನಮಂತೆಗೆಯ್ವೆನೆಂದು ಪೂಣ್ದು ಮಹೀಕಾಂತೆಯುಮಂ ಶ್ರೀಕಾಂತೆಯುಮಂ ಕಣ್ಗೆಡೆ ಜಡಿಯೆ –

ಉರಗೇಂದ್ರಫಣಾಮಣಿ ನೂ ।
ಪುರಮಣಿ ಜಲರಾಶಿ ರತ್ನಮೇಖಲೆಯೆನಿಪಾ ॥
ಕುರುಧರೆ ನಿಜರೂಪದೆ ಬಂ ।
ದಿರದಾ ಗುರುಸೂನುಗಟ್ಟೆ ಬೆಸನೇನೆಂದಳ್ ॥೩೦॥

ಒರ್ವಳ್ ಕೊಡೆವಿಡಿವುದು ಮ ।
ತ್ತೊರ್ವಳ್ ಚಾಮರಮನಿಕ್ಕುತಿರ್ಪುದು ಕುರುವಂ ॥
ಶೋರ್ವೀಪತಿಗಾಂ ಬರ್ಪಿನ ।
ಮಿರ್ವರುಮಿಂತಿರ್ಪುದೆಂದನಶ್ವತ್ಥಾಮಂ ॥೩೧॥

ಅಂತಿರ್ವರುಂ ನಿಯೋಜಿಸಿ ನೇಸಱ್ ಪಡುವಿನಮಿರ್ದು ನಿಜಪತಿಯಂ ಬೀೞ್ಕೊಂಡು ಪಯಣಂಬೋಗಿ ಹಸ್ತಿನಾಪುರಮಂ ಪೊಕ್ಕು ಅಲ್ಲಿ –

ವ॥ ಹೀಗೆ ಯೋಚಿಸಿ ನೋಡಿ –

೨೯. "ಇದೂ ಒಂದು ಪ್ರಯತ್ನವನ್ನು ನೋಡಿಬಿಡೋಣ. ನನ್ನ ದೇಹದಲ್ಲಿ ಜೀವವಿರುವ ಅವಧಿಯೊಳಗಾಗಿ ಕುಂತೀಪುತ್ರರನ್ನು ಕೊಂದು, ಅವರ ತಲೆಗಳನ್ನು ತಂದು ನನ್ನ ಮುಂದಿಡು. ನನ್ನ ದಾಯಾದರ ಹಸಿತಲೆಗಳನ್ನು ಕಣ್ತುಂಬ ನೋಡಿ, ನನ್ನ ಮನಸ್ಸಿನಲ್ಲಿ ತೃಪ್ತಿ ಹೊಂದಿ ನಿಶ್ಚಿಂತನಾಗಿ ಪ್ರಾಣಬಿಡುವೆನು."

ವ॥ ಎಂದು ನುಡಿಯಲಾಗಿ, "ಇದೇನು ದೊಡ್ಡ ಕೆಲಸ ? ಆಗಲಿ. ಹಾಗೆಯೆ ಮಾಡುವೆನು" ಎಂದು ಪ್ರತಿಜ್ಞೆ ಮಾಡಿ, ಅಶ್ವತ್ಥಾಮನು, ಭೂದೇವಿಯನ್ನೂ ಲಕ್ಷ್ಮೀದೇವಿಯನ್ನೂ ಕಂಗಾಲಾಗುವಂತೆ ಗದರಿಸಿದನು.

೩೦. ಆದಿಶೇಷನ ಹೆಡೆಯ ರತ್ನಗಳನ್ನೆ ಕಾಲಂದುಗೆಯಲ್ಲಿ ಧರಿಸಿಕೊಂಡು. ಸಮುದ್ರವನ್ನೆ ರತ್ನಕಟೀಸೂತ್ರವಾಗಿ ಮಾಡಿಕೊಂಡಿರುವ ಕುರುಭೂಮಿಯೆಂಬ ದೇವಿ ಪ್ರತ್ಯಕ್ಷಳಾಗಿ ಬಂದು ಗುರುಪುತ್ರನಿಗೆ "ಅಪ್ಪಣೆಯೇನು ?" ಎಂದಳು.

೩೧. "ನಾನು ಮರಳಿ ಬರುವವರೆಗೂ ನಿಮ್ಮಲ್ಲಿ ಒಬ್ಬಳು ಕೌರವೇಶ್ವರನಿಗೆ ಕೊಡೆ ಹಿಡಿದುಕೊಂಡಿರಲಿ. ಇನ್ನೊಬ್ಬಳು ಚಾಮರ ಬೀಸುತ್ತಿರಲಿ" ಎಂದು ಅಶ್ವತ್ಥಾಮನು ಆಜ್ಞಾಪಿಸಿದನು.

ವ॥ ಹೀಗೆ ಅವರನ್ನು ಕೆಲಸಕ್ಕೆ ನಿಯಮಿಸಿ, ಸೂರ್ಯಾಸ್ತವಾಗುವವರೆಗೆ ತಡೆದು

ಕಂಜನವನದಂತೆ ಲಕ್ಷ್ಮೀ ।
ರಂಜಿತಮುಂ ಚಿತ್ರಪತ್ರಮುಂ ಚಕ್ರಾಂಕ ॥
ವ್ಯಂಜಿತಮುಮಪ್ಪ ಬೀಡಂ ।
ಮಂಜಿಜೆವಂತಿರುಳೊಳಿಜಿದನಶ್ವತ್ಥಾಮಂ ॥೩೨॥

ಅಂತಿಜಿವಾಗಳ್ ಕೆಲವುದಿವಸಂ ಕಾದಿ ಪಿರಿದುಂ ಪಯಣಂಬಂದು ಬಟಲ್ದು ಕೋರೈಸಿ ನಿದ್ರೆಗೆಯ್ದುವರ್ ತೊಟ್ಟನೆ ನಿದ್ರೆಯಿಂದೆಚ್ಚತ್ತು ಮುಟ್ಟವಂದಾಗಳಾ ಕಳಕಳಮಂ ಕೇಳ್ದು ಕರತಳದಿಂ ಕಣ್ಣಂ ಪೊಸೆಯುತ್ತುಮೆೞ್ದು ತಂತಮ್ಮ ತಲೆದೆಸೆಯೊಳಿರ್ದ ಕರವಾಳಂ ಕೊಂಡು ನಿಂದ ನೆಲೆಯೊಳ್ ತಳರದಿರ್ದಂ ತಲೆಗಾಪಿನಾಳುಕ್ಕಡದಾಳ ಮೇಲಿಕ್ಕಿ ಉಕ್ಕಡದಾಳ್ ಘರವಟ್ಟಗೆಯಾಳ ಮೇಲಿಕ್ಕಿ ಘರವಟ್ಟಗೆಯಾಗೆ ಮಾಮುಸಕಂ ಮಸಗಿ ಜವಂ ನೇಜಿ ಬರ್ಚಿದಂತೆ ಪೆಂಡಿರ್ ಮಕ್ಕಳೆನ್ನದೆ ನಿವಳಿವಟ್ಟಮಪ್ಪಿನಮೊಂದಕ್ಷೋಹಿಣೀಬಲಮೆಲ್ಲಮಂ ಪೇಟಿಪೆಸರಿಲ್ಲಮೆಂಬಂತೆ ಕೊಂದು ತನಗೆ ಕಟ್ಟಿದಿರೊಳಿರ್ದ ಧೃಷ್ಟದ್ಯುಮ್ನನುಮಂ ಮುಟ್ಟ ಮೂದಲಿಸಿ ತಮ್ಮಯ್ಯನಂ ಪರಿಭವಿಸಿದ ಪಗೆಯಂ ಕೊಂದು ದೆಸೆವಲಿಗೆಯ್ದು ಶಿಖಂಡಿ ಚೇಕಿತಾನ ಯುಧಾಮನ್ಯೂತ್ತಮೌಜಸಪ್ರಭೃತಿಗಳುಮನಿಕ್ಕಿ ಪಾಂಡವರ ಶಂಕೆಯಿಂ ಶ್ರುತ ಸೋಮಕ ಪ್ರಭೃತಿಗಳಪ್ಪ ಪಂಚಪಾಂಡವರ ತಲೆಗಳಂ ಕೊಂಡು ತಟತಟನೆ ನೇಸಱ್ ಮೂಡುವಾಗಳ್ ಬಂದು – ಕೊಳ್ ನಿನ್ನ ನಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡಾ ಮಹಾನುಭಾವನಾ ತಲೆಗಳಂ ನೀಡುಂ ಭಾವಿಸಿ ನೋಡಿ –

ಆಮೇಲೆ ದುರ್ಯೋಧನನಿಂದ ಅನುಮತಿಯನ್ನು ಪಡೆದು ನಡೆಯುತ್ತ ಹಸ್ತಿನಾಪುರವನ್ನು ಹೊಕ್ಕನು. ಅಲ್ಲಿ -

೩೨. "ಲಕ್ಷ್ಮೀರಂಜಿತ"ವಾದ (೧. ಲಕ್ಷ್ಮೀದೇವತೆಯಿಂದೊಡಗೂಡಿ ಶೋಭಿಸುವ. ೨. ಐಶ್ವರ್ಯದಿಂದ ವಿಜೃಂಭಿಸುವ), "ಚಿತ್ರಪತ್ರ"ವಾದ (೧. ಬಗೆಬಗೆಯ ಎಲೆಗಳನ್ನುಳ್ಳ. ೨. ಚಿತ್ರಮಯವಾದ ರಥಗಳನ್ನುಳ್ಳ), "ಚಕ್ರಾಂಕವ್ಯಂಜಿತ"ವಾದ (೧. ಚಕ್ರವಾಕಪಕ್ಷಿಗಳಿಂದ ವ್ಯಕ್ತವಾದ. ೨. ರಥದ ಗಾಲಿಗಳ ಗುರುತಿನಿಂದ ಕೂಡಿದ) ಆ ಶಿಬಿರಕ್ಕೆ ಬಂದು ಕಮಲ ಸರೋವರವನ್ನು ಹಿಮವು ಘಾತಿಸುವಂತೆ, ಆ ಶಿಬಿರವನ್ನು ಅಶ್ವತ್ಥಾಮನು ಘಾತಿಸಿದನು.

ವ॥ ಹಾಗೆ ಘಾತಿಸುವಾಗ, ಕೆಲವು ದಿನಗಳಿಂದ ಯುದ್ಧಮಾಡಿ ಮಾಡಿ, ಆನಂತರ ದೀರ್ಘ ಪ್ರವಾಸದಿಂದ ಆಯಾಸವಾಗಿ ಗಾಢವಾಗಿ ನಿದ್ರೆಮಾಡುತ್ತಿದ್ದವರು, ಒಮ್ಮೆಲೆ ಎಚ್ಚೆತ್ತು, ಕೋಲಾಹಲ ಧ್ವನಿಯನ್ನು ಕೇಳಿ, ಕೈಗಳಿಂದ ಕಣ್ಣು ತಿಕ್ಕಿಕೊಳ್ಳುತ್ತ ಎದ್ದು ತಂತಮ್ಮ ತಲೆಯ ದೆಸೆಗಿದ್ದ ಖಡ್ಗಗಳನ್ನು ತೆಗೆದುಕೊಂಡು ನಿಂತಲ್ಲಿಯೆ ಸ್ಥಿರವಾಗಿ ನಿಂತುಕೊಂಡ ಕಾವಲಿನಾಳುಗಳನ್ನೂ ಉಕ್ಕಡದ ಆಳುಗಳನ್ನೂ ಗಸ್ತು ತಿರುಗುವ ಆಳುಗಳನ್ನೂ ಅಶ್ವತ್ಥಾಮನು ಆಕ್ರಮಿಸಿ, ಕೋಪಾವೇಶದಿಂದ ಯಮದೇವತೆಯೇ ಮೇಲೆ ಬಿದ್ದು ಇರಿದಂತೆ ಹೆಂಗಸರು ಮಕ್ಕಳು ಎನ್ನದೆ ನಿವಾಳಿಸಿ ಚೆಲ್ಲುವಂತೆ ಒಂದು ಅಕ್ಷೋಹಿಣಿ ಸೈನ್ಯವನ್ನೆಲ್ಲ ಹೇಳ ಹೆಸರಿಲ್ಲದಂತೆ ಕೊಂದು, ತನ್ನ ಎದುರಿಗಿದ್ದ ಧೃಷ್ಟದ್ಯುಮ್ನನನ್ನು ಮರ್ಮಾಂತಿಕವಾಗಿ ಹಂಗಿಸಿ, ತನ್ನ ತಂದೆಯನ್ನು ಅವಮಾನಗೊಳಿಸಿದ ವೈರಿಯನ್ನು ಕೊಂದು ದಿಗ್ಬಲಿಕೊಟ್ಟು, ಶಿಖಂಡಿ ಚೇಕಿತಾನ ಯುಧಾಮನ್ಯು, ಉತ್ತಮೌಜಸ ಮೊದಲಾದವರನ್ನೆಲ್ಲ ವಧೆಮಾಡಿ,

ಪವನಜನಾಸ್ಯಮಲ್ತಿದವನಾನನಮಪ್ಪೊಡೆ ಮಟ್ಟಮಿರ್ದು ನೋ ।
ಡುವುದೆ ಮದೀಯವಕ್ತ್ರಮನೆ ಕೆಮ್ಮನೆ ಪೋಯ್ತುಜೆವಿಲ್ಲದಾಯ್ತು ಪಾಂ ॥
ಡವರ ಶಿರಂಗಳಲ್ಲವಿವು ಪಾಂಡವಸೂನುಗಳಪ್ಪ ಪಂಚಪಾಂ ।
ಡವರ ಶಿರಂಗಳಂ ನೆಱೆ ವಿಚಾರಿಸದಕ್ಕಟ ಕೊಂಡು ಬರ್ಪುದೇ ॥೩೩॥

ಪರಮೇಶ್ವರಾವತಾರನೆ ।
ಪರಮಜ್ಞಾನಿಯೆ ವಿವೇಕವಿಕಳರವೊಲ್ ಬಾ ॥
ಲರ ತಲೆಯಂ ತಂದುದಱಿಂ ।
ದೊರೆಕೊಂಡುದು ನಿನಗೆ ಪಾತಕಂ ಬಾಲವಧಂ ॥೩೪॥

ಅದುಕಾರಣಂ [ನೀಂ] ಪ್ರಾಯಶ್ಚಿತ್ತಪವಿತ್ರಗಾತ್ರನಾಗೆ ಹಿಮವಂತಕ್ಕೆ ಪೋಪುದೆಂದು [ಸುಯೋಧನನ ನುಡಿದ ನುಡಿಯನವಧಾರಿಸಿ ರುದ್ರಾವತಾರಂ ಕರಂ ಸಿಗ್ಗಾಗಿ ಪಶ್ಚಾತ್ತಾಪಂಬಟ್ಟಾ ಪ್ರದೇಶದಿಂ ತಳರ್ದು ಹಸ್ತಿನಾಪುರದ ಪುರವೀಥಿಗಳೊಳಗನೆ ಬರುತ್ತುಮಂದಿನ ಯುದ್ಧಾವಸಾನದೊಳಾದ ಕಳಕಳದಿಂ ಕಳಕುಳಮಾದ ಪುರಜನಂಗಳ ನೆರವಿಯೊಳಗೋರೊಂದೆಡೆಯೊಳ್ ಪವಳದ] ಮುತ್ತಿನ ಮಾಣಿಕದ ಪೇಳಿಗೆಗಳಂ ಪೊತ್ತು ಕಳಕಳವಿದೇನೆಂದು ನೆರೆಯಂಗಡಿಯ ಮುಂದಣಂಗಡಿಯ ಪರದರಂ ಕಂಡು ಬೆಸಗೊಳ್ವ [ಪಚ್ಚಪಸಿ] ಯೆಗ್ಗರುಮಂ ಕುಬ್ಜವಾಮನಬಧಿರಜನಂಗಳ್ವೆರಸು ತಮ್ಮಂ ತೆಗೆವರ ಕಯ್ಯಂ ಪತ್ತಿ ಬರ್ಪ [ಗಾವಿಲರುಮಂ ಪುರಜನಂಗಳ್ವೆರಸು ಪುರವೀಥಿಗಳಂ ಸುತ್ತಿಯುಂ] ಬಳಸಿಯುಂ

ಪಾಂಡವರೆಂಬ ಭ್ರಾಂತಿಯಿಂದ ಶ್ರುತಸೋಮಕನೆ ಮೊದಲಾದ ಐವರು ಪಾಂಡವಪುತ್ರರ ತಲೆಗಳನ್ನು ಕತ್ತರಿಸಿ ತೆಗೆದುಕೊಂಡು, ಸೂರ್ಯನು ಮೂಡುವ ಹೊತ್ತಿಗೆ ಮರಳಿ ಬಂದು, "ಇಕೊ ನೀನು ಬಯಸಿದ ಪಾಂಡವ ರುಂಡಗಳು" ಎಂದು ದುರ್ಯೋಧನನ ಮುಂದೆ ಇಟ್ಟನು. ಮಹಾ ಸತ್ತ್ವಶಾಲಿಯಾದ ದುರ್ಯೋಧನನು ಆ ರುಂಡಗಳನ್ನು ದೀರ್ಘಕಾಲದವರೆಗೆ ಪರೀಕ್ಷಿಸಿ ನೋಡಿ ಹೀಗೆ ನುಡಿದನು.

೩೩. "ಇದು ಭೀಮನ ಮುಖವಲ್ಲ. ಭೀಮನದಾಗಿದ್ದರೆ ಅದು ಹೀಗೆ ತೆಪ್ಪಗೆ ನನ್ನ ಮುಖವನ್ನು ನೋಡುವುದುಂಟೆ ? (ನಿನ್ನ ಶ್ರಮ) ವ್ಯರ್ಥವಾಯಿತು ; ನಿನಗೆ ತಿಳಿಯದಾಯಿತು. ಪಾಂಡವರ ರುಂಡಗಳಲ್ಲವಿವು ; ಅಯ್ಯೋ ! ಪಾಂಡವ ಪುತ್ರರಾದ ಉಪಪಾಂಡವರ ತಲೆಗಳನ್ನು ನೋಡದೆ ಕುಯ್ದು ತಂದೆಯಾ ?

೩೪. ಪರಮೇಶ್ವರನ ಅವತಾರನಾದ ಮಹಾಜ್ಞಾನಿಯೆ, ತಿಳಿಗೇಡಿಗಳಂತೆ ವರ್ತಿಸಿ, ಬಾಲಕರ ರುಂಡಗಳನ್ನು ಕತ್ತರಿಸಿ ತಂದುದರಿಂದ ನಿನಗೆ ಬಾಲವಧೆಯ ಪಾಪ ಉಂಟಾಯಿತು.

ವ॥ ಆದುದರಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಹಿಮವಂತ ಪರ್ವತಕ್ಕೆ ಹೋಗು". ಹೀಗೆ ದುರ್ಯೋಧನನು ನುಡಿದ ಮಾತನ್ನು ಕೇಳಿ, ಅಶ್ವತ್ಥಾಮನು ಜುಗುಪ್ಸೆ ಹೊಂದಿ, ಪಶ್ಚಾತ್ತಾಪಬಟ್ಟು ಆ ಸ್ಥಳದಿಂದ ಹೊರಟು ಹಸ್ತಿನಾವತಿಗೆ ಬಂದನು. ಅಲ್ಲಿಯ ಬೀದಿಗಳಲ್ಲಿ ಅವನು ಬರುತ್ತಿರುವಾಗ, ಅಂದಿನ ಯುದ್ಧಾಂತ್ಯದಲ್ಲುಂಟಾದ ಕೋಲಾಹಲಕ್ಕೆ

ಬರ್ಪ ವೃದ್ಧಕಂಚುಕಿಗಳುಮಂ ಪೊಟ್ಟೆ ಬಟ್ಟಾಗಿರ್ದು ಪೆಱನಟ್ಟ ನಡುವಂ ನೋಡಿ ಪೊಕ್ಕು ಮಿಟ್ಟೆಂದು ಮಿಡುಕಲಣ್ಮದೆ [ಕಟ್ಟಚ್ಚರಿಗೊಳ್ವ ಘರವಟ್ಟ]ಗೆಯ ಕಾಪಿನಾಳ್ಗಳುಮಂ ಕಜ್ಜಮಂ ಕಾಲಮಂ ಪಾರ್ವ ಕಜ್ಜಗಲಿಗಳುಮಂ ಮಾರ್ಗಮಿಾಯದ ಬಿದಿರದ ಲೋಭಿಗಲಿಗಳುಮಂ ನೊಂದು ಪಲ್ಗಿಱಿದೋಡುವ ಪುಲ್ಗಗಳುಮಂ ಮೋದಿ ಮೆಯ್ಯೊಳ್ ನಿಂದಿಱಿವ ಅರಿಗಲಿಗಳುಮಂ ಸೆರಗಂ ಬೆಱಗಂ ಬಗೆಯದ ನಿಚ್ಚಟಗಲಿಗಳುಮಂ ಎತ್ತಾನುಮಿ [ರ್ದುಮಿಱಿವಂ]ದೋಡಿಱಿವ ಧುರಗಲಿಗಳುಮಂ ಆಳ್ದನ ಬೆಸನಂ ಮರಳಿ ಕೇಳದ ಬೆಸಗಲಿಗಳುಮಂ ಉಬ್ಬಾಳಿಯಳವಿಯ ಲೆಕ್ಕಕ್ಕಿಱಿದು ಬೆಸಕೆಯ್ವ ಪಟಿಗಲಿಗಳುಮಂ ಅಳವನಱಿದು ಬೇಗಿಱಿವ ಬಲ್ಗಲಿಗಳುಮಂ ಮಾರ್ಬಲಮಂ ಕಂಡು ಪೂಣೆಸಿಱಿವ ಕಡುಗಲಿಗಳುಮಂ ಬೇಡಿದರ್ಗೆ ಬೇಡಿತಂ ಕೊಟ್ಟು ಬಂದಿಱಿವ ಕಸವರಗಲಿಗಳುಮಂ ಮತ್ತಮಣ್ಮಿ ನಡೆದಿಱಿವ ನಡೆಗಲಿಗಳುಮಂ ನೋಡಿ [ವಿಸ್ಮಯಂಬಟ್ಟು] ರೌದ್ರಪ್ರಾಯಶ್ಚಿತ್ತ ಪ್ರವರ್ತನಾರ್ಥಂ ಹಿಮವತ್ಪರ್ವತಕ್ಕೆ ಪೋಪುದುಂ [ಸುಯೋಧನಂ] ಚಿತ್ತಸಮಾಧಾನಂಗೆಯ್ದು ಅಜಿತನಂ ಸ್ಮರಿಯಿಸಿ ಪರಲೋಕಮಂ ಸಾಧಿಸುವೆನೆಂದು [ಕೃತವರ್ಮಾದಿಗಳಂ ಪರಿಜನಂಗಳುಮಂ] ವಿಸರ್ಜಿಸಿ ತದ್ದಿವಸಾವಸಾನಸಮಯದೊಳ್ ಪ್ರಾಣವಿಸರ್ಜನೋನ್ಮುಖ ನಾದನಿಂತು -

ಈಡಾಗಿ ಪುರಜನರು ಹಿಂಡುಹಿಂಡಾಗಿ ನೆರೆದಿದ್ದರು. ಅವರಲ್ಲೊಂದು ಕಡೆ ಹವಳ, ಮುತ್ತು, ಮಾಣಿಕಗಳ ಪೆಟ್ಟಿಗೆಗಳನ್ನು ಹೊತ್ತುಕೊಂಡು "ಇದೇನು ಗಲಾಟೆ," ಎಂದು ಮುಂದಿನ ಅಂಗಡಿಯ, ಪಕ್ಕದಂಗಡಿಯ ವ್ಯಾಪಾರಿಗಳನ್ನು ಕಂಡು ಕೇಳುತ್ತಿರುವ ಶುದ್ಧ ಮೂಢರನ್ನೂ, ಗೂನ, ಕುಳ್ಳ, ಕಿವುಡ ಜನರೊಡನೆ ತಮ್ಮನ್ನು ಹಿಡಿದವರ ಕೈಯೊಡನೆ ಬರುವ ಹೆಡ್ಡರನ್ನೂ, ಪುರಜನರೊಡನೆ ಪಟ್ಟಣದ ಬೀದಿಗಳನ್ನು ಸುತ್ತಿ ಬಳಸಿ ಬರುವ ಮುಪ್ಪಿನ ಕಂಚುಕಿಗಳನ್ನೂ, ಮಿಟ್ಟುಮಿಸುಕಲಾರದೆ ವಿಸ್ಮಯಾಕ್ರಾಂತರಾದ ಗಸ್ತಿಯ ಕಾವಲಿನ ಆಳುಗಳನ್ನೂ, ಸಮಯಕ್ಕಾಗಿ ಎದುರುನೋಡುತ್ತಿರುವ ಕರ್ಮವೀರರನ್ನೂ, ಹಾದಿಬಿಡದೆ ಅಡ್ಡಗಟ್ಟುವ ಲೋಭಿಕಲಿಗಳನ್ನೂ, ನೊಂದು ಹಲ್ಲುಕಿರಿದು ಓಡುವ ಕ್ಷುದ್ರಕಲಿಗಳನ್ನೂ, ಅಚಲವಾಗಿ ನಿಂತು ಹೋರಾಡುವ ಶತ್ರುಯೋಧರನ್ನೂ, ಸಹಾಯವನ್ನಪೇಕ್ಷಿಸದೆ ನಿರ್ಭೀತರಾಗಿರುವ ನೈಜ ವೀರರನ್ನೂ, ಎಲ್ಲಿಯೋ ಇದ್ದು ಓಡಿಬಂದು ಇರಿಯುವ ಯುದ್ಧವೀರರನ್ನು, ಒಡೆಯನ ಅಪ್ಪಣೆಯನ್ನು ಮರಳಿ ಕೇಳದ (ಕೂಡಲೆ ಅದನ್ನು ನಿರ್ವಹಿಸುವ) ಸೇವಾಶೂರರನ್ನು, ಲೆಕ್ಕಕ್ಕೆ ಮಾತ್ರ ಹೋರಾಡುವ ಹಳೆಯ ಕಲಿಗಳನ್ನೂ, ಸಾಮರ್ಥ್ಯವನ್ನು ಅರಿತುಕೊಂಡು ಹೋರಾಡುವ ಬಲಿಷ್ಠ ವೀರರನ್ನೂ, ಶತ್ರುಬಲವನ್ನು ಕಂಡು ನಿಕರವಾಗಿ ಹೋರಾಡುವ ಮಹಾವೀರರನ್ನೂ, ಬೇಡಿದವರಿಗೆ ಬೇಡಿದುದನ್ನು ಕೊಟ್ಟು ಬಂದು ಯುದ್ಧ ಮಾಡುವ ಶ್ರೇಷ್ಠಶೂರರನ್ನೂ, ಪರಾಕ್ರಮದಿಂದ ಮುನ್ನುಗ್ಗಿ ಹೋರಾಡುವ ಪದಾತಿವೀರರನ್ನೂ ನೋಡಿ, ಬೆರಗಾಗಿ, ಭಯಾನಕವಾದ ಪಾತಕಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಉದ್ದೇಶದಿಂದ ಅಶ್ವತ್ಥಾಮನು ಹಿಮವತ್ಪರ್ವತಕ್ಕೆ ಹೋದನು. ದುರ್ಯೋಧನನು ಮನಸ್ಸನ್ನು ಸಂತೈಸಿಕೊಂಡು, ಪರಮಾತ್ಮನನ್ನು ಸ್ಮರಿಸಿ, ಸ್ವರ್ಗವನ್ನು ಗಳಿಸಿಕೊಳ್ಳುವೆನೆಂದು, ಕೃತವರ್ಮ ಮೊದಲಾದವರನ್ನೂ, ಪರಿಜನರನ್ನೂ ಕಳಿಸಿ, ಆ ದಿನ ಸಾಯಂಕಾಲ ಸಮಯದಲ್ಲಿ ಪ್ರಾಣಬಿಡುವುದಕ್ಕೆ ಸಿದ್ಧನಾದನು.

ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ ।
ಜಂ ಕಿಡುತಿರ್ಪಿನಂ ನಿಜಕರಂಗಳನಂದುಡುಗುತ್ತುಮಿರ್ದು ಚ ॥
ಕ್ರಾಂಕಮಗಲ್ವಿನಂ ಕ್ರಮದಿನಂಬರಮಂ ಬಿಸುಟುರ್ವಿಗಂಧಕಾ ।
ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ ॥೩೫॥

ಮೊದಲೊಳ್ ಶಂತನುಸೂನು ಪತ್ತುದಿವಸಂ ಚಾಪಾಗಮಾಚಾರ್ಯನ ।
ಯ್ದುದಿನಂ ಭಾಸ್ಕರನಂದನಂ ದಿನಯುಗಂ ಶಲ್ಯಂ ಭರಂಗೆಯ್ದು ಕಾ ।
ದಿ [ದೊಡಾದರ್ಧದಿನಂ ದಿನಾರ್ಧದ] ಗದಾಯುದ್ಧಂ ಪರಿಚ್ಛಿನ್ನಮಿಂ ।
ತು ದಿನಂಗಳ್ ಪದಿನೆಂಟಱಿಂ ಸಮೆದುದಾ ರೌದ್ರಾವಹಂ ಭಾರತಂ ॥೩೬॥

ಕದನಂ ಮಾರ್ಗಶಿರದ ಶು ।
ದ್ಧದಿನಂ ತೇರಸಿ [ಯ ತಾರೆ] ಭರಣಿಯೊಳಾ ಮೂ ॥
ಲದ ಕಡೆಯಮವಾಸೆಯ ಪ ।
ರ್ವದೊಳಂ ನಿರ್ಮೂಲಮಾಯ್ತು ಕೌರವವಂಶಂ ॥೩೭॥

ಅಂತು ಭಾರತಂ ಸಮರಭಾರಾವತಾರಮಾಗೆ -

೩೫. [ಈ ಪದ್ಯದಲ್ಲಿ ಸೂರ್ಯಾಸ್ತವನ್ನೂ, ದುರ್ಯೋಧನನ ಮರಣವನ್ನೂ ಶ್ಲೇಷೆಯಿಂದ ವರ್ಣಿಸಲಾಗಿದೆ. ಮೊದಲನೆಯ ಅರ್ಥವನ್ನು ಸೂರ್ಯನಿಗೂ ಎರಡನೆಯದನ್ನು ದುರ್ಯೋಧನನಿಗೂ ಅನ್ವಯಿಸಿಕೊಳ್ಳಬೇಕು] ಕಮಲಗಳೂ, ಮಿತ್ರರ ಮುಖಕಮಲಗಳೂ ಬಾಡಿ ಮುಚ್ಚಿಕೊಳ್ಳುತ್ತಿರಲು, ಅತಿಶಯವಾದ 'ತೇಜ' (೧. ಪ್ರಕಾಶ. ೨. ಸಾಮರ್ಥ್ಯ)ವು ಕುಗ್ಗುತ್ತಿರಲು, ತನ್ನ 'ಕರ' (೧. ಕಿರಣ ೨. ಕೈ)ಗಳನ್ನು ಮುದುಡಿ ಕೊಳ್ಳುತ್ತಿದ್ದು, 'ಚಕ್ರಾಂಕ' (೧. ಚಕ್ರವಾಕ ದಂಪತಿಗಳು. ೨. ಚಕ್ರವರ್ತಿಪದವಿ) 'ಅಗಲ್ವಿನಂ' (೧. ಅಗಲುತ್ತಿರಲು, ೨. ಬಿಟ್ಟು ಹೋಗುತ್ತಿರಲು), ಕ್ರಮೇಣ 'ಅಂಬರ' (೧. ಆಕಾಶ ೨. ವಸ್ತ್ರ ?)ವನ್ನು ತ್ಯಜಿಸಿ, 'ಉರ್ವಿ'ಗೆ (೧. ಭೂಮಿಗೆ ೨. ದೇಶಕ್ಕೆ)ಲ್ಲಕ್ಕೂ, 'ಅಂಧಕಾರ' (೧. ಕತ್ತಲೆ. ೨. ದುಃಖ) ಆವರಿಸುತ್ತಿರಲು, ಸೂರ್ಯನೂ, ಕುರುವಂಶಸೂರ್ಯನೂ ಅಸ್ತಂಗತರಾದರು.

೩೬. ಮೊದಲಿಂದ ಹತ್ತುದಿನಗಳವರೆಗೆ ಭೀಷ್ಮನೂ, ಮುಂದಿನ ಐದು ದಿನ ದ್ರೋಣನೂ, ಆ ಮೇಲೆ ಎರಡು ದಿನ ಕರ್ಣನೂ, ಬಳಿಕ ಅರ್ಧ ದಿನ ಶಲ್ಯನೂ ಯುದ್ಧಮಾಡಿದರು. ಇನ್ನುಳಿದ ಅರ್ಧ ದಿನದಲ್ಲಿ ಗದಾಯುದ್ಧ ಮುಗಿಯಿತು. ಹೀಗೆ ಹದಿನೆಂಟು ದಿನಗಳವರೆಗೆ ಭೀಕರವಾದ ಭಾರತ ಯುದ್ಧ ನಡೆಯಿತು.

೩೭. ಯುದ್ಧವಾರಂಭವಾದುದು ಮಾರ್ಗಶಿರ ಶುದ್ಧತ್ರಯೋದಶಿ ಭರಣೀ ನಕ್ಷತ್ರದಲ್ಲಿ ; ಅಮಾವಾಸ್ಯೆಯ ದಿನ ಮೂಲಾನಕ್ಷತ್ರದ ಕಡೆಯ ಚರಣದಲ್ಲಿ ಕೌರವ ವಂಶವು ನಿರ್ವಂಶವಾಯಿತು.

ವ॥ ಹೀಗೆ ಭಾರತ ಯುದ್ಧವು ಮುಗಿಯಲಾಗಿ -

ಜಯಲಕ್ಷ್ಮೀಪ್ರಿಯನೊಳ್ ಪರಾಕ್ರಮಕೃತಾಲಂಕಾರನೊಳ್ ಸತ್ಯವಾ ।
ದಿಯೊಳರ್ಥಿಪ್ರಿಯನೊಳ್ ಧರಾಪ್ರಣಯಿಯೊಳ್ ನಿರ್ದ್ವೇಷಿಯೊಳ್ ಪಂಡಿತಾ ॥
ಶ್ರಯನೊಳ್ ರಾಜಿತರಾಜಚಿಹ್ನ [ಯುತನೊಳ್] ಶ್ರೀದೇವಿಯುಂ ಭೂಮಿದೇ ।
ವಿಯುಮುತ್ಕುತ್ಸವದಿಂದೆ ಬಂದು ನೆರೆದರ್ ಚಾಳುಕ್ಯಕಂದರ್ಪನೊಳ್ ॥೩೮॥

ಧರಣೀಕಾಂತೆ [ಸುಹರ್ಷದಿಂ] ಪರಸೆಯುಂ ಶ್ರೀಕಾಂತೆ ಸೇಸಿಕ್ಕೆಯುಂ ।
ಪರಮಾನಂದದೆ ಸೇಸೆಯಂ ಪರಕೆಯಂ ತಾನಾಂತುಕೊಂಡಾಗಳಾ ॥
ದರದಿಂ ದಕ್ಷಿಣಬಾಹುದಂಡದೆ ಜಯಶ್ರೀಕಾಂತೆಯಂ ತಾಳ್ದಿ ಮೂ ।
ವ [ರನಾ] ಕಾಂತೆಯರಂ ಮನಂಗೊಳಿಸಿದಂ ಚಾಳುಕ್ಯಕಂಠೀರವಂ ॥೩೯॥

ಗದ್ಯ॥ ಇದು ಸಮಸ್ತಭುವನವಲ್ಲಭನಜನಾಶ್ರಯಂ ಶ್ರೀ ಪೃಥ್ವಿವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯ ಕುಲತಿಲಕಂ ಶ್ರೀಮದಾಹವಮಲ್ಲದೇವ ಶ್ರೀಪಾದಕಲ್ಪಪಾದಪಾಶ್ರಯಾಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಚಾಳುಕ್ಯಚಕ್ರವರ್ತಿ ಶ್ರೀಸಾಹಸಭೀಮ ವಿಜಯದೊಳ್ ದುರ್ಯೋಧನೋತ್ಕ್ರಾಂತಿವರ್ಣನಂ ನವಮಾಶ್ವಾಸಂ ಸಂಪೂರ್ಣಂ

೩೮. ಶೌರ್ಯವನ್ನೆ ಅಲಂಕಾರವಾಗಿ ಮಾಡಿಕೊಂಡವನೂ, ಸತ್ಯವಾದಿ (ಸತ್ಯಾಶ್ರಯನೆಂಬ ಬಿರುದುಳ್ಳವನೂ), ಯಾಚಕಜನಕ್ಕೆ ಪ್ರಿಯನಾದವನೂ, ಭೂಪತಿಯೂ, ಶತ್ರುಗಳನ್ನೆಲ್ಲ ನಿರ್ಮೂಲ ಮಾಡಿದವನೂ, ವಿದ್ವಜ್ಜನಕ್ಕೆ ಆಶ್ರಯದಾತನೂ, ಉಜ್ವಲವಾದ ರಾಜಚಿಹ್ನೆಗಳನ್ನು ಹೊಂದಿದವನೂ ಆದ ಚಾಳುಕ್ಯ ಕಂದರ್ಪ (ಮನ್ಮಥನಂತಿರುವ ಭೀಮಸೇನ)ನನ್ನು ಲಕ್ಷ್ಮೀದೇವಿ ಹಾಗೂ ಭೂದೇವಿಯರಿಬ್ಬರೂ ತುಂಬ ಉತ್ಸಾಹದಿಂದ ಮೆಚ್ಚಿ ಬಂದು ಸೇರಿದರು.

೩೯. ಭೂದೇವಿಯು ಆನಂದದಿಂದ ಹರಸಲಾಗಿ ಲಕ್ಷ್ಮೀದೇವಿ ಶೇಷಾಕ್ಷತೆಗಳನ್ನು ಇಡಲಾಗಿ, ಅತ್ಯಂತ ಹರ್ಷಿತನಾಗಿ ಭೀಮಸೇನನು ಆ ಆಶೀರ್ವಾದಗಳನ್ನೂ, ಶೇಷಾಕ್ಷತೆಗಳನ್ನೂ ಪಡೆದುಕೊಂಡು ಆದರಪೂರ್ವಕವಾಗಿ ಜಯಶ್ರೀಯನ್ನು ಬಲದೋಳಿನ ಮೇಲೆ ಇರಿಸಿಕೊಂಡು, ಭೂದೇವಿ, ಲಕ್ಷ್ಮೀದೇವಿ ಹಾಗೂ ವಿಜಯಶ್ರೀದೇವಿಯರನ್ನು ಮೆಚ್ಚಿಸಿದನು.

# ದಶಮಾಶ್ವಾಸಂ

ಶ್ರೀಗೆ ವಚಶ್ರೀಗೆ ಜಯ ।
ಶ್ರೀಗೆ ಮನೋರಮಣನೆನಿಸಿ ಸಕಲಧರಿತ್ರೀ ॥
ಭಾಗದೊಳಂ ನೆಗಟ್ಟಿಂ ದಿ ।
ಗ್ಭಾಗದೊಳೆಸೆಯಲ್ಕೆ ಕೀರ್ತಿ ಸಾಹಸಭೀಮಂ ॥೧॥

ಆಗಳ್ ಮುರಾಂತಕಂ ಸಮರವಿಜಯಿಯಪ್ಪ ಸಾಹಸಭೀಮನ ಸಾಹಸಕ್ಕೆ ಮೆಚ್ಚಿ ಧರ್ಮನಂದನನ ಮೊಗಮಂ ನೋಡಿ -

ಕುರುಪತಿಪಾತದಿಂ ಕೃತಭಯಂಕರಮರ್ಜುನಬಾಣಘಾತಜ ।
ರ್ಝುರಿತಶರೀರಸೈಂಧವಮದಾತ್ತಬಲಾಂಬುಧಿಯುಂ ನಿಶಾತತೋ ।
ಮರಹತಕರ್ಣಮಸ್ತಮಿತಶಲ್ಯಶರಸ್ಥಿತಭೀಷ್ಮಸಾಹಸಂ ।
ದೊರೆಯೆನಿಸಿತ್ತು ಭಾರತಕ್ಕೆ ಗೆಲ್ದ ರಣಂ ಕುಮರಾಂಕರಾಮನಾ ॥೨॥

ತುರಗಕಬಂಧದೊಳ್ ನರಶಿರಂಗಳ ವೀರಮಹಾಕಬಂಧದೊಳ್ ।
ಕರಿಶಿರಮಾಗ [ಲುತ್ಕ] ಟಕಬಂಧದೊ [ಳಾ] ಭಟರಂ ತಗುಳ್ದೊಡಾ ॥
ತುರಗಮುಖಂಚೊಲಾದುದು ವಿನಾಯಕನಂತೆವೊಲಾಯ್ತು [ನೋಡೆ] ಕಿ ।
ನ್ನರರಣಮೆಂದೊಡೇವೊಗಟ್ಟುದಾ ರಣಮಂ ಕುಮರಾಂಕರಾಮನಾ ॥೩॥

೧. ಲಕ್ಷ್ಮಿಗೂ, ವಿಜಯಲಕ್ಷ್ಮಿಗೂ ವಾಣಿ ಲಕ್ಷ್ಮಿಗೂ, ಪ್ರಿಯ ಪ್ರಭುವಾಗಿ, ತನ್ನ ಕೀರ್ತಿ ಸಮಸ್ತ ದಿಕ್ಕುಗಳಲ್ಲಿಯೂ ಹಬ್ಬಿ ಕಂಗೊಳಿಸುತ್ತಿರಲಾಗಿ ಪರಾಕ್ರಮಶಾಲಿ ಭೀಮಸೇನನು ಸಮಸ್ತಭೂಮಿಯಲ್ಲಿ ಪ್ರಸಿದ್ಧನಾದನು.

ವ॥ ಆಗ ಕೃಷ್ಣನು ಯುದ್ಧವಿಜಯಿಯಾದ, ಭೀಮನ ಪರಾಕ್ರಮಕ್ಕೆ ಮೆಚ್ಚಿ ಧರ್ಮರಾಜನ ಮುಖವನ್ನು ನೋಡಿ (ಹೀಗೆಂದನು) -

೨. ಅರ್ಜುನನ ಭೀಕರವಾದ ಬಾಣಪ್ರಹಾರದಿಂದ ಜಯದ್ರಥನು ನುಚ್ಚು ನೂರಾದನು ; ಶತ್ರುಸೈನ್ಯದ ಸಾಗರ ನಿರ್ನಾಮವಾಯಿತು; ಕರ್ಣನು ಹತನಾದನು ; ಶಲ್ಯನು (ನಿನ್ನಿಂದ) ಮರಣಹೊಂದಿದನು. ಹೀಗೆ ನಡೆದ ಭಾರತ ಯುದ್ಧಕ್ಕೆ ಯೋಗ್ಯವಾದ ಮುಕ್ತಾಯವೆನಿಸಿತು - ಈ ದಿನ ಪರಾಕ್ರಮಿ ಭೀಮಸೇನನಿಂದಾದ ದುರ್ಯೋಧನನ ವಧೆ.

೩. ಬಲಿಷ್ಠವಾದ ಸೈನ್ಯವು ಶತ್ರುಸೈನ್ಯವನ್ನು ತಾಗಿ ಯುದ್ಧಮಾಡುವಾಗ ಕುದುರೆಗಳ ಅಟ್ಟೆಯಲ್ಲಿ ಕಾಲಾಳುಗಳ ರುಂಡಗಳೂ, ವೀರರ ಭವ್ಯವಾದ ಮುಂಡಗಳಲ್ಲಿ ಆನೆಗಳ ರುಂಡಗಳೂ ಸೇರಿ ಕಿನ್ನರರೂ, ವಿನಾಯಕರೂ ಯುದ್ಧಕ್ಕೆ ನಿಂತಂತೆ ತೋರಿತು. ಭೀಮಸೇನನ ಆ ಯುದ್ಧವನ್ನು ಏನೆಂದು ಹೊಗಳಲಿ !

ಸಮದವಿರೋಧಿಹತ್ಯದೊಳೆ ತದುಧಿರಾಂಬುನಿಮಜ್ಜನಾರ್ದ್ರಕ ।
ರ್ದಮಮಿಷುಘಾತಪಾತಿತಶಿರೋವನಿಪಾಲನಟತ್ಕಬಂಧವಿ ॥
ಭ್ರಮಮತಿರೌದ್ರಮಾಯ್ತು ಸುಮನಸ್ಸುಮನೋಭರನಿತ್ಯಲಂಪಟ ।
ಭ್ರಮರನೇಕಭೂತನಿಳಯಂ ಸಮರಂ ಕುಮರಾಂಕರಾಮನಾ ॥೪॥

ಕುರುಧರೆಯಂ ನಿಜೋಗ್ರಗದೆಯೇರ್ಗಳಿನುಟ್ಟು ಸಮಸ್ತ ವೈರಿಭೂ ।
ಪರ ರುಧಿರಾಂಬುವಿಂದೆ ಬೆದೆಮಾಡಿಯೆ ಘಟ್ಟಿತಕುಂಭಿಮುಕ್ತಭಾ ॥
ಸುರನವಮೌಕ್ತಿಕಪ್ರಸರಬೀಜಮನೋಳಿಯೆ ಬಿತ್ತಿ ತಾರಭೂ ।
ಧರಸಿತಕೀರ್ತಿಯೆಂಬ ಬೆಳಸಂ ಬೆಳೆದಂ ಪರಸೈನ್ಯಭೈರವಂ ॥೫॥

ನುಡಿದುದಳಿಸೊಳ್ ತೊದಳ್ನುಡಿದರೆಂದೊಡಮೀಯದೆ ಪೂಣ್ದು ಪೂಣ್ಕೆ [ಮಾ ।
ಣ್ದೊಡಮಿಜೆ]ವಲ್ಲಿ ಮೆಯ್ದೆಗೆದರೆಂದೊಡೆ ಮುನ್ನಮೆ ನಾಣ್ಚುವಂ ಮೊಗಂ ॥
ಗುಡನವರ್ಗೆಂದೊಡೇಂ ನುಡಿಯ ಚಾಗ [ದ] ಬೀರದ ಕೀರ್ತಿ [ವಲ್ಲಿ] ದಾ [ಂ ।
ಗುಡಿ] ಏಡೆ[ಪೇಟವೇಟ್ಬುದೊ] ಗುಣತ್ರಯ [ಮಂ] ಕುಮರಾಂಕ [ರಾ] ಮನಾ ॥೬॥

ವಸುಧೆಗೆ ಮೇರೆಯಾದುದು ಪಯೋಧಿ ಪಯೋಧಿಗೆ ಮೇರೆಯಾದುದೆ ।
ಣ್ದೆಸೆ ದೆಸೆಗ[ಳ್ಗೆ] ಸೀಮೆ [ದಿಗಿ] ಭಾವಳಿಯಾಯ್ತೆ [ನೆ] ಮಾಣದೆಲ್ಲಿಯುಂ ॥
[ಪಸರಿಸಿ ತಾನೆ] ವಾ [ರಿಧಿ] ಯಿನತ್ತ ದಿಶಾಳಿಯಿನತ್ತ ದಿಗ್ಗಜ ।
ಪ್ರಸರದಿನತ್ತ ನೀಳ್ದು [ದು] ಯಶಃಪ್ರಕರಂ ಕುಮಾರಾಂಕ [ರಾ] ಮನಾ ॥೭॥

೪. ಮದೋದ್ಧತರಾದ ಶತ್ರುಗಳ ಸಂಹಾರಪ್ರಸಂಗದಲ್ಲಿ, ಅವರ ರಕ್ತದಿಂದ ನೆನೆದು ಕೆಸರಾದ ನೆಲದಿಂದಲೂ, ಬಾಣಪ್ರಹಾರದಿಂದ ರುಂಡಗಳನ್ನು ಕಳೆದುಕೊಂಡು ನೆಗೆದಾಡುತ್ತಿರುವ (ಶತ್ರು) ರಾಜರ ಮುಂಡಗಳಿಂದಲೂ, ದೇವತೆಗಳು ಸುರಿಸುತ್ತಿರುವ ಪುಷ್ಪಗಳಿಗೆ ಆಸೆಗೊಂಡು ಹಾರಾಡುತ್ತಿರುವ ದುಂಬಿಗಳಿಂದಲೂ, ಅನೇಕ ಪಿಶಾಚಗಳಿಂದಲೂ - ಭೀಮಸೇನನ ಯುದ್ಧವು ಅತ್ಯಂತ ಭಯಾನಕವಾಯಿತು.

೫. ಕುರುಕ್ಷೇತ್ರವೆಂಬ ಹೊಲವನ್ನು ತನ್ನ ಪ್ರಚಂಡವಾದ ಗದಾಪ್ರಹಾರಗಳಿಂದ ಉತ್ತು, ಶತ್ರುರಾಜರ ರಕ್ತಜಲದಿಂದ ನೆಲವನ್ನು ಹದಗೊಳಿಸಿ, ಮದದಾನೆಗಳ ನೆತ್ತಿಗಳನ್ನು ಸೀಳಿ ತೆಗೆದ ಹೊಸಹೊಳಪಿನ ಮುತ್ತುಗಳನ್ನು ಬೀಜವಾಗಿ ಸಾಲುಸಾಲಾಗಿ ಬಿತ್ತಿ, ರಜತಾದ್ರಿಯಂತೆ ಶುಭ್ರವಾದ ಕೀರ್ತಿಯ ಹುಲುಸಾದ ಬೆಳೆಯನ್ನು - ಶತ್ರು ಸೈನ್ಯಕ್ಕೆ ಪ್ರಳಯ ರುದ್ರನಾದ ಭೀಮನು ಬೆಳೆದುಕೊಂಡನು.

೬. ಯಾರಾದರೂ ಸುಳ್ಳು ನುಡಿದರೆಂದರೆ, ದಾನ ಕೊಡಲಿಲ್ಲವೆಂದರೆ, ಮಾಡಿದ ಪ್ರತಿಜ್ಞೆಯನ್ನು ಕೈಬಿಟ್ಟರೆಂದರೆ, ಯುದ್ಧದಲ್ಲಿ ಹಿಂದೆಗೆದರೆಂದರೆ, ಭೀಮಸೇನನು ಒಮ್ಮೆಲೆ ಜುಗುಪ್ಸೆಗೊಂಡು, ಅಂಥವರಿಗೆ ಮುಖ ತೋರಿಸನು. ಎಂದ ಬಳಿಕ ಕೀರ್ತಿಲತೆ ಎಲ್ಲೆಲ್ಲಿಯೂ ವ್ಯಾಪಿಸುತ್ತಿರುವ ಆತನ ಸತ್ಯವಂತಿಕೆ, ದಾನಗುಣ ಹಾಗು ಶೌರ್ಯ- ಆ ಮೂರು ಗುಣಗಳನ್ನು ಏನೆಂದು ಹೊಗಳಲಿ !

೭. ಭೂಮಿಗೆ ಸಮುದ್ರವೆ ಮೇರೆ ; ಸಮುದ್ರಕ್ಕೆ ಎಂಟು ದಿಕ್ಕುಗಳೆ ಮೇರೆ ; ದಿಕ್ಕುಗಳಿಗೆ ದಿಗ್ಗಜಗಳೆ ಮೇರೆ. ಭೀಮಸೇನನ ಯಶಸ್ಸು ಹೀಗೆ ಮೇರೆಗೆ ಒಳಪಡದೆ, ಸಮುದ್ರದಾಚೆ, ದಿಕ್ಕುಗಳಾಚೆ, ದಿಗ್ಗಜಗಳ ಆಚೆ ಇನ್ನೂ ಹಬ್ಬುತ್ತಲೆ ಹೋಯಿತು.

ಇಳೆಯೊಳದಂಕುರಿಸಿ ಹರಿ ।
ತ್ತುಳದೊಳ್ ವರ್ಧಿಸಿಯೆ ನೀಳ್ದು ಗಗನಕ್ಕಸುಹ್ಯ ॥
ತ್ತುಳನಾರೀನಯನಾಂಬುವೆ ।
ಬೆಳೆಯಿಸಿದುದು ಕೀರ್ತಿಲತಿಕೆಯಂ ಸತ್ತಿಗನಾ ॥೮॥

ಎಂದು ಮುರಾಂತಕಂ ಪೊಗೞ್ದು ಕುರುಕುಲಾಂತಕನ ಮೊಗಮಂ ನೋಡಿ -

ಮುನಿಯಿಸಿದರಾತಿಯಂ ಕೊ ।
ಲ್ವೆನೆಂದು ಪೂಣ್ದಂತೆ ಪೂಣ್ಕೆದಪ್ಪದೆ ಕೊಲಲುಂ ॥
ನಿನಗಲ್ಲದೆ ತೀರ್ಗುಮೆ ಗೆ ।
ಲ್ವೆನೆಂದು ನುಡಿದಂತೆ ಗೆಲ[ಲು]ಮಿಜಿವಬೆಡಂಗಾ ॥೯॥

ಪೆಱರಾಳ ಪೆಱರ ಕುದುರೆಯ ।
ಪೆಱರಾನೆಯ ಪೆಱರ ರಥದ ಪೆರ್ವಲದಿಂದಂ ॥
ಇಱಿವರ್ ಪೆಱರೇಕಾಂಗದಿ ।
ನಿಱಿವವರಾರ್ ನಿನ್ನ ತೆಱದಿನಿಱಿವಬೆಡಂಗಾ ॥೧೦॥

ಜವನುಱಿ ಬರ್ಚಿದವೊಲ್ ಕೌ ।
ರವರೆಲ್ಲರ ಕೊಂದು ಕೌರವೇಶ್ವರಬಲಮಂ ॥
ತವೆಯಿಱಿದು ತೀರ್ಚಲೇಕಾಂ ।
ಗವೀರ ನಿನ್ನನ್ನನಾವನಿಱಿವಬೆಡಂಗಾ ॥೧೧॥

೮. ಸತ್ಯಾಶ್ರಯ ಭೀಮಸೇನನ ಕೀರ್ತಿಯೆಂಬ ಬಳ್ಳಿಯು ಭೂಮಿಯಲ್ಲಿ ಮೊಳಕೆಯೊಡೆದು, ದಿಕ್ಕುಗಳಲ್ಲಿ ಹಬ್ಬಿ, ಆಕಾಶವನ್ನೆಲ್ಲ ವ್ಯಾಪಿಸಿತು. ಶತ್ರುಗಳ ಹೆಂಡಂದಿರು ಸುರಿಸುತ್ತಿರುವ ಕಣ್ಣೀರೇ ಈ ಬಳ್ಳಿಯನ್ನು ಬೆಳಸಿತು.

ವ॥ ಕುರುವಂಶಕ್ಕೆ ಯಮನಾದ ಭೀಮಸೇನನ ಮುಖವನ್ನು ಕೃಷ್ಣನು ನೋಡಿ (ಹೀಗೆ ನುಡಿದನು)-

೯. "ಭೀಮಸೇನಾ, ಕೆರಳಿಸಿದ ಶತ್ರುಗಳನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿ, ಆ ಪ್ರತಿಜ್ಞೆ ಭಂಗವಾಗದಂತೆ ಅವರನ್ನು ಕೊಲ್ಲಲೂ, ಜಯಿಸುವೆನೆಂದು ಭಾಷೆ ಮಾಡಿದ ಮೇಲೆ, ಅದರಂತೆ ಗೆಲ್ಲಲೂ ನಿನಗಲ್ಲದೆ ಇತರರಿಗೆ ಸಾಧ್ಯವೆ ?

೧೦. ಅನ್ಯರ ಕುದುರೆ, ಅನ್ಯರ ಕಾಲಾಳು, ಅನ್ಯರ ಆನೆ, ಅನ್ಯರ ರಥಗಳನ್ನು ಪಡೆದುಕೊಂಡು ಮಹಾಸೈನ್ಯಸಮೇತರಾಗಿ ಯುದ್ಧ ಮಾಡುವವರು ಉಂಟು. ಆದರೆ ಭೀಮಸೇನಾ, ನಿನ್ನಂತೆ ಏಕಾಂಗವೀರನಾಗಿ ಯುದ್ಧಮಾಡುವವರು ಇನ್ನಾರು?

೧೧. ಪ್ರತ್ಯಕ್ಷ ಯಮನೇ ಆಕ್ರಮಿಸಿದಂತೆ ಆಕ್ರಮಿಸಿ ಕೌರವರೆಲ್ಲರನ್ನೂ ಕೊಂದು, ದುರ್ಯೋಧನನ ಸೈನ್ಯವನ್ನೆಲ್ಲ ಹೊಡೆದು ನಿರ್ನಾಮಗೊಳಿಸಿದವನು ನೀನು. ಏಕಾಂಗವೀರನಾಗಿ ಯುದ್ಧಮಾಡುವ ನಿನ್ನಂತಹರು ಇನ್ನಾರುಂಟು ?

ಮನೆ ಪೆಣ್ಣುಂ ಮಕ್ಕಳೆಂಬೀ ನುಡಿ ಪುಸಿ ನಿಜಕೃಪ್ಣಾಂಗದೊಳ್ ಪುಟ್ಟಿ ಕೀರ್ತ್ಯಂ ।
ಗನೆ ಶುಭ್ರಚ್ಛಾಯೆಯಾದಳ್ ಬಳೆದಳನಿಲಮಾರ್ಗಂಬರಂ ಪರ್ಬಿದಳ್ ದಿ ॥
ಗ್ವನಿತಾಸಂದೋಹಮಂ ತಾಪಿನಮಡಿಯಿಡುವಳ್ ಗೋತ್ರಶೈಲಾಗ್ರದೊಳ್ ಮ ।
ಜ್ಜನಮಾ ವ್ಯೋಮಾಪಗಾವಾರಿಯೊಳೆನೆ ಪಿರಿದುಂ ಭುಂಭುಕಂ ಸಾಹಸಾಂಕಂ ॥೧೨॥

ಎಂದು ನಾರಾಯಣಂ ಚಾಳುಕ್ಯನಾರಾಯಣನ ಶೂರಕೃತ್ಯಂಗಳಂ ಪೊಗಟುತ್ತಿರ್ಪಿನ ಮಾಗಳ್ ಧೃತರಾಷ್ಟ್ರನುಂ ಗಾಂಧಾರಿಯುಂ ಬರಲ್ ಧರ್ಮನಂದನಂ ಪೊಡೆವಟ್ಟು -

ಈಯದೆ ಬಾಡಮಯ್ದನೆಮಗೊಲ್ಲದೆ ಸಂಧಿಯನಯ್ಯ ನಿಮ್ಮ ಗಾಂ ।
ಗೇಯರ ಮಾತುಗೇಳದಟೆದಂ ಕುರುರಾಜನದರ್ಕೆ ದುಃಖದಿಂ ॥
ಬಾಯಟೆಯಲ್ಕೆವೇಡ ನಿಮಗಾಂ ಮಗನಲ್ಲೆನೆ ನೀಮೆ ತಂದೆಯುಂ ।
ತಾಯುಮಮೋಘಮಿನ್ನೆಮಗೆ ಪಾಂಡುಮಹೀಪತಿಯಿಂದಮಗ್ಗಳಂ ॥೧೩॥

ಎಂಬುದುಮಾ ಪ್ರಸ್ತಾವದೊಳ್ ದುರ್ಯೋಧನನ ಮಾದೇವಿಯರಪ್ಪ ಭಾನುಮತಿಯುಂ ಚಂದ್ರಮತಿಯುಂ ಮೊದಲಾದ ಅತಿರಥಮಹಾರಥಾರ್ಧರಥ ಪ್ರಮುಖ ಸಾಮಂತಮಾಂಡಲಿಕಾಂತಃಪುರಕಾಂತೆಯರೊಂದಾಗಿ ತಂತಮ್ಮ ಜೀವಿತೇಶ್ವರರಂ ಸಂಗ್ರಾರಂಗದೊಳಅಸುತ್ತುಂ ಬಂದು ಕಾಣದೆ -

೧೨. "ಮನೆ, ಹೆಂಡತಿ, ಮಕ್ಕಳು ಎಂಬ ಮಾತು ವ್ಯರ್ಥ. [ಮನೆ, ಹೆಂಡತಿ, ಮಕ್ಕಳು ಇವುಗಳಿಗಿಂತ, ಯಶಸ್ಸೆ ಮನುಷ್ಯನಿಗೆ ಮಿಗಿಲು] ನಿನ್ನ ಕಪ್ಪಾದ ದೇಹದಲ್ಲಿ ಹುಟ್ಟಿದ ಕೀರ್ತಿವನಿತೆ ಧವಳವರ್ಣೆಯಾದಳು ; ಆಕಾಶದವರೆಗೆ ಬೆಳೆದಳು ; ದಿಕ್ಕನ್ಯೆಯರ ಬಳಗವನ್ನು ಸೇರಿದಳು ; ಕುಲಪರ್ವತಗಳ ಶಿಖರಗಳಲ್ಲಿ ನಡೆದಾಡಿದಳು ; ದೇವಗಂಗೆಯಲ್ಲಿ ಸ್ನಾನ ಮಾಡಿದಳು. ಎಂದ ಮೇಲೆ ಪರಾಕ್ರಮಿಯೆ, ನಿನ್ನ ಘನತೆ ಅದ್ಭುತವಾದುದು."

ವ॥ ಹೀಗೆಂದು ಕೃಷ್ಣನು ಭೀಮನ ಸಾಹಸಗಳನ್ನು ಹೊಗಳುತ್ತಿರುವಾಗ, ಧೃತರಾಷ್ಟ್ರನೂ ಗಾಂಧಾರಿಯೂ (ಅಲ್ಲಿಗೆ) ಬಂದರು. ಧರ್ಮರಾಜನು ಅವರಿಗೆ ನಮಸ್ಕರಿಸಿ-

೧೩. "ತಂದೆಯೆ, ನಮಗೆ ಐದು ಊರುಗಳನ್ನು ಕೂಡ ಕೊಡಲೊಲ್ಲದೆ, ಸಂಧಿಗೂ ಒಪ್ಪದೆ, ನಿಮ್ಮ ಹಾಗು ಭೀಷ್ಮರ ಮಾತುಗಳನ್ನೂ ಕೇಳದೆ ದುರ್ಯೋಧನನು ಮರಣಕ್ಕೀಡಾದನು. ಅದಕ್ಕಾಗಿ ನೀವು ದುಃಖಿಸದಿರಿ. ನಿಮಗೆ ನಾನು ಮಗನಲ್ಲವೆ ? ಇನ್ನು ನೀವೇ ನಮಗೆ ತಂದೆತಾಯಿಗಳು. ಪಾಂಡುರಾಜನಿಗಿಂತಲೂ ನೀವು ನಮಗೆ ಅಧಿಕರಾಗಿದ್ದೀರಿ."

ವ॥ ಎಂದು ನುಡಿದನು. ಆ ಸಮಯಕ್ಕೆ ದುರ್ಯೋಧನನ ಪತ್ನಿಯರಾದ ಭಾನುಮತಿ, ಚಂದ್ರಮತಿಯರೂ, ಅತಿರಥಮಹಾರಥಾರ್ಧರಥ ಮೊದಲಾದ ಸಾಮಂತಮಾಂಡಲಿಕರ ಪತ್ನಿಯರೂ ಒಟ್ಟಾಗಿ ಬಂದು, ತಂತಮ್ಮ ಗಂಡಂದಿರನ್ನು ರಣಭೂಮಿಯಲ್ಲಿ ಹುಡುಕಾಡಿ ಕಾಣದಾಗಲು -

ಗಳಿತಾಶ್ರುಪ್ರಕರಂ ಪಯೋಧರ ತಟವ್ಯಸ್ತಾಂಬರಂ ಸ್ರಸ್ತಕುಂ ।
ತಳಭಾರಂ ಪರಿಗೆಟ್ಟ ದೀನವದನಂ ನಿರ್ಘಾತನಿಶ್ವಾಸಮಾ ॥
ಕುಳಚಿತ್ತಂ ಪರಿವೇಷ್ಟಿತಪ್ರಚುರಹಾಹಾಕ್ರಂದನಂ ಶೋಕವಿ ।
ಹ್ವಳದಿಂ ಕೂಟ್ಟುಗಿದಿಗೊಂಡುದಾ ಕುರುಕುಲಕ್ಷ್ಮಾಪಾಲನಂತಃಪುರಂ ॥೧೪॥

ಶರ ಕೋಳೆ ಸತ್ತ ಯೂಥಪತಿಗ [ಳ್ ಪಡೆ] ವಾರಣ [ಪಾತದಿಂದೆ] ಚಾ ।
ತರು [ಚ] ತುರಂಗಸೇನೆ [ಕಿ] ಡೆ ಭೂರುಹಮಿಲ್ಲದ ಬಳ್ಳಿಗಳ್ಗ [ದೇಂ] ॥
ದೊರೆಯೆನಿಸಿತ್ತೋ ಭೀಮಭುಜನಿರ್ದಳಿತಾ [ತ್ರ] ನರೇಂದ್ರರಿಲ್ಲದು ।
ಬ್ಬರಿಸಿದ ಶೋಕದಿಂದಟಲಿ ಕೋಟಲೆಗೊಳ್ವ [ತದಂಗನಾ] ಜನಂ ॥೧೫॥

ಅಂತು ಶೋಕವಿಹ್ವಲರಾಗಿ ಬರ್ಪಲ್ಲಿ ಕೌರವನಿತಂಬಿನಿಯರ್ ಗಾಂಧಾರೀ ಧೃತರಾಷ್ಟ್ರರ ಕಾಲ ಮೇಲೆ ಕವಿದು ಬಿಟ್ಟು -

ಎಲ್ಲಿದನೆಲ್ಲಿದಂ ಕುರುಮಹೀಪತಿಯೆಲ್ಲಿದನೆಲ್ಲಿದಂ ಮಹೀ ।
ವಲ್ಲಭನಿಂದುವಂಶತಿಲಕಾಹ್ವಯನೆಲ್ಲಿದನೆಲ್ಲಿದಂ ಲಸ ॥
ತ್ಪಲ್ಲವಕೀರ್ತಿ ಚಾರುತರಮೂರ್ತಿ ಫಣೀಂದ್ರಪತಾಕನೆಲ್ಲಿ ತಾ ।
ನೆಲ್ಲಿದನೆಲ್ಲಿದಂ ಗಡ ಮನಃಪ್ರಿಯನೆಲ್ಲಿದನೋ ಸುಯೋಧನಂ ॥೧೬॥

ಭಾನುಮತಿವದನಬಿಸರುಹ ।
ಭಾನು ಲಸಚ್ಚಂದ್ರಮತಿಮುಖೇಂದೀವರಚಂ ।
ದ್ರಾ [ನನ] ನೆಲ್ಲಿದನೋ ರವಿ ।
ಸೂನುಮನಃಪ್ರಿಯನೆನಿಪ್ಪ ಕುರುಕುಲತಿಲಕಂ ॥೧೭॥

೧೪. ಸುರಿಯುತ್ತಿರುವ ಕಣ್ಣೀರು, ಎದೆಯಿಂದ ಜಾರಿದ ಸೆರಗು, ಕೆದರಿದ ಕೂದಲು, ನಿಸ್ತೇಜವಾದ ದೀನಮುಖ, ನಿಟ್ಟುಸಿರು, ದುಃಖದಿಂದ ಹಿಂಡಿಹೋದ ಹೃದಯ, ಹೊರಹೊಮ್ಮುತ್ತಿರುವ ಹಾಹಾಕಾರ - ಇವುಗಳಿಂದ ಕೂಡಿದ ಅಂತಃಪುರಸ್ತ್ರೀಯರು, ಶೋಕಾಗ್ನಿಯಿಂದ ಕತಕತನೆ ಕುದಿಯುತ್ತಿದ್ದರು.

೧೫. ಬಾಣಪ್ರಹಾರದಿಂದ ಚತುರಂಗ ಸೈನ್ಯವೆಲ್ಲವೂ ನಾಶವಾಯಿತು. ಭೀಮನ ಬಾಹುದಂಡದಿಂದ ಶತ್ರುರಾಜರೆಲ್ಲ ಹತರಾದರು. ತಂತಮ್ಮ ಪತಿಗಳನ್ನು ಕಳೆದುಕೊಂಡು ಅತ್ಯಂತ ಶೋಕಾಕುಲರಾದ ಅವರ ಸ್ತ್ರೀಯರು ಮರಗಳಿಲ್ಲದ (ಆಸರೆಯಿಲ್ಲದ) ಬಳ್ಳಿಗಳಂತಾದರು.

ವ॥ ಹೀಗೆ ಶೋಕದಿಂದ ಕಂಗೆಟ್ಟು ಬಂದ ಕೌರವಸ್ತ್ರೀಯರು ಗಾಂಧಾರೀ - ಧೃತರಾಷ್ಟ್ರರ ಕಾಲ ಮೇಲೆ ಕುಸಿದುಬಿದ್ದು -

೧೬. "ಕುರುರಾಜನೆಲ್ಲಿರುವನು ? ಭೂಮಂಡಲದ ವಲ್ಲಭನೆಲ್ಲಿರುವನು ? ಸೋಮವಂಶಶ್ರೇಷ್ಠನೆಲ್ಲಿರುವನು ? ಹಬ್ಬುವ ಕೀರ್ತಿಯುಳ್ಳ, ಸುಂದರ ಶರೀರನಾದ ಸರ್ಪಧ್ವಜನು ಎಲ್ಲಿರುವನು ? ಎಲ್ಲಿರುವನೋ ನಮ್ಮ ಮನೋರಮಣನಾದ ದುರ್ಯೋಧನನು ? ಎಲ್ಲಿರುವನು ? ಹೇಳಿ.

೧೭. ಭಾನುಮತಿಯ ಮುಖಕಮಲಕ್ಕೆ ಸೂರ್ಯನಾದವನೂ, ಚಂದ್ರಮತಿಯ

ಎಂದು ಕರುಣಾಕ್ರಂದನಂಗೆಯ್ವುದುಮಾಗಳದಂ ಕಂಡು ಧರ್ಮನಂದನ ನಂಧರಾಜಂಗಂ ಗಾಂಧಾರಿಗಂ ಪೊಡೆಮಟ್ಟು -

ನಿಮಗೆ ಬೆಸಕೆಯ್ವೆಮಯ್ವರ್ ।
ಕ್ರಮದೆಮ್ಮಂ ಕೂಡಿಕೊಂಡು ನೆಲನಂ ಪೂರ್ವ ॥
ಕ್ರಮದಿಂದಾಳ್ದಿಮ್ಮ [ಂ] ನೋ ।
ಡಿ ಮಱೆವು[ದಿಂ] ನಿಮ್ಮ ಸುತರನಂಧನೃಪಾಲಾ ॥೧೮॥

ಎಂದು ಧರ್ಮನಂದನಂ ನುಡಿಯೆ ಧೃತರಾಷ್ಟ್ರನವಧಾರಿಸಿ -

ಎಮಗಿನ್ನುಂ ಮಾನಸವಾ ।
ಱ ಮೋಹಮಿಲ್ಲಿಂದು ನಿನ್ನನಿನಿತಂ [ಬೇಁಟ್ಪೆಂ] ॥
ಯಮಪುತ್ರನೆ [ಮೃತರಾದರ ।
ಸು] ಮಕ್ಕಳ [ಂ] ಬೇಱೆ ಬೇಱೆ ತೋರಿಸು ಮಗನೇ ॥೧೯॥

ಎನೆ ಇದಾವ ಗಹನಮವರ್ಗಳ್ಗಂ ಸಂಸ್ಕಾರವಿಧಿಯಿಂ ಸಂಸ್ಕಾರಮಂ ಮಾಟ್ಪೆ ನೆಂದಾಗಳ್ -

ತನುಶೋಕಾನಳನಳುರಲ್ ।
ದಿನೇಶಸುತನಂಗಮಹಿತಳಾಧಿಪರಾಧಾ ॥
ತನಯನ ಕಳೆಬರಮಂ ಭೋಂ ।
ಕನೆ ಕಂಡಳ್ ಕುಂತಿ ತನ್ನ ಚೊಚ್ಚಲ ಮಗನಂ ॥೨೦॥

ಮುಖವೆಂಬ ನೈದಿಲೆಗೆ ಚಂದ್ರನಾದವನೂ, ಕರ್ಣನಿಗೆ ಪ್ರಾಣಪ್ರಿಯನೂ ಆದ ಕೌರವಶ್ರೇಷ್ಠನು ಎಲ್ಲಿರುವನು"?

ವ॥ ಎಂದು ಕರುಣಾಜನಕವಾಗಿ ಪ್ರಲಾಪಿಸಲಾಗಿ, ಅದನ್ನು ಕಂಡು ಧರ್ಮರಾಜನು ಧೃತರಾಷ್ಟ್ರ ಗಾಂಧಾರಿಯರಿಗೆ ನಮಸ್ಕರಿಸಿ -

೧೮. "ಅಂಧನಾದ ತಂದೆಯೆ, ನಾವೈದು ಜನರೂ ನಿಮ್ಮ ಆಜ್ಞಾನುವರ್ತಿಗಳಾಗಿ ನಿಮ್ಮ ಸೇವೆ ಮಾಡಿಕೊಂಡಿರುವೆವು. ನಮ್ಮನ್ನು ಒಡಗೊಂಡು ಹಿಂದಿನಂತೆ ನೀವೇ ರಾಜ್ಯವಾಳುತ್ತ ಇರಿ. ನಮ್ಮನ್ನು ನೋಡಿಕೊಂಡು, ನಿಮ್ಮ ಮಕ್ಕಳನ್ನು ಮರೆಯಿರಿ."

ವ॥ ಎಂದ ನುಡಿದನು. ಅದನ್ನು ಕೇಳಿ ಧೃತರಾಷ್ಟ್ರನು (ಹೀಗೆಂದನು) -

೧೯. "ನಮಗೆ ಇನ್ನು ಬದುಕುವ ಅಪೇಕ್ಷೆಯಿಲ್ಲ. ಇಂದು ನಿನ್ನಲ್ಲಿ ನನ್ನದೊಂದೇ ಬೇಡಿಕೆ ಇದೆ. ಯಮಪುತ್ರನೆ, ಸತ್ತ ಅರಸು ಮಕ್ಕಳನ್ನು ಬೇರ ಬೇರೆಯಾಗಿ ತೋರಿಸು".

ವ॥ "ಇದೇನು ಮಹಾ ? ಅವರೆಲ್ಲರಿಗೂ ವಿಧಿಪೂರ್ವಕವಾಗಿ ಉತ್ತರಕ್ರಿಯೆಯನ್ನು ಮಾಡುವೆನು" ಎಂದು ಧರ್ಮರಾಜನು ಹೇಳುತ್ತಿರುವಾಗಲೆ -

೨೦. ಸೂರ್ಯಪುತ್ರನೂ, ಅಂಗರಾಜನೂ, ರಾಧೆಯ (ಸಾಕು) ಮಗನೂ ಆದ ಕರ್ಣನ ಕಳೇಬರವನ್ನು ಕಂಡು ಕುಂತೀದೇವಿಗೆ ತನ್ನ ಚೊಚ್ಚಲ ಮಗನ ಸಾವಿನಿಂದಾದ ಶೋಕ ಒಮ್ಮೆಲೆ ಉಮ್ಮಳಿಸಿ ಬಂದಿತು.

ಅಂತು ಕರ್ಣನ ಕಳೇಬರಮಂ ತಟ್ಟೈಸಿ ಪುತ್ರನಂ ಕಂಡ ತೆಱದಿಂ ಪಲಯಿಸುವ ನಿಜಜನನಿಯಂ ಕಂಡು ಪಾಂಡುನಂದನನಿದೇನೆಂದು ಬೆಸಗೊಳೆ -

ವನಜಾತಪ್ರಿಯಬಂಧುಗಂಗಪತಿಯಂ ಧರ್ಮಂಗೆ ನಿನ್ನಂ ಹುತಾ ।
ಶನಮಿತ್ರಂಗೆ ಬಕಾರಿಯಂ ಕುಲಿಶಿಗಂ ಗಾಂಡೀವಿಯಂ ಪೆತ್ತೆನಾ ॥
ದಿನಕೃನ್ನಂದನನೆನ್ನ ಚೊಚ್ಚಲ ಮಗಂ ನಿಮ್ಮಗ್ರಜಂ ಕರ್ಣನಾ ।
ನಿನಿತಂ ನಿಮ್ಮಯ ಮೋಹದಿಂದುಸಿರದಿರ್ದೆಂ ಕೊಂದೆನಯ್ ಧರ್ಮಜಾ ॥೨೧॥

ಎಂಬುದಂ ಧರ್ಮನಂದನಾದಿಗಳತ್ಯಂತದುಃಖಿತರಾಗಿ ಇಂತೆಂದರ್ -

ಪಿರಿಯಣ್ಣಂ ಕ್ರಮದಾತನರ್ಕಸುತನೆಂದೇಕಿನ್ನೆಗಂ ಪೇಱದಿ ।
ರ್ದಿರೊ ಮುಂ ಪೇಱ್ದೊಡೆ ಮಾತೆಗಾ ಪಿರಿಯನೆಮ್ಮಣ್ಣಂಗೆ ಸಾಮ್ರಾಜ್ಯಭೂ ।
ಭರಮಂ ಕೊಟ್ಟವನಾಳ್ದೊಡಂದೆ ಬಱಕಾವಾಳಾಗಿ ಸೌಭಾಗ್ಯದಿಂ ।
ದಿರೆವೇ ಪೊಲ್ಲದುಗೆಯ್ದಿರೆಂದು ಜಡಿದರ್ ಕುಂತೀಸುತರ್ ಕುಂತಿಯಂ ॥೨೨॥

*[ಇಲ್ಲಿಂದ ಮುಂದಿನ ಮದ್ರಾಸು ಪ್ರತಿಯಲ್ಲಿಯ ಕಾವ್ಯಭಾಗವು ಪ್ರಕ್ಷಿಪ್ತವೆಂದು ತೋರುತ್ತದೆ. 'ಪಂಪ ಭಾರತ'ದ ೧೪ನೆಯ ಆಶ್ವಾಸದ ಸಂಬಂಧಪಟ್ಟ ಗದ್ಯ ಪದ್ಯಗಳೊಡನೆ ಹೋಲಿಸಿರಿ. ಇದು ಕವಿರನ್ನಕೃತವೋ ಅನ್ಯಕೃತವೋ ಎಂದು ನಿರ್ಧರಿಸುವುದು ಬೇರೆ ಮೂಲಮಾತೃಕೆಗಳು ಸಿಕ್ಕುವ ತನಕ ಸಾಧ್ಯವಾಗಲಾರದು.]*

ವ॥ ಕರ್ಣನ ಕಳೇಬರವನ್ನು ತಬ್ಬಿಕೊಂಡು, ಮಗನ ಹೆಣವನ್ನೆ ಕಂಡ ತಾಯಿಯಂತೆ ಪ್ರಲಾಪಿಸುವ ತನ್ನ ತಾಯಿಯನ್ನು ನೋಡಿ, ಬೆರಗಾಗಿ ಇದೇನೆಂದು ಧರ್ಮರಾಜನು ಕೇಳಲಾಗಿ -

೨೧. "ಧರ್ಮಪುತ್ರಾ, ಸೂರ್ಯನಿಂದ ಕರ್ಣನನ್ನೂ, ಯಮಧರ್ಮನಿಂದ ನಿನ್ನನ್ನೂ, ವಾಯುದೇವನಿಂದ ಭೀಮನನ್ನೂ, ಇಂದ್ರನಿಂದ ಅರ್ಜುನನ್ನೂ, ನಾನು ಹೆತ್ತೆನು. ಕರ್ಣನು ನನ್ನ ಚೊಚ್ಚಲ ಮಗನು, ನಿಮ್ಮೆಲ್ಲರಿಗೆ ಅಣ್ಣನು. ನಿಮ್ಮ ಮೇಲಿನ ಮೋಹದಿಂದ ಈ ವಿಷಯವನ್ನು ನಾನು ಮುಚ್ಚಿಟ್ಟುಕೊಂಡಿದ್ದು, ಅವನನ್ನು ನಾನೇ ಕೊಂದೆನು."

ವ॥ ಎಂದು ಕುಂತಿ ಹೇಳಿದಳು. ಪಾಂಡವರು ತುಂಬ ನೊಂದುಕೊಂಡು ಹೀಗೆಂದರು -

೨೨. "ನಿನ್ನ ಚೊಚ್ಚಲಮಗನೆಂದೂ ನಮಗೆಲ್ಲ ಅಣ್ಣನೆಂದೂ ಮೊದಲೆ ನೀವೇಕೆ ಹೇಳಲಿಲ್ಲ ತಾಯಿ ? ಹೇಳಿದ್ದರೆ ನಮ್ಮ ಈ ಹಿರಿಯಣ್ಣನಿಗೆ ಸಾಮ್ರಾಜ್ಯವನ್ನು ಒಪ್ಪಿಸಿ, ಅವನಿಗೆ ವಿಧೇಯರಾಗಿ ನಾವೆಲ್ಲ ಸುಖದಿಂದ ಇರುತ್ತಿರಲಿಲ್ಲವೆ ? ಅನ್ಯಾಯ ಮಾಡಿಬಿಟ್ಟಿರಿ." ಹೀಗೆಂದು ಕುಂತಿಯನ್ನು ಆಕೆಯ ಮಕ್ಕಳು ಆಕ್ಷೇಪಿಸಿದರು.

ವ॥ ಹೀಗೆ ಶೋಕದಲ್ಲಿ ಮುಳುಗಿದ ಪಾಂಡವರಿಗೆ ಅವತಾರಪುರುಷನಾದ ಕೃಷ್ಣನು ಅನೇಕ ದೃಷ್ಟಾಂತಗಳೊಡನೆ, "ಕ್ಷತ್ರಿಯ ಧರ್ಮವಿರುವುದೇ ಹೀಗಲ್ಲವೆ ?" ಎಂದು ತಿಳಿಸಿ, "ಮನೋವ್ಯಥೆಯನ್ನು ಬಿಟ್ಟು, ಸಂಸಾರ ಸ್ವರೂಪವನ್ನು ತಿಳಿದು ಸಹಿಸಿಕೊಳ್ಳಿ"

ಎಂದು ಶೋಕಪರಾಯಣರಾದ ಪಾಂಡುನಂದನರ್ಗೆ ಕಾರಣಪುರುಷೋತ್ತಮ ನನೇಕದೃಷ್ಟಾಂತಗಳನೆ ಪೇಳ್ದು ಕ್ಷತ್ರಿಯಧರ್ಮಮಿಂತುಟೆ ವಲಮೆಂದು ಮನಃಕ್ಷತಂಬಿಡಲ್ವೇಡಿ ಸಂಸಾರಸ್ವರೂಪಮನಱಿದು ಸೈರಿಸುವುದೆಂದಱಿಪಿ ಸಂಬೋಧಿಸೆ ಸಮಾಧಾನಚಿತ್ತರಾಗಿ ವಿಧಿ ಪೂರ್ವಕದಿಂ ದುರ್ಯೋಧನಪ್ರಭೃತಿಗಳಪ್ಪ ಪಾರ್ಥಿವರ ಪೆಣಂಗಳನೊಂದಾಗೊಟ್ಟಿ ಕರ್ಣನ ಕಳೇಬರಮಂ ತರಿಸಿ ಇನಿಬರ ಕಳೇಬರದ ಮೇಲಿರಿಸಿ ಚಂದನಾದಿಸುರಭಿದ್ರವ್ಯಂಗಳಿಂ ಸಂಸ್ಕಾರಿಸಿದಿಂಬಟಿಕೆ ಕರ್ಣಂಗೆ ಕರ್ಣಸ್ಥಳಿಯೆಂಬ ತೀರ್ಥಮಂ ಮಾಡಿ ಜಲದಾನಾದಿ ಪರೋಕ್ಷಲೋಕಕ್ರಿಯೆಗಳಂ ನಿರ್ವರ್ತಿಸಿ ತದನಂತರಂ ಕೊಂತಿಯುಂ ಗಾಂಧಾರಿಯುಂ ಧೃತರಾಷ್ಟ್ರನುಂ ಪಾಂಡವರನೊಡಂಬಡಿಸಿ ಪರಮಪಾವನಮಪ್ಪ ತಪೋವನಮ ನಾಶ್ರಯಿಸಿದರ್ -

ಇತ್ತಲ್ ಧರ್ಮನಂದನಂ ಮುಕುಂದಂಗೆ ಕಯ್ಯಂ ಮುಗಿದು

ಇನಿತೊಂದುಗ್ರಸಮಸ್ತಭಾರತಮಹಾಭಾರಾತಿಯುದ್ಧಂ ಮುಕುಂ ।
ದ ನಿಜಾನುಗ್ರಹದಿಂದಮಾಯ್ತು ಕಿಱಿಯಂ ಪಾರ್ಥಂ ಮಹೀಮೋಹಮಿ ॥
ಲ್ಲೆನಗೀತಂ ಕುರು [ಯುದ್ಧ] ಲಬ್ಧಜಯನೀ ಭೀಮಂಗೆ ನೀಂ ಪಟ್ಟಬಂ ।
ಧನಮಂ ಮಾಳ್ಪುದದರ್ಕೆ ಹಸ್ತಿನಪುರಪ್ರಸ್ಥಾನಮಂ ಮಾಡುವಂ ॥೨೩॥

ಎಂಬುದುಂ ಭೀಮಂಗೆ ಪಟ್ಟಬಂಧಮಂ ಮಾಳ್ಪುದೆಂದು ವಾಸುದೇವಂ ಮುಂತಾಗಿ ಸಹದೇವಂ ನಿರೂಪಿಸಿದ ಶುಭಮುಹೂರ್ತದೊಳ್ ಹಸ್ತಿನಪುರಮಂ ಪೊಕ್ಕು

ಎಂದು ಬುದ್ಧಿ ಹೇಳಿದ ಮೇಲೆ ಅವರು ಸಮಾಧಾನ ಮಾಡಿಕೊಂಡು ವಿಧಿವತ್ತಾಗಿ ದುರ್ಯೋಧನನೆ ಮೊದಲಾದ ರಾಜರ ಕಳೇಬರಗಳನ್ನು ಒಟ್ಟಾಗಿ ಸೇರಿಸಿ, ಕರ್ಣನ ದೇಹವನ್ನು ತರಿಸಿ ಇವೆಲ್ಲವುಗಳ ಮೇಲೆ ಇಟ್ಟು, ಶ್ರೀಗಂಧ ಮುಂತಾದ ಸುಗಂಧ ದ್ರವ್ಯಗಳನ್ನು ಲೇಪಿಸಿ (ಅಗ್ನಿ) ಸಂಸ್ಕಾರ ಮಾಡಿದರು. ಕರ್ಣನಿಗಾಗಿ ಕರ್ಣಸ್ಥಳಿಯೆಂಬ ತೀರ್ಥವನ್ನು ನಿರ್ಮಿಸಿ, ತರ್ಪಣೋದಕ ಮೊದಲಾದ ಕರ್ಮಗಳನ್ನೂ ನೆರವೇರಿಸಿದರು. ಬಳಿಕ ಕುಂತಿಯೂ, ಧೃತರಾಷ್ಟ್ರ ಗಾಂಧಾರಿಯರೂ ಪಾಂಡವರನ್ನು ಒಡಂಬಡಿಸಿ ಪವಿತ್ರವಾದ ತಪೋವನಕ್ಕೆ ಹೊರಟುಹೋದರು.

ಇತ್ತ ಧರ್ಮರಾಜನು ಕೃಷ್ಣನಿಗೆ ಕೈಮುಗಿದು

೨೩. "ಮುಕುಂದನೇ, ಇಷ್ಟೊಂದು ಪ್ರಚಂಡವಾದ ಸಮಸ್ತಭಾರತದ ಮಹಾಯುದ್ಧವು ನಿನ್ನ ಅನುಗ್ರಹದಿಂದ ನಮಗೆ ಜಯಪ್ರದವಾಯಿತು. ಅರ್ಜುನನು ಕಿರಿಯನು. ನನಗೆ ರಾಜ್ಯಮೋಹವಿಲ್ಲ. ಈ ಯುದ್ಧದಲ್ಲಿ ವಿಜಯವನ್ನು ಸಾಧಿಸಿದ ಈ ಭೀಮನಿಗೆ ನೀನು ಪಟ್ಟವನ್ನು ಕಟ್ಟು. ಅದಕ್ಕಾಗಿ ನಾವೀಗ ಹಸ್ತಿನಪುರಕ್ಕೆ ಹೋಗೋಣ."

ವ॥ ಎಂದು ಹೇಳಲಾಗಿ ಭೀಮನಿಗೆ ಪಟ್ಟಾಭೀಷೇಕ ಮಾಡಲೆಂದು ಸಹದೇವನು ತಿಳಿಸಿದ ಶುಭಮುಹೂರ್ತದಲ್ಲಿ ಕೃಷ್ಣನೇ ಮೊದಲಾದವರೆಲ್ಲರೂ ಹಸ್ತಿನಪುರಕ್ಕೆ ಬಂದು-

ದೆಸೆಯಂ ತೆಕ್ಕನೆ ತೀವೆ ತಾಟಿತಮಹಾಭೇರೀರವಂ ವಿಪ್ರರೆ ।
ಗ್ದೆಸೆಯೊಳ್ ವೇದನಿನಾದದಿಂ ಪರಸೆ ಪಂಕೇಜಾಕ್ಷಿಯರ್ ಕೂಡಿ ಸಂ ॥
ತಸದಿಂ ಸೇಸೆಯನಿಕ್ಕೆ ಪಾಂಡವಬಲಪ್ರಾಕಾರವೀರಂಗೆ ಸಾ ।
ಹಸಭೀಮಂಗೆ ಮನೋಮುದಂ ಬೆರಸು ಕೃಷ್ಣಂ ಕಟ್ಟಿದಂ ಪಟ್ಟಮಂ ॥೨೪॥

ಭೀಮಸೇನಂಗೆ ಪಟ್ಟಮಂ ಕಟ್ಟಿ ಹಸ್ತಿನಪುರದೊಳ್ ತಮ್ಮತ್ಮಯ್ವರುಂ ಹಿಮಸೇತು ವರಂ ಮಹಾಮಂಡಲಿಕರಿಂ ಬೆಸಕೆಯ್ಸಿಕೊಂಡು ಸುಖದಿ ರಾಜ್ಯಂಗೆಯ್ಯುತ್ತಿರ್ದರ್.

ಗದ್ಯ॥ ಇದು ಸಮಸ್ತಭುವನವಲ್ಲಭಜನಾಶ್ರಯಂ ಶ್ರೀಪೃಥ್ವೀವಲ್ಲಭಂ ಮಹಾರಾಜಾಧಿರಾಜಪರಮೇಶ್ವರಂ ಪರಮಭಟ್ಟಾರಕಂ ಶ್ರೀಸತ್ಯಾಶ್ರಯ ಕುಲತಿಲಕಂ ಶ್ರೀಮದಾಹವಮಲ್ಲದೇವಶ್ರೀಪಾದಕಲ್ಪಾದಪಚ್ಛಾಯಾಶ್ರಯಾ ಸನ್ನವರ್ತಿ ಕವಿಚಕ್ರವರ್ತಿಕವಿರನ್ನವಿರಚಿತಮಪ್ಪ ಶ್ರೀಸಾಹಸಭೀಮವಿಜಯದೊಳ್ ಭೀಮಸೇನ ಪಟ್ಟಾಭಿಷೇಕವರ್ಣನಂ ದಶಮಾಶ್ವಾಸಂ ಸಂಪೂರ್ಣಂ

ಅಂತು ಆಶ್ವಾಸ ೧೦ಕ್ಕಂ ರನ್ನಗದಾಯುದ್ಧಂ
ಸಂಪೂರ್ಣಂ

**॥ಮಂಗಳ ಮಹಾಶ್ರೀ॥**

೨೪. ಮಹಾಭೇರಿಗಳ ಧ್ವನಿಯೂ ಬ್ರಾಹ್ಮಣರ ವೇದಘೋಷವೂ ಎಂಟೂ ದಿಕ್ಕುಗಳನ್ನು ತುಂಬುತ್ತಿರಲಾಗಿ, ಕಮಲಮುಖಿಯರೆಲ್ಲ ಸೇರಿ ಸೇಸೆಯಿಡಲಾಗಿ, ಪಾಂಡವಬಲಕ್ಕೆ ಕೋಟೆಯೆನಿಸಿಕೊಂಡ ಸಾಹಸಭೀಮನಿಗೆ ಕೃಷ್ಣನು ಸಂತೋಷದಿಂದ ಪಟ್ಟವನ್ನು ಕಟ್ಟಿದನು.

ವ॥ ಭೀಮಸೇನನಿಗೆ ಪಟ್ಟವನ್ನು ಕಟ್ಟಿ ಹಸ್ತಿನಪುರದಲ್ಲಿ ಪಾಂಡವರು ಐವರೂ ಹಿಮಾಚಲದಿಂದ ಕನ್ಯಾಕುಮಾರಿವರೆಗಿನ ಮಹಾಮಂಡಲಿಕರಿಂದ ಸೇವೆ ಮಾಡಿಸಿಕೊಂಡು ಸುಖದಿಂದ ರಾಜ್ಯಭಾರ ಮಾಡುತ್ತಿದ್ದರು.

# ಅನುಬಂಧ ೧

## ಪದ್ಯಗಳ ಅಕಾರಾದಿ

# ಅನುಬಂಧ - ೨

## ಶಬ್ದಾರ್ಥ ಕೋಶ

ಅನಂತ -೧, ಅಪಾರ; ಅಪರಿಮಿತ
೨. ಆದಿಶೇಷ ೧-೧

ಅಗುರ್ವು - ಭೀಕರತೆ ; ಭಯಂಕರತೆ ೨-೮ವ

ಅಜಾತಶತ್ರು - ಧರ್ಮರಾಜ ೬-೨೪ವ

ಅಖಿಲ್ಯ -ಹೇಡಿ ೭-೨೪

ಅಟ್ಟಾಸುರ - ಅತಿಭಯಂಕರ ೮-೨

ಅಡರ್ಪು-ಆಸರೆ; ಆಧಾರ ೩-೭೮

ಅಡ್ಡಗವಿತೆ-ವಕ್ರ ಕವಿತ್ವ ೪-೪೨

ಅಣುಗಾಳ್-ಆಪ್ತಸೇವಕ ೨-೧೦ವ

ಅನುಶಮ-ಕಳವಳ ೧-೫೬

ಅನುಸಮ -ಅನ್ವರ್ಥ ೮-೨೧

ಅನ್ವಾಯ-ವಂಶ ೭-೯

ಅಭಿಯೋಗ-ಆಸಕ್ತಿ ೧-೫೩

ಅಭಿವಂದಿತಾರ್ಥ-ಪೂಜ್ಯ ೭-೫೯

ಅರಿಯ-ಅಸಾಧ್ಯ ೯-೨೮

ಅಲಂಪು-ಅಕ್ಕರೆ ; ಪ್ರೀತಿ ೪-೫೧

ಅಲೆ-ಪೀಡಿಸು ೮-೫೩

ಅವಗಡಿಸು-ಹಿಯಾಳಿಸು; ಧಿಕ್ಕರಿಸು ೭-೧೪

ಅವತಂಸ-ಕಿವಿಯ ಆಭರಣ; ಕರ್ಣಪೂರ ೪-೭೨

ಅವನಿಪ-೧, ಅರಸು ; ರಾಜ. ೨. ಬೇಡಿಕೊಳ್ಳುವ ೧-೧೫

ಅವಷ್ಟಂಭ-ಆಶ್ರಯ ; ಅವಲಂಬನ ೪-೧೯ವ

ಅಶನಿ-ವಜ್ರಾಯುಧ ೩-೪

ಅಸಹಾಯ-೧, ನೆರವಿಲ್ಲದವನು, ೨, ಸಹಾಯದ ಅಪೇಕ್ಷೆಯಿಲ್ಲದವನು ; ಸ್ವಯಂಸಮರ್ಥ ೩-೪೫

ಅಸುಮೋಕ್ಷ-ಸಾವು ; ಮರಣ ೫-೩೧

ಅಸೃಗ್ಜಲ-ನೆತ್ತರು ೬-೩೬

ಅಸ್ರಾಂಬು-ನೆತ್ತರು ೮-೧೮

ಅಹರ್ಪತಿ-ಸೂರ್ಯ ೫-೩೨

ಅಳ್ಕಿಸು-ಆರಗಿಸು; ಜೀರ್ಣಿಸಿಕೊಳ್ಳು ೮-೫

ಅಱಗುಲಿ-ಧರ್ಮಘಾತಕಿ ೯-೭

ಅಱಮಗ-ಧರ್ಮರಾಜ ೭-೬೨

ಅಟ್ಟಾಡು-ನಾಶವಾಗು ೪-೬೫

ಆಟಿಸು-ಬಯಸು ೧-೩೬

ಆಯಸಂಬಡು-ಕಳವಳಿಸು ೯-೨೦ವ

ಆಳ್-ಬಂಟ ; ಶೂರ ೨-೨೧

ಇಂಗಳ - ಬೆಂಕಿ ; ಅಗ್ನಿ ೪-೫೧

ಇಂಬುಕೆಯ್-ಒಡಂಬಡು ೧-೫೬

ಉಪಪತ್ತಿ-ತರ್ಕ ; ಯುಕ್ತಿ ೪-೮

ಉರ್ದು-ಉಜ್ಜು ; ತಿಕ್ಕು ೩-೧೨

ಉಳ್ಕು-(ಮಿಂಚಿನಂತೆ) ಹೊಳೆ ೮-೧೨

ಎಕ್ಕಟಿಗಾಳೆಗ-ದ್ವಂದ್ವಯುದ್ಧ ೭-೬೯

ಎಕ್ಕತುಳ-ದ್ವಂದ್ವಯುದ್ಧ ೭-೩

ಎಸಗು-ಸಾಧಿಸು ; ನೆರವೇರಿಸು ೫-೩೩

ಎಱೆವೆಸ-ಸ್ವಾಮಿಕಾರ್ಯ ೨-೨೪

ಏಕಕುಂಡಲ-ಬಲರಾಮ ೫-೫೭

ಏವ-ವ್ಯಥೆ ೮-೫೭

ಒಗು-ತೊರೆ ; ತ್ಯಜಿಸು ೫-೧೦

ಒಸೆ-ಮೆಚ್ಚು ೨-೧೫

ಒಳ್ಪಿಕೆಯ್-ಒಳಿತುಮಾಡು ; ಉಪಕಾರಮಾಡು ೩-೬೧

ಕಟ್ಟುಕಡೆ-ಮರುಗು ; ಕಳವಳಿಸು ೪-೪೪ವ

ಕಯ್ಕೊಳ್-ಒಡಂಬಡು ೪-೮

ಕಯ್ಗೆಮಾಡು-೧, ಸ್ವಾಧೀನಪಡಿಸಿಕೊಳ್ಳು ೬-೧,

೨. ಸೋಲಿಸು ೬-೩೯
ಕರವೇಟೆ-ಮಹಾಹೇಡಿ ೩-೪೩
ಕಸವರ-ಧನ ; ಸಂಪತ್ತು ೫-೨೨
ಕಱಂಗು-ಕರಿದಾಗು ; ಕಪ್ಪಾಗು ೭-೨೭
ಕಳೆಪು-ಕೊಲ್ಲಿಸು ; ಸಾಯಿಸು ೩-೬೮
ಕಟಿವು-ಪರಾಭವ ; ದುಸ್ಥಿತಿ ೧-೨೪
ಕಾನೀನ-ಕನ್ಯಾಪುತ್ರ; ಕರ್ಣ ೩-೬೬
ಕಿಂಶುಕ-ಮುತ್ತುಗ ೮-೧೭
ಕೀನಾಶ-ಯಮ ೮-೪೯
ಕೀಲಾಕ್ಷಿ-ಉರಿಗಣ್ಣು ; ಕೆಂಗಣ್ಣು ೭-೩೦
ಕೀಟುಗ್ಗೊಕ್ಕು-ಹೀನತನ; ಕೀಳುಭಾವನೆ ೭-೪೫
ಕುಲಾಲ-ಕುಂಬಾರ ೮-೨೦ವ
ಕುಜೆದಜೆ-ಚೂರುಚೂರು ; ಛಿನ್ನವಿಛಿನ್ನ ೩-೧೦
ಕೋಣೆ-ಸಂದು ; ಮೂಲೆ ೬-೨೧
ಕೋವರಚಕ್ರ-ತಿಗುರಿ ೮-೨೪
ಕೋಟುಬ್ - ತಂಪು ೮-೩೨
ಕೋಟುಮೃಗ-ಕ್ರೂರಮೃಗ ೨-೪೭
ಕ್ರೋಡ-ವರಾಹ ೧-೬
ಕ್ಷಮಾಧರ-ಬೆಟ್ಟ ; ಪರ್ವತ ೧-೫೨
ಗಳಿಯಿಸು-೧, ಇಳಿಬೀಳು ; ಜೋಲು ೨. ಸುರಿ; ಸ್ರವಿಸು ೧-೬೭, ೩. ಕಳಚಿ ಬೀಳು ೬-೩೨ವ
ಗಾಳು-ನಾಡಾಡಿ ; ಕ್ಷುದ್ರ ೨-೮ವ
ಜತುಗೇಹ-ಅರಗಿನ ಮನೆ ೭-೪೧
ಜಪಾಕುಸುಮ-ದಾಸವಾಳದ ಹೂ ೮-೩
ಜಾತವೇದೋಜಾತೆ-ಅಗ್ನಿಪುತ್ರಿ ; ದ್ರೌಪದಿ ೮-೬೧ವ
ಜಾತ್ಯಂಧ-ಹುಟ್ಟುಗುರುಡ ೪-೧೬
ತಪನಸುತ-ಸೂರ್ಯಪುತ್ರ ; ಕರ್ಣ ೨-೨೦
ತವಿಲ್-ಕುಂದು ; ಕುಗ್ಗು ೯-೩
ತವು-ಮುಗಿದುಹೋಗು ; ತೀರು ೪-೩೮
ತಳವೆಳಗಾಗು-ದಿಗಿಲುಗೊಳ್ಳು ; ದಿಕ್ಕು ತಿಳಿಯದಾಗು ೯-೧೬
ತಾರ-ಬೆಳ್ಳಿ ೧೦-೫
ತೀರ್-ಸಾಧ್ಯವಾಗು ೧೦-೯
ತೆಲ್ಲಟಿಗೆ-ಉಡುಗೊರೆ ; ಕಾಣಿಕೆ ೨-೧೫
ತೇರಸಿ-ತ್ರಯೋದಶಿ ೯-೩೭
ತೊದಳ್-ಹುಸಿ ; ಸುಳ್ಳು ೨-೬
ದಂದಶೂಕ-ಹಾವು ; ಸರ್ಪ ೫-೩೭ವ
ದರ್ವೀಕರ-ಹುಟ್ಟು ಹಿಡಿದವ; ಅಡುಗೆಭಟ್ಟ ೩-೩೪
ದೀರ್ಘಸೂತ್ರ-ತುಂಬ ತಡವಾಗಿ ಕೆಲಸ ಮಾಡುವವನು ೯-೨೫
ದುರೋದರ-ಜೂಜು ೬-೩೦
ದುರ್ಣಯ-ದುರಾಚಾರ ; ದುಷ್ಕೃತ್ಯ ೬-೧೦
ನಟ-(ತಾಂಡವ) ಶಿವ ೭-೩೦
ನಾಟ್ಕಡಿ-ನಾಡಿನ ಸೀಮೆ ೭-೩೫
ನಿಕಷ-ಒರೆಗಲ್ಲು ೧-೪೭
ನೆಟಿ-೧. ಸಮರ್ಥನಾಗು ೩-೪೭.
೨. ಮರ್ಮಸ್ಥಾನ, ೩. ಸಮೃದ್ಧಿ ೧-೧೮
ನೇರ್ಪಡು-ಹೊಂದಿಕೆ; ಹೊಂದಾಣಿಕೆ ೪-೧೨
ಪಣ್ಣು-ರಚಿಸು ; ನಿರ್ಮಿಸು ೪-೫೫
ಪದುಳಂ-ನೆಮ್ಮದಿಯಾಗಿ ೨-೧೩
ಪದ್ಮಾಸನ-೧. ಬ್ರಹ್ಮನ ಪೀಠ ೧-೩
೨. ತಾವರೆ ; ಕಮಲ ೧-೪
ಪಯಶ್ಚರ-ಜಲಚರ ೭-೨೦
ಪರಿಚ್ಛೇದ-ದೃಢನಿರ್ಧಾರ ; ಸಂಕಲ್ಪ ೫-೪೪ವ
ಪರಿಭಾಷೆ-ನಿಂದೆ ; ಕಲಂಕ ೬-೪೦
ಪಸವು-ಬರಗಾಲ ; ದುರ್ಭಿಕ್ಷ ೪-೬೦
ಪಜೆಪಡಿಸು-ಮುಗಿಸು; ಕೊನೆಗೊಳಿಸು ೭-೬೨
ಪಾರ್ಥಿವ-ರಾಜ ೩-೭೩
ಪಾಶಪಾಣಿ-ಯಮ ೩-೭೯
ಪಿಂಗಾಕ್ಷ-ದುರ್ಯೋಧನ ೫-೮ವ
ಪೀಟಿಗೆ-ಪೀಠ ; ಸಿಂಹಾಸನ ೫-೨೦
ಪುದುವಾಟುಬ್ - ಹೊಂದಿಕೊಂಡು ನಡೆ ;

ಕೂಡಿಕೊಂಡು ಬಾಳು ೪-೧೦
ಪುರುಷಕಾರ-ಪೌರುಷ ೩-೪೬
ಪೃಥುಳ-ಅಗಲವಾದ ; ವಿಶಾಲ ೭-೧
ಪೆಂಕುಳಿನಾಯ್-ಹುಚ್ಚನಾಯಿ ೩-೧೧
ಪೆಜಿಗಿಕ್ಕು-ಮೀರು; ಉಲ್ಲಂಘಿಸು ೧-೭೨
ಪೊಡರ್ಪು-ತೇಜಸ್ಸು ೧-೨೦
ಪೊರೆ-೧. ಅಂಟಿಕೊಳ್ಳು ; ಹೊಂದು ೧-೧೩. ೨. ಸಲಹು ; ಪೋಷಿಸು ೨-೧೧
ಪೊರ್ದು-ಹೊಂದು ; ಸೇರು ೯-೧೦
ಪೋರ್ಕುಳಿ-ಹೋರಾಟ ೮-೨೩ ವ
ಪ್ರತಾರಣ-ಮೋಸ ; ವಂಚನೆ ೩-೨೧
ಪ್ರಥಿತ - ಪ್ರಸಿದ್ಧ ; ವಿಖ್ಯಾತ ೭-೬೭
ಪ್ರಭಂಜನಸುತ - ವಾಯುಪುತ್ರ ; ಭೀಮ ೫-೫೮
ಬಗ್ಗಿಸು-ಜಬರಿಸು ; ಗದರಿಸು ೪-೪೬
ಬಾಯಟೆ-ಪ್ರಲಾಪಿಸು ೧೦-೧೩
ಬಿದು-ನೆತ್ತಿ; ಕುಂಭಸ್ಥಳ ೩-೪೮
ಬೀವು-ಹುರಿ ೫-೩ವ
ಬೆಲಗಸೆ-ಬೊಗಸೆ ೩-೨೮
ಮಟ್ಟಮಿರ್-ತೆಪ್ಪಗಿರು ; ಸುಮ್ಮನಿರು ೯-೩೩
ಮರವಾಳ್- ಮರದ ಕತ್ತಿ ೨-೨೩
ಮಱಸುಂದು -ಮೈಮರೆ ೫-೧೫
ಮಱುಗು-ಕುದಿ ೭-೨೧
ಮಱುವಕ್ಕ-ಎದುರಾಳಿ ; ಪ್ರತಿಸ್ಪರ್ಧಿ ೮-೫೩
ಮಟ್ಟಿಸು-ನಂದಿಸು ; ಆರಿಸು ೧-೫೭
ಮಟ್ಟು-ತೀರು ; ಮುಗಿ ೬-೧೭
ಮಾಯ್ದ-ದುಷ್ಟ ; ಕ್ರೂರ ೩-೮೨
ಮಾರ್ಕೊಳ್-ಎದುರಿಸು ; ವಿರೋಧಿಸು ೩-೧೬
ಮುರಿ-ಬಾಗು ; ಹೊರಳು ೪-೨೫
ಮೃಡರಿಪು - ಕಾಮ ; ಮನ್ಮಥ ೬-೪೩
ಮೃಷಾ - ಸುಳ್ಳು ; ಅಸತ್ಯ ೩-೨೩
ಮೆಯ್ಗರ್ಚು-ಸ್ನಾನಮಾಡು ೬-೧೧
ಮೊಗ್ಗು-ಸಾಧ್ಯ ; ಶಕ್ಯ ೨-೩೪
ರಸೆ-ಅಧೋಲೋಕ ; ಪಾತಾಳ ೬-೨೧
ಲಟಹ-ಸೊಬಗು ; ಶೋಭೆ ೮-೫೦
ವಂಚಿಸು - ತಪ್ಪಿಸು ೯-೨೪
ವಾಯುಸ್ಪೃಹ-ವಾಯುಪ್ರಿಯ; ಭೀಮ ೩-೭೨
ವಿಪರ್ಯಯ-ವ್ಯತ್ಯಾಸ ೪-೬೨
ಶಾಕ್ವರ-ವೃಷಭ ; ನಂದಿ ೯-೨
ಸಂಯುಗ-ಯುದ್ಧ ೪-೧೮
ಸಪ್ತಾರ್ಚಿ -ಅಗ್ನಿ ೬-೨೪
ಸಮಕೊಳಿಸು-ಏರ್ಪಡಿಸು; ಸಂಘಟಿಸು ೫-೪೫
ಸಮವಾಯ-ಒಪ್ಪಂದ ; ಸಂಧಿ ೧-೫೮
ಸವಳದೆ-ಬೆಳಗ್ಗೆ ; ಉದಯಕಾಲದಲ್ಲಿ ೩-೭೧
ಸಾಪತ್ನ-ದಾಯಾದ ೭-೯
ಸಾರೆ-ಸನಿಹ ; ಸಮೀಪ ೪-೨೬
ಸಿತಾಶ್ವ-ಅರ್ಜುನ ೭-೫
ಸೂದಕರ್ಮಿ-ಅಡುಗೆಭಟ್ಟ ೭-೩೬
ಸೆಡೆ-ಅಳುಕು ; ಬೆದರು ೭-೧೬
ಸೆರೆ-ನರ ; ರಕ್ತನಾಳ ೫-೩ವ
ಸ್ಮರಘಸ್ಮರ-ಕಾಮಾಂತಕ ; ಶಿವ ೨-೨೫
ಸ್ರೋತ-ಪ್ರವಾಹ ; ನದಿ ೪-೪೮
ಹತದೈವ-ದುರ್ದೈವಿ ; ದೈವಹೀನ ೯-೨೫
ಹಮ್ಮದ-ಮೂರ್ಛೆ ೨-೩೪
ಹರಿತ್-ದಿಕ್ಕು ೧೦-೮
ಹಲಿ-ಬಲರಾಮ ೩-೬೨
ಹವ್ಯವಹ-ಅಗ್ನಿ ೮-೪೭
ಹಟವಿಗೆ-ಧ್ವಜ ೬-೨೯ವ
ಹುತಾಶನ-ಅಗ್ನಿ ೧-೬೦
ಹುತಾಶನಮಿತ್ರ-ವಾಯು ೧೦-೨೧

